| | | | |
|---|---|---|---|
| ३७० | २२ | समभ्यमेत् | समभ्यसेत् |
| ३७२ | ३ | कथ | कथं |
| ३७३ | ५ | निदिष्टम | निर्दिष्टं |
| ३७४ | ४ | तदक्षग्स्तवितुर्वरेण्य | तदक्षरं तत्सवितुर्वरेण्यं |
| | ६ | महर्षिः | महर्षिः |
| ३७५ | १० | विण्णुं | विष्णुं |
| ३७८ | ८ | नानस्ति | नानास्ति |
| | १७ | वदाम | वदामः |
| ३८१ | १२ | तस्मात्वपेर्वोक्त | तस्मात्पूर्वोक्त |
| | २२ | दृष्टान्ताभामात् | दृष्टान्ताभावात् |
| ३८३ | ८ | जगद्भासि | जगद्भाति |
| | २१ | चेदहमग्र | चेदहमज्ञ |
| ३८५ | ६ | वार्चारम्भ | वाचारम्भ |
| | १२ | भावद्भूमायश्रान्ते | भावाद्भूयश्चान्ते |
| | १२ | उपोसहायं | उमासहायं |
| ३८६ | १८ | व्यावयारिक | व्यावहारिक |
| ३८७ | ९ | अपरिद्रहाः | अपरिग्रहाः |
| ३८८ | १९ | ज्ञानात्मकत्वज्ञान | ज्ञानात्मकत्वाज्ञान |
| ३९० | २५ | जीवेश्वयोः | जीवेश्वरयोः |
| ३९२ | ४ | द्वाजा | द्वावजा |
| ३९३ | १८ | मृद्द्रव्येण | मृद्द्रव्येण |
| | १९ | जगत्सव | जगत्सत्यत्व |
| ३९९ | ४ | अल्पत्वानलिनत्व | अल्पत्वामलिनत्व |
| ४०७ | २ | निखिलजजद्व्यापकत्वं | निखिलजगद्व्यापकत्वं |
| ४१५ | १२ | प्रळयकोल | प्रळयकाल |

---

# श्रीकरभाष्य-द्वितीयसम्पुटगताशुद्धशोधनपत्रिका

| पृ | पङ्क्तिः | अशुद्धम् | शुद्धम् |
|---|---|---|---|
| २ | २ | सणगुत्वादि | सगुणत्वादि |
| ३ | १० | जाकुसुमस्य | जपाकुसुमस्य |
| | १५ | दन्वितत्वात् | तदन्वितत्वात् |
| ४ | २४ | प्रति पतिगुणाश्रय | प्रतिगुणाश्रय |
| ८ | १० | अत्रेत्तरं | अत्रोत्तरं |
| १३ | ५ | ह्रत्वपरिमण्डला | ह्रस्वपरिमण्डल |
| ३१ | २ | बधर्म्यात् | वैधर्म्यात् |
| ३२ | ५ | निविशेष | निर्विशेष |
| ३४ | ४ | सदसदायो | सदसदाद्यो |
| | ५ | ज्ञातृत्व ाद्यपार | ज्ञातृत्वाद्यपरा |
| ३८ | १६ | सत्वासत्या दिकं | सत्वासत्वा दिकं |
| ४३ | ७ | पत्या दिना | इत्यादिना |
| ४८ | १४ | जगज्जाव | जगज्जीव |
| ४९ | ८ | स्वगत्कल्पना | जगत्कल्पना |
| | १४ | कल्पकत् | कल्पकम् |
| ५० | २० | संहितायामापि | संहितायामपि |
| ७४ | १६ | अपस्पृश्य | उपस्पृश्य |
| ७६ | १३ | भक्तं | भुक्तं |
| | १४ | ताविक | तान्त्रिक |
| | १७ | शक्रधारण | चक्रधारण |

| | | | |
|---|---|---|---|
| ८१ | ३ | गम्मस्त्मं | गम्यत्वं |
| | १० | लिङ्गेन | लिङ्गिने |
| ८५ | २१ | अष्टाधिकरण | नवाधिकरण |
| ९१ | २ | सैपानस्तमिता | सैषानस्तमिता |
| ९४ | १ | अवधिकरणम् | अवधिकरणं |
| १११ | १५ | (....) भागोजीवस्सविज्ञेयः | स चानन्त्याय कल्पते |
| ११९ | ३ | ज्वस्य | जीवस्य |
| १२४ | | ममात्म | ममात्मा |
| १३४ | १ | आत्नासौ | आत्माऽसौ |
| १३६ | ४ | मस्वा | मत्वा |
| १४७ | १२ | सवषां | सर्वेषां |
| १५७ | १५ | प्रकृता | प्रकृतौ |
| १७३ | ३ | मागण | मार्गेण |
| १७५ | १६ | ऽऽथैममेव | ऽऽथैनमेव |
| १७८ | १६ | त्किञ्चेह | किञ्चेह |
| १८३ | ३ | त्सनुशय | त्सानुशय |
| २६३ | २२ | उपसीत | उपासीत |
| ३०१ | २ | परसं | परमं |
| ३७२ | १५ | ज्ञानोपसर्जनत्व | ज्ञानस्योपसर्जनत्वं |
| ३७६ | १३ | तेदैक्षत | तदैक्षत |
| ३८७ | ९ | त्यागमधीयते | त्यागमभिधीयते |
| ३९३ | ८ | प्रकर्तितः | प्रकीर्तितः |
| ३९६ | १६ | ह्योऽनतो | ह्योऽनन्तो |
| ४२० | १८ | आविज्यं | आर्त्विज्यम् |
| ४६४ | ३ | तत्वापनोचित्य | तत्वज्ञानौचित्य |
| ४८६ | ६ | स्थिर्वेति | स्थितिर्वेति |
| | ९ | कर्यो | कार्यो |
| ४९१ | ४ | तसां | तासां |

| | | | |
|---|---|---|---|
| ४९५ | १० | नडीभ्यः | नाडीभ्यः |
| ५१५ | १ | शिय एवा | शिव एवा |
| ५१८ | १५ | स्यैवोस्यता | स्यैवोपास्यता |
| ५५६ | ८ | वो | वै |

॥ ಶ್ರೀಃ ॥

# ಅ ವ ತ ರ ಣಿ ಕಾ

## (ಪ್ರಥಮ ಸಂಪುಟ)

ಇದೊಂದು ಮಹತ್ತರವಾದ ಸಂತೋಷಕ್ಕೆ ಕಾರಣ : ಈ ಪ್ರಾಚ್ಯವಿದ್ಯಾಸಂಶೋಧನಾಲಯದಿಂದ ಈ ಶ್ರೀಕರಭಾಷ್ಯವು ಪ್ರಕಾಶಗೊಳಿಸಲ್ಪಟ್ಟಿದೆ. ಈ ಗ್ರಂಥವು ವೀರಶೈವದರ್ಶನ-ಪ್ರಕಾಶನ-ಪರವಾಗಿ ಕಾಣುತ್ತಲಿದೆ. ಈ ಮಹತ್ತರವಾದ ವೀರಶೈವ-ತತ್ತ್ವಶಾಸ್ತ್ರ-ಗ್ರಂಥದ ಕರ್ತೃಗಳು ಶ್ರೀಪತಿಪಂಡಿತಾಚಾರ್ಯವರ್ಯರೆನ್ನುವರು. ಇವರೋ ಅಂದರೆ– ಸಕಲಶಾಸ್ತ್ರಕೋವಿದರು ; ವೀರಶೈವ ಧರ್ಮಾಚಾರಾನುಷ್ಠಾನದಿಂದ ಪರಿಪೂತಾಂತಃಕರಣರು ; ಜಿತೇಂದ್ರಿಯರು ; ಅಗ್ನಿಸ್ತಂಭಕರು ; [1]ವೀರಶೈವಪಂಡಿತತ್ರಯರಲ್ಲಿ ಒಬ್ಬರು ; ತತ್ತ್ವಪ್ರಕಾಶನದಲ್ಲಿ ಸಿದ್ಧರ್ಷಿಗಳು ; ಸಿದ್ಧಹಸ್ತರು.

ವೈದಿಕವಾದ ಮತತ್ರಯಗಳಲ್ಲಿ ತಮ್ಮ ತಮ್ಮ ದರ್ಶನಾನುಗುಣವಾದ ಸ್ವಾನುಭವೋದ್ಗತವಾದ ವಿಷಯಗಳು ಹೇಗೆ ಪ್ರಮಾಣಪೂರ್ವಕವಾಗಿ ಉಪವರ್ಣಿಸಲ್ಪಟ್ಟವೆಯೋ ಹಾಗೆಯೇ ಈ ವೀರಶೈವ-ದರ್ಶನದಲ್ಲಿಯೂ ಬಸವಾದಿ-ಪ್ರಮಥಗಣಗಳಿಂದ ಉಪದಿಷ್ಟವಾದ ವಚನಶಾಸ್ತ್ರಾನುಸಾರಿಗಳಾದ ಅತ್ಯಾವಶ್ಯಕಗಳಾದ ಸಂಗತಿಗಳು ಈ ಭಾಷ್ಯದಲ್ಲಿ ಸ್ವಲ್ಪ ಉಪವರ್ಣಿಸಲಾಗಿವೆ ; ಎಂದು ಈ ಗ್ರಂಥದ ವಿಸ್ತೃತವಾದ ಉಪೋದ್ಘಾತದಿಂದ ಚೆನ್ನಾಗಿ ತಿಳಿಯುತ್ತದೆ.

---

[1] ಈ ಪಂಡಿತೋತ್ತಮನಾದ ಶ್ರೀಪತಿಪಂಡಿತಾಚಾರ್ಯನ ಪ್ರಮುಖ-ವೀರಶೈವ-ಪಂಡಿತತ್ರಯರಲ್ಲಿನ ಏಕತಮತ್ವವು ಅವನ ಮಹಿಮಾನುವರ್ಣನವೂ ಕೂಡ ಪಾಲ್ಕುರಿಕೆ ಸೋಮನಾಥಕೃತವಾದ ಆಂಧ್ರ ಬಸವಪುರಾಣದ ಸಪ್ತಮಾಶ್ವಾಸದಲ್ಲಿಯೂ ಹಾಗೂ ಅವನಿಂದಲೇ ರಚಿತವಾದ ಪಂಡಿತಾರಾಧ್ಯಚರಿತೆಯ ಪೀಠಿಕೆಯಲ್ಲಿಯೂ ಹಾಗೂ ಕಾಂಚೀ-ಶಂಕರಾರಾಧ್ಯಕೃತವಾದ ಸಂಸ್ಕೃತ-ಬಸವೇಶವಿಜಯದ ಪೀಠಿಕೆಯಲ್ಲಿಯೂ ಮತ್ತು ಗುಬ್ಬಿ ಮಲ್ಲಣಾರ್ಯಕೃತವಾದ ಭಾವಚಿಂತಾರತ್ನಾರಂಭಭಾಗದಲ್ಲಿಯೂ ಚೆನ್ನಾಗಿ ವಿಶದೀಕರಿಸಲ್ಪಟ್ಟಿದೆ. ಅಲ್ಲಿ ಭಾವಚಿಂತಾರತ್ನದ ಪದ್ಯವೊಂದನ್ನಿಲ್ಲಿ ಉದ್ಧರಿಸೋಣ :

ಹರಿಯನಜಭವಂಗೆ ವಂದನೆಗೆಯಿಸಿ ಶಿಖಿಯನಂ
ಬರದಲ್ಲಿ ಕಟ್ಟಿಯೂರ್ಧ್ವಾಕ್ಷಿಗಳ ಪಡೆದು ನಿ-
ಷ್ಠುರವಕ್ತ್ರಮಂಡಲೀವ್ರದ ದುರ್ಗುಣಗಳ ವೈಷ್ಣವವಿಪ್ರಜೈನರೆಂಬ ।
ವರವಾತಪಿತ್ತಮುಶ್ಲೇಷ್ಮಮುಂ ಕೆಡಿಸಿ ಕಂ-
ಕರಲೆಂಕ ಮಂಚಣ್ಣ ಶ್ರೀಪತೀಶ್ವರದೇವ
ಗುರುಮಲ್ಲಿಕಾರ್ಜುನಂ ಪಂಡಿತತ್ರಯವಾದರೆಮ್ಮ ಭವರೋಗಗಳಿಗೆ ॥

—ಭಾವಚಿಂತಾರತ್ನಂ— ಪೀಠಿಕಾ.

ಮಹಾನುಭಾವರೂ ಆಚಾರ-ವಿಚಾರ-ನಿಷ್ಠರೂ, ಜಗತ್ತಿನ ಉದ್ಧಾರೇಚ್ಛಾಕೃಪಾಲುಗಳೂ ಆದ ಮಹರ್ಷಿಗಳಿಂದ 'ಅಥಾತೋ ಬ್ರಹ್ಮಜಿಜ್ಞಾಸಾ'' ಇತ್ಯಾದಿಗಳಿಂದ ಯಾವ ದರ್ಶನಗಳು ಪ್ರಕಾಶ ಪಡಿಸಲ್ಪಟ್ಟವೋ ಮತ್ತೆ 'ಏಷ ಆದೇಶಃ ; ಏಷ ಉಪದೇಶಃ ; ಏಷಾ ವೇದೋಪನಿಷತ್' ಇತ್ಯಾದಿಗಳಿಂದ ಆ ವೇದಾರ್ಥಗಳ ವಿಸ್ತರಣದ್ವಾರಾ ಅಧ್ಯಾತ್ಮನಿರ್ಣಯವೇನು, ಅದರ ಸಂಪಾದನೆಯ ಮಾರ್ಗವೇನು ಈ ಯಾವುವು ಉಪವರ್ಣಿಸಲ್ಪಟ್ಟವೋ, ಹಾಗೆಯೇ ಲಿಂಗಾಂಗನಿಷ್ಠರಾದ ಶಿವಶರಣರಾದ ಆಚಾರ್ಯರಿಂದ (ವೀರಶೈವದರ್ಶನವಲ್ಲಿ) ಪರಬ್ರಹ್ಮನ ಅಣುವಿಗಿಂತ ಅಣುತೆಯೂ, ಮಹತ್ತಿಗಿಂತ ಮಹತ್ತೆಯೂ ಮತ್ತೆ ಅವನ ಸರ್ವವ್ಯಾಪಕತೆಯೂ, ಮಹಾಲಿಂಗಸ್ವರೂಪತೆಯೂ ವರ್ಣಿಸಲ್ಪಟ್ಟು ಷಡಧ್ವಾನುಸಾರಿಯಾದ ಸದಾಚಾರದಿಂದ ಗುರು-ಲಿಂಗ-ಜಂಗಮಸೇವಾಮಾರ್ಗಗಳಿಂದ ಈ ಜೀವನು ಆ ಪರಮಾತ್ಮನ ಅಭೇದರೂಪವಾದ ಸಾಮರಸ್ಯವನ್ನು ಹೊಂದುತ್ತಾನೆ ; ಎಂದು ವೀರಶೈವದರ್ಶನ-ತದಾಚಾರ-ವಿಚಾರನಿಷ್ಠಾ ವಿವರಗಳು ಚೆನ್ನಾಗಿ ಉಪಪಾದಿಸಲ್ಪಟ್ಟು ಅನುಗ್ರಹಿಸಲ್ಪಟ್ಟವು.

ಈ ಶಿವಾದ್ವೈತ-ದರ್ಶನವಲ್ಲಿ- ಷಟ್-ಸ್ಥಲಗಳು ಅಲ್ಲಿಯೇ ವಿಷಯವಿಭಾಗದಿಂದ ತಿಳಿಯಬಹುದಾದ ಏಕೋತ್ತರಶತಸ್ಥಲ, ಮೂವತ್ತಾರು ತತ್ತ್ವಗಳು ಪ್ರಮುಖವಾಗಿ ಕಂಗೊಳಿಸುತ್ತಲಿವೆ. ಇವುಗಳ ತಾತ್ತ್ವಿಕಪರಿಜ್ಞಾನಕ್ಕೆ ಅಷ್ಟಾವರಣ-ಪಂಚಾಚಾರಾನುಗುಣವಾದ ಧಾರ್ಮಿಕ-ಕರ್ಮಾನುಷ್ಠಾನವು ಅತ್ಯಾವಶ್ಯಕ. ಇಲ್ಲಿ ಮೊದಲ ಮೂರು ಸ್ಥಲಗಳಲ್ಲಿ ಜೀವಬ್ರಹ್ಮರ ಭೇದ (ದ್ವೈತ) ಮುಂದಿನ ಮೂರು ಸ್ಥಲಗಳಲ್ಲಿ ಸಾಮರಸ್ಯ (ಅಭೇದ ಅದ್ವೈತ) ಎಂಬುದು ವೀರಶೈವಾಭ್ಯುಪಗತವಾದ ದಾರಿ. ಆದ್ದರಿಂದಲೇ ಉಪಾಸನಾವಸ್ಥೆಯಲ್ಲಿ ಸಗುಣಬ್ರಹ್ಮೋಪಾಸನಪರರಾದ (ಇಷ್ಟಲಿಂಗೋಪಾಸನಪರರಾದ) ವೀರಶೈವರ- ಕೊನೆಯಲ್ಲಿ ಮೋಕ್ಷದಶೆಯಲ್ಲಿ ನಿರ್ಗುಣ-ಬ್ರಹ್ಮಾಂತರ್ವಿಲೀನರಾಗಿ (ಭಾವ-ಪ್ರಾಣ-ಲಿಂಗವಿಲೀನರಾಗಿ) ಆ ಸಾಮರಸ್ಯವನ್ನು (ಲಿಂಗಾಂಗ-ಸಾಮರಸ್ಯವನ್ನು) ಹೊಂದುತ್ತಾರೆ. ಇದೇನೇ ನಿರ್ಗುಣಬ್ರಹ್ಮೋಪಾಸನಪರರಾದ ಇತರರ ದರ್ಶನಾಪೇಕ್ಷೆಯಿಂದ ಈ ದರ್ಶನದಲ್ಲಿ ಕಾಣುವ ವೈಶಿಷ್ಟ್ಯ. ಈ ದರ್ಶನಾನುಯಾಯಿಗಳಲ್ಲಿ ಸಂಪ್ರದಾಯಶರಣರ ಗತಿಯೊಂದು ; ವಿಚಾರವಾದಿಗಳ ಗತಿ- ಮಗದೊಂದು.

ಇಲ್ಲಿ ಎಲ್ಲ ವಚನಶಾಸ್ತ್ರಾನುಸಾರಿಗಳೂ ಪರಮಶರಣಾವರಣಧಾರಣಧಿಷಣರೂ [1] 'ಇಹೈವ ತೈರ್ಜಿತಸ್ಸರ್ಗಃ ಯೇಷಾಂ ಸಾಮ್ಯೇ ಸ್ಥಿತಂ ಮನಃ' ಎಂಬ ವಚನಾನುಸಾರ ಲೋಕವ್ಯವಹಾರ ಸಂಗಿಗಳಾದರೂ ಜಿತೇಂದ್ರಿಯರೂ ಆಗಿ ಪರಬ್ರಹ್ಮವನ್ನು ಸಾಧಿಸುತ್ತಾ ಕರ್ಪೂರವು ಉರಿಯುತ್ತಾ ಉರಿಯುತ್ತಾ ಹೇಗೆ ಅಗ್ನಿಯಲ್ಲಿ ವಿಲೀನವಾಗುವುದೋ ಹಾಗೆಯೇ ಶೂನ್ಯದಲ್ಲಿ ವಿಲೀನರಾಗಿ ಮಹಾಲಿಂಗಸಂಗಿಗಳಾಗಿ ಬಸವೇಶ್ವರಾದಿ ಮಹಾಶರಣರ ಆಚಾರ-ವಿಚಾರಗಳಿಂದ ಅಭಿನ್ನವಾದ ದಾರಿಯಲ್ಲಿ ನಡೆಯುವವರಾಗಿ ಲಿಂಗಾಂಗ-ಸಾಮರಸ್ಯವನ್ನು ಹೊಂದುತ್ತಾರೆ. ಇದೇ ಅರ್ಥ ವೀರಶೈವ ಎಂಬ ಪದದಲ್ಲಿನ ವೀರಪದಕ್ಕೆ ಹೊಂದುತ್ತದೆಯೇ ವಿನಹ ಸಮಾಜ ವಿಚ್ಛೇದಕಾರಿಯಾದ ವೀರತ್ವವಾಗಲಿ ದುರ್ಭಾಷ್ಯಪ್ರಲಪಿತತ್ವಗಳಾಗಲಿ ಕುಪಂಡಿತತ್ವಗಳಾಗಲಿ ಅಲ್ಲ. ಇದೇ ಸತ್ಯವಾದ ವೀರಶೈವದರ್ಶನ. ಸ್ವಾನುಭವಾನುಗುಣವಾದ ಆಚಾರ-ವಿಚಾರಗಳಿಂದ ಸತ್ಯದರ್ಶನವಿಲ್ಲಾಗುವುದರಿಂದ ಈ ದರ್ಶನಕ್ಕೇನೆ ದರ್ಶನತ್ವವು ಯುಕ್ತ. ಇತರದರ್ಶನಗಳಲ್ಲಿ ಆಗಮ-ವಿಲೀನವಾದ ವಾದವಿವಾದಾತ್ಮಕವಾದ ಶಾಸ್ತ್ರಪದ್ಧತಿಯಲ್ಲಿ ವಾಗಾರಂಭಣ, ಶಬ್ದಸುಖತ್ವ, ಸ್ವೋಕ್ತಿಸಾಧನದಲ್ಲಿ ಆರ್ಭಟ, ಸಭ್ಯರ ಮೇಲೆ ಸ್ವಾಭಿಪ್ರಾಯದ ಹೇರಿಕೆಯ ವೈಭವದ ವಿಭವ- ಇವಿಷ್ಟೇ ಕಾಣಸಿಗುತ್ತವೆ.

---

1 ಭಗವದ್ಗೀತಾ- ಅಧ್ಯಾಯ. ೫, ಶ್ಲೋ. ಸಂ. ೧೯.

ಕೆಲವು ವೀರಶೈವರು– ಸ್ವಾತ್ಮವನ್ನು ವಂಚಿಸದವರಾಗಿ ಸರ್ವತ್ರ ಸಮದರ್ಶಿಗಳಾಗಿ, 'ಕಾಯಕ' ಮಾತ್ರವೇ ಪ್ರಧಾನವಾದ ಜೀವಿಕೆಯುಳ್ಳವರಾಗಿ, ಸತ್ಯ ಮತ್ತು ಗುರುವಿನಲ್ಲಿ ಸೇವಾ ವಿಚಾರತತ್ಪರರಾಗಿ, ಪಾಪದ ಹೊಗೆಯ ಕಿಟ್ಟವನ್ನು ತೊಳೆದು, ಅಕೃತಿಮಜೀವಿಗಳಾಗಿ : ಕೃತಿಮ ವಿದ್ವೇಷಿಗಳಾಗಿ ಅಲ್ಪವಾದ ಪಾಪಸಂಪರ್ಕದಿಂದಲೂ ವಿರಹಿತರಾಗಿ, ಜಗತ್ತಿನ ಆಡಂಬರವನ್ನು ಹುಲ್ಲಿಗಿಂತ ಕಡೆಯಾಗಿ ಕಾಣುತ್ತಾ– ನಿರಂಕುಶವಿಭೂತಿಗಳುಳ್ಳವರಾಗಿ, ಲಿಂಗಪ್ರಭಾವದಿಂದ ಸಂಚಿತ ಸ್ವಾತಂತ್ರ್ಯಪ್ರಭಾವವುಳ್ಳವರಾಗಿ ಶರಣಪ್ರವಣೈಕತತ್ಪರರಾಗಿ ಈ ಭೂಮಿಯನ್ನು ಪವಿತ್ರೀಕರಿಸುತ್ತಾರೆ.

ಮತ್ತೆ ಕೆಲವು ಅಜ್ಞರು– ತಮ್ಮನ್ನೊಬ್ಬರನ್ನೇ ವೀರಶೈವರೆಂದು ತಿಳಿದವರಾಗಿ, ಈ ಮುಂಚೆ ವಿವರಿಸಿದ ಪಾರಿಗೆ ವಿಪರೀತವಾದ ನಡೆಯುಳ್ಳವರಾಗಿ, ೧೨ ನೆಯ ಶತಮಾನದಲ್ಲಿ ಅವತರಿಸಿದ ಬಸವಾದಿಶಿವಶರಣರಿಂದ ಪರಿಪೂರ್ಣ-ಶುದ್ಧ-ವೀರಶೈವ-ಸಾಮಾಜಿಕ-ನೈತಿಕ-ಧಾರ್ಮಿಕ-ಧರ್ಮ-ಸಂರಕ್ಷಣೆಗಾಗಿ ಸಂಸ್ಥಾಪಿಸಲ್ಪಟ್ಟ ನಿಸ್ವಾರ್ಥ-ಸೇವಾಕುಟೀರಗಳನ್ನು, ಸ್ವಾರ್ಜಿತವಾದ ತಮ್ಮದೇ ಆದ ವೈಭವಾಡಂಬರಪ್ರದರ್ಶನಕ್ಕಾಗಿ ಮೀಸಲಾದವುಗಳನ್ನಾಗಿ ತಿಳಿದವರಾಗಿ, ಕುಟಿಲ-ಕುಹಕ-ಕೂಟ ತಂತ್ರಗಳಿಂದ ಅವುಗಳನ್ನು ಆಕ್ರಮಿಸಿ, ತಮ್ಮ ಉದರಂಭರಣೈಕಪ್ರವೀಣರಾಗಿ ಬಂಧು-ಬಾಂಧವ-ಮಿತ್ರ ಪರಿವಾರಜನರಿಂದಲೂ, ಹೊಗಳುಭಟ್ಟರಿಂದಲೂ ಸುತ್ತುವರೆಯಲ್ಪಟ್ಟು, ದುರ್ಗರ್ವಾಹಂಕಾರಪರಿಪೂರ್ಣಮನಸ್ಕರಾಗಿ ಮಹದಾಡಂಬರಪ್ರದರ್ಶನಗಳಿಂದ ಸರ್ವದೇಶ-ಸರ್ವಕಾಲ-ಸರ್ವಾವಸ್ಥೆಗಳಲ್ಲಿಯೂ ತಮ್ಮನ್ನೊಬ್ಬರನ್ನೇ ಈ ಅಖಿಲಜಗತ್ಸ್ವಾಮಿಗಳನ್ನಾಗಿ ತಿಳಿದು, ತಮ್ಮ ಜಗದ್ಗುರುತ್ವಪ್ರಕಟಣಪ್ರವೀಣ ಚತುರರಾಗಿ ತಮ್ಮಿಂದ ಮಾಡಲ್ಪಟ್ಟ ತಮ್ಮಿಂದಲೇ ನಿರ್ದಿಷ್ಟವಾದ ಕುತ್ಸಿತಾಚಾರವಿಚಾರಗಳಿಂದ ಮುಗ್ಧರಾದ ಸಾಮಾಜಿಕಜನರನ್ನು ಚೇದಿಸಿ, ಸಾಮಾಜಿಕವಾದ ಧಾರ್ಮಿಕ-ನೈತಿಕ-ಸಂಹಿತೆಯನ್ನು ತಿರುವುಮುರುವು ಮಾಡಿ, ತಮ್ಮದೇ ಆದ ಹೊಸಹೊಸ ಆಚಾರ-ವಿಚಾರ-ಪ್ರವೃತ್ತರಾಗಿ ಯಾವಾಗಲೂ ಎಲ್ಲೆಲ್ಲೂ ತನ್ನನ್ನೇ ಮಹಾಭಕ್ತರನ್ನಾಗಿ ಅನುಕರಿಸಿ ಪ್ರದರ್ಶಿಸುತ್ತಾ– ಅರ್ಥವಿಷಯೈಕಪ್ರವೀಣರಾಗಿ ಜಗತ್ತಿನಲ್ಲಿ ತುಂಬಿರುತ್ತಾರೆ. ಈ ವಿವರಣ-ವಿವಾದಗಳನ್ನೊತ್ತಟ್ಟಿಗಿಡುವಾ !

ಯಾವ ಕಾರಣದಿಂದ ಶೈವದರ್ಶನ-ವಿಭಾಗಗಳಲ್ಲಿ ಪ್ರಸಿದ್ಧವಾದ ಕಾಶ್ಮೀರೀಯ-ಪ್ರತ್ಯಭಿಜ್ಞಾ-ಲಕುಲೀಶ-ಪಾಶುಪತ-ಶಿವಾದ್ವೈತ-ನಿಂಬಾರ್ಕಾದ್ಯವಾಂತರ-ದರ್ಶನಗಳ ಪಾರಸ್ಪರಿಕಭೇದವು ಈ ಗ್ರಂಥದಲ್ಲಿ ಉದ್ಧರಿಸಲ್ಪಟ್ಟವೆಯೋ ಮತ್ತೆ ಯಾವ ಕಾರಣದಿಂದ ಅಲ್ಲಿಯೇ ಶಿವಾದ್ವೈತ-ದರ್ಶನೋಪಬೃಂಹಣಾತ್ಮಕವಾದ-ಸಂಹಿತಾ-ಆರಣ್ಯಕ-ಉಪನಿಷತ್-ವಾಕ್ಯಗಳ ಸ್ವರಸಾಂಶಗಳು ಪುನಃಪುನಃ ಉದ್ಧರಿಸಿ ಪ್ರಕಟಿತವಾಗಿವೆಯೋ, ಆದ್ದರಿಂದಲೇ ಶ್ರೀಪತಿಪಂಡಿತಾಚಾರ್ಯರಿಂದ ನಿರ್ಮಿತವಾದ ಈ ಗ್ರಂಥವು ಶಿವಾದ್ವೈತದರ್ಶನಸಂಬದ್ಧವಾದ ಆಗಮಾಚಾರ-ಧಾರ್ಮಿಕವಿಷಯಗಳಿಗೆ ರತ್ನಾಕರದಂತೆ ಆಕರವೆಂದು ಆಸ್ಥಾನವಿದ್ವಾಂಸರಾದ ಶ್ರೀ : ನಂಜುಂಡಾರಾಧ್ಯಮಹೋದಯರಿಂದ ತಮ್ಮ ಉಪೋದ್ಘಾತದಲ್ಲಿ ಈ ಗ್ರಂಥಪ್ರತಿಪಾದ್ಯಾಂಶವು ಹದಿನೈದು ವಿಷಯವಿಭಾಗಗಳಲ್ಲಿ ಸೂಚಿಸಲ್ಪಟ್ಟಿದೆ.

ಯದ್ಯಪಿ ಈ ಗ್ರಂಥದಲ್ಲಿ ಶ್ರೀಪತಿಪಂಡಿತಾಚಾರ್ಯರಿಂದ (ಈ ಗ್ರಂಥದಲ್ಲಿ ಉದ್ಧೃತವೋ ಅಥವಾ ಅಲ್ಲದವುಗಳೋ) ಸ್ವೋಕ್ತಾರ್ಥದಲ್ಲಿ ಪ್ರಮಾಣವಾಗಿ ವೈದಿಕವಾದ ಸಂಹಿತಾರಣ್ಯಕೋಪನಿಷದ್ವಾಕ್ಯಗಳು ಬಹುವಾಗಿ ಅಲ್ಲಲ್ಲೇ ಬಾರಿಬಾರಿಗೂ ಉದ್ಧರಿಸಿ ಪ್ರದರ್ಶಿತವಾಗಿ ಅಜೀರ್ಣವಾಗುವಂತಿವೆ; ಆದರೂ ಸ್ವೋಕ್ತಾರ್ಥಪ್ರಾಮಾಣ್ಯದಲ್ಲಿ ಸಂಶಯವುಳ್ಳವರ ಬುದ್ಧಿಮಾಂದ್ಯನಿವಾರಣೆಗಾಗಿ, ಮತ್ತೆ ಪುನಃಪುನಃ ಉತ್ತರಿಸಿಬರುವ ಸಂಶಯನಿವಾರಣೆಗಾಗಿ ಆ ರೀತಿ ಬಹುವಾಗಿ ಪ್ರಮಾಣವಾಕ್ಯಗಳು ಉದ್ಧೃತವಾಗಿ ತೋರಿಸಲ್ಪಟ್ಟವೆಯೆಂದು ಕೆಲವರ ಆಶಯ. ಇದೊಂದು ಪಕ್ಷ. ಮತ್ತೆ ಕೆಲವರು ಇಂತೆನ್ನುತ್ತಾರೆ–

ಮತತ್ರಯಾಚಾರ್ಯರು ಯಾವ ಬಗೆಯಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯಗಳನ್ನು ರಚಿಸಿದರೋ ಹಾಗೆಯೇ ಈ ಗ್ರಂಥಕಾರನು ಶ್ರೀಪತಿಪಂಡಿತನ ವ್ಯಪದೇಶದಿಂದ (ಶ್ರೀಪತಿಪಂಡಿತರ ಹೆಸರಿನಲ್ಲಿ) ಶಿವಾದ್ವೈತದರ್ಶನಾನುರೋಧವಾಗಿ ಈ ಭಾಷ್ಯವನ್ನು ರಚಿಸಿದನು. ಅಲ್ಲಿ ಪ್ರಥಮಭಾಗ ಐದು ಪಾದಗಳಿಂದ ಕೂಡಿದೆ. ಇಲ್ಲಿ ಮಧ್ಯಮಾಧಿಕಾರಿಗಳಿಗೂ ಬ್ರಹ್ಮವಿದ್ಯೆಯು ವಿಸ್ತಾರವಾಗಿ ಉಪದಿಷ್ಟವಾಗಿದೆ-ಯಾಗಿ ಇದಕ್ಕೆ **'ಶಿವಾದ್ವೈತಮಂಜರಿ'** ಎಂಬ ನಾಮಾಂತರವೂ ಉಂಟು. ಈ ಭಾಷ್ಯಕ್ಕೂ ಸಿದ್ಧಾಂತ-ಶಿಖಾಮಣ್ಯಾದಿಗ್ರಂಥಗಳಿಗೂ ಮತ್ತೆ ರೇಣುಕಭಾಷ್ಯಾದಿಗಳಿಗೂ ಸಾಮಂಜಸ್ಯವು ಹೊಂದುವುದಿಲ್ಲ.

ಈ ಗ್ರಂಥದ ಒಳಹೊಕ್ಕು ಪರಿಶೀಲಿಸುವುದರಿಂದ ಈ ಗ್ರಂಥಕರ್ತೃವಾದ ಆಚಾರ್ಯನು ಇತರ ವೈದಿಕ-ದಾರ್ಶನಿಕಾಚಾರ್ಯರಂತೆ ಲೋಕಪ್ರೀತ್ಯರ್ಥವಾಗಿ ಬ್ರಹ್ಮಸೂತ್ರಗಳಿಗೆ ಶಿವಾದ್ವೈತದರ್ಶನಾನುರೋಧವಾಗಿ ಈ ಭಾಷ್ಯವನ್ನು ರಚಿಸಿದನೆಂದು ತಿಳಿದುಬರುತ್ತದೆ– 'ಲೋಕ ಗತಾನುಗತಿಕ. ಅದು ಪಾರಮಾರ್ಥಿಕವಲ್ಲ.'

ಈ ಗ್ರಂಥವಲ್ಲಿನ ಅಭಿಪ್ರಾಯವಿವರಣಸರಣಿಯು ಸ್ಪಷ್ಟವಾಗಿಲ್ಲ. ಮತ್ತೆ– ಈ ಗ್ರಂಥದಲ್ಲಿ ಆರಂಭದಿಂದ ಕೊನೆಯವರಿಗೆ ಸಾವಿರಾರು ಪ್ರಮಾಣವಾಕ್ಯಗಳ ಗುಂಪನ್ನೇ ಒಟ್ಟೊಟ್ಟಿಗೆ ನೋಡುವ ಅಧ್ಯೇತೃಗಳ ಮನಸ್ಸಿನಲ್ಲಿ– 'ನಾನು ಏನನ್ನು ಅಧ್ಯಯನ ಮಾಡಿದೆ? ಮತ್ತೆ ಏನು ತಾನೆ ನನ್ನಿಂದ ಪ್ರಾಪ್ತವಾಯಿತು? ಮತ್ತೆನನ್ನು ತಾನೇ ನಾನು ಸಂಗ್ರಹಿಸಿದೆ?' ಎಂಬ ಪ್ರಶ್ನೆಗಳ ಸಮೂಹವೇ ಉಂಟಾಗುತ್ತದೆಯೇ ವಿನಹ ನಿಶ್ಚಿತವಾದ ಯಾವ ತತ್ತ್ವಜ್ಞಾನವೂ ಉಂಟಾಗದು.

ಈ ಗ್ರಂಥಕಾರ ಬಸವಾದಿಸಮಕಾಲೀನ. ಈ ಗ್ರಂಥವೋ ಸಾಂಪ್ರದಾಯಿಕವೀರಶೈವರದೇ ಹೌದು! (ಆಂಧ್ರದೇಶೀಯರಾದ ಕೆಲವೇ ವೀರಶೈವರ ಒಂದು ಗುಂಪಿನ ಒಂದು ಭಾಗದ ಕೈಚಳಕದಿಂದ ಹೊರಬಂದುದಿದು!) ಎಂಬ ವಾದವಿದೆ ಆದ್ದರಿಂದ ಇದು–ಶಾಸ್ತ್ರೀಯವಾದ ದಾರಿಯನ್ನು ಅನುಕರಿಸುವುದಾಗಿಲ್ಲ; ಮತ್ತೆ ಇದು ವೀರಶೈವರ ವೈಚಾರಿಕ-ಮರ್ಯಾದೆಯನ್ನು ಅತಿಕ್ರಮಿಸಿ ವಿಭಿನ್ನರೂಪವನ್ನು ಪಡೆದಿದೆ; ಎಂದು ತಿಳಿದುಬರುತ್ತಲಿದೆ.

ಇದನ್ನನುಸರಿಸಿ ಈ ಗ್ರಂಥದ ಆವಿರ್ಭಾವದಲ್ಲಿ ಮತ್ತೆ ಪ್ರಭಾವದಲ್ಲಿ ಸಂದೇಹವನ್ನು ಹೊಂದಿದ ಕೆಲವು ವಿದ್ವಾಂಸರು ಈ ಗ್ರಂಥವನ್ನು ಶ್ರೀಪತಿಕರ್ತೃಕವನ್ನಾಗಿ ಒಪ್ಪುವುದಿಲ್ಲ.

ಈ ಶ್ರೀಕರಭಾಷ್ಯ ಕ್ರಿ. ಶ. ೧೯೫೩ ರಿಂದ ೧೯೫೬ ರರ ಕೊನೆಯವರೆವಿಗೆ ಐದು ಬಾರಿ ಮುದ್ರಿತವಾಗಿ ಪ್ರತಿಮುದ್ರಣದಿಂದ ಮತ್ತೊಂದು ಮುದ್ರಣಕ್ಕೆ ನೂತನವಾದ ನಾನಾವಿಧಪಾಠರಾಶಿಗಳನ್ನು ಅಳವಡಿಸಿಕೊಂಡು ಪರಸ್ಪರವಿರುದ್ಧಾರ್ಥಪ್ರತಿಪಾದಕಗಳಾದ ವಿಷಯಗಳಿಂದ ಸಂಕಲಿತವಾಗಿದೆ-ಯಾಗಿ ಇದು ಶ್ರೀಪತಿಕರ್ತೃಕತೆಯನ್ನು ಹೊಂದಲು ಅರ್ಹವಾಗಿಲ್ಲ. ಮತ್ತೇನೆಂದರೆ – ಪಕ್ಷಪಾತಕುಕ್ಷಿಗಳಾದ ಮತೀಯಕತಿಪಯರಿಂದ ಅತ್ಯಲ್ಪವಾದ ತಮ್ಮ ಪಕ್ಷದ ಆಧಿಕ್ಯತೆಯ ಪ್ರದರ್ಶನಾರ್ಥವಾಗಿ ತುಚ್ಛವಾದ ಮಾರ್ಗವನ್ನು ಆದರಿಸಿ ಅದೇ ದಾರಿಯಿಂದ ಪ್ರತಿಪ್ರಕಾಶನಕ್ಕೂ ನಾನಾಸಂಸ್ಕಾರಸಂಸ್ಕೃತವಾಗಿ ಈ ರೂಪವನ್ನು ಹೊಂದಿದೆಯೆಂದು ಎಲ್ಲೆಲ್ಲೂ ಅಭಿಪ್ರಾಯಗಳು ಹರಡಿವೆ. ಪ್ರಕೃತ ಈ ಗ್ರಂಥವು ಆರನೆಯ ಬಾರಿ ಪರಿಷ್ಕೃತವಾದಗ್ರಂಥ. ಯಾರಿಂದಲೇ ಆಗಲಿ ಈ ಆಕ್ಷೇಪಗಳಿಗೆ ಉತ್ತರವಿತ್ತು ಸಮಾಧಾನಪಡಿಸಲಾಗಿಲ್ಲ. ಆದ್ದರಿಂದ ನಾವೂ ಕೂಡ ಸಂಸ್ಥೆಯ ಹೆದರಿಕೆಯಿಂದ ಮಧ್ಯಸ್ಥರು.

೧೯೩೬ನೇ ಕ್ರಿಸ್ತಾಬ್ದದಲ್ಲಿ ಶ್ರೀ : ಹಯವದನರಾವ್ ಮಹೋದಯನೂ ಕೂಡ ವೀರಶೈವ ದರ್ಶನದಲ್ಲಿ ತನ್ನ ಸರ್ವಸಾರಸ್ವತ-ಸಾರಸರ್ವಜ್ಞತೆಯನ್ನು (ಸರ್ವತತ್ವಗಳನ್ನು ಬಲ್ಲವನೆಂಬುದನ್ನು) ಪ್ರಕಟಿಸಲೋ ಎಂಬಂತೆ ಮೈಸೂರು ಲಿಂಗಾಯಿತ ಅಭಿವೃದ್ಧಿ ಸಂಸ್ಥೆಯ ವಿಶೇಷಸಹಾಯದಿಂದ ಅಪಪಾಠಬಹುಳವಾದ ಕೃತಿಚೌರ್ಯಪರವಾದ ಈ ಗ್ರಂಥವನ್ನು ಪ್ರಕಟಿಸಿದನು.

ಕೆಲವರು– ಈ ಶ್ರೀಪತಿಪಂಡಿತಾಚಾರ್ಯನು ಕ್ರಿಸ್ತಾನಂತರದ ೧೦ನೆಯ ಶತಕದಲ್ಲಿ ಈ ಭೂಮಿಯನ್ನು ಅಲಂಕರಿಸಿದ್ದನು ; ಎಂದು ಹೇಳುತ್ತಾರೆ. ಮತ್ತೆ ಕೆಲವರು– ಈ ಆಚಾರ್ಯನು ಕ್ರೈಸ್ತವ ದ್ವಾದಶಶತಕದಲ್ಲಿ (ಹನ್ನೆರಡನೆಯ ಶತಮಾನ) ಇದ್ದನೆಂದು ವರ್ಣಿಸುತ್ತಾರೆ. ಇತರರು– ಈ ಮಹಾನುಭಾವನು ಕ್ರಿಸ್ತಾನಂತರ ೧೫ನೆಯ ಶತಮಾನದಲ್ಲಿಯೇ ಇದ್ದನೆಂದು ಸಾಧಿಸುತ್ತಾರೆ.

ಈ ಎಲ್ಲ ಅಭಿಪ್ರಾಯಗಳು ವಿದ್ವಾಂಸರಾದ ಶ್ರೀ: ಸದಾಶಿವಯ್ಯಪ್ರಭೃತಿಗಳೇ ಮುಂತಾದ ವಿಮರ್ಶನ-ವಿಚಕ್ಷಣರಾದ ಮಹನೀಯರಿಂದ ಧಾರವಾಡಸಾಹಿತ್ಯ ಸಮಿತಿ ಪತ್ರಿಕೆಯಲ್ಲಿ– 'ಶ್ರೀಕರ ಭಾಷ್ಯವೂ ವೀರಶೈವಧರ್ಮವೂ' ಎಂಬ ಲೇಖನದಲ್ಲಿ ಚೆನ್ನಾಗಿ ಚರ್ಚಿಸಲ್ಪಟ್ಟು ನಿರ್ಣಯಿಸಲ್ಪಟ್ಟು ನ್ಯಾಯಾನುಗುಣವಾದ ಆಯಾಯಾಕಾರಣಸಮುದಾಯಗಳಿಂದ ದೃಢೀಕರಿಸಲ್ಪಟ್ಟಿರುವುದು ಸಮಂಜಸ ವೆಂದು ತೋರುತ್ತದೆ. ಈ ಅಂಶವು 'ಶಿವಸುತ' ಎಂಬ ಕಾವ್ಯನಾಮದಿಂದ ಈ ಪತ್ರಿಕೆ ಯಲ್ಲಿಯೇ ಐದು ಸಂಚಿಕೆಗಳಲ್ಲಿ ಸಮರ್ಥಿತವಾಗಿದೆ.

ಈ ಮೇಲಿನ ಅಭಿಪ್ರಾಯಗಳ ಖಂಡನ-ಮಂಡನಗಳು ಕರ್ನಾಟಕ-ವಿಶ್ವವಿದ್ಯಾಲಯದಲ್ಲಿ ಬಹುಕಾಲ ಸಂಸ್ಕೃತ-ಪ್ರಾಧ್ಯಾಪಕ-ಸ್ಥಾನವನ್ನು ಅಲಂಕರಿಸಿದ್ದ ಕೈಲಾಸವಾಸಿಗಳಾದ ಶ್ರೀ: ನಂದೀ ಮಠ ಮಹೋದಯರಿಂದ ಚೆನ್ನಾಗಿ ಸಾಧಿಸಲ್ಪಟ್ಟಿತೆಂದು ಈ ಪರಿಷ್ಕೃತವಾದ ಶ್ರೀಕರಭಾಷ್ಯದ ಸಂಪಾದಕರಾದ ಆಸ್ಥಾನವಿದ್ವಾನ್ ಶ್ರೀ: ಎಂ. ಜಿ. ನಂಜುಂಡಾರಾಧ್ಯಮಹೋದಯರಿಂದ ವರ್ಣಿ ಸಲ್ಪಟ್ಟಿದ್ದರೂ ನಾವೀ ವಿಷಯದಲ್ಲಿ ದೃಢವಾದ ಕಾರಣಗಳನ್ನು ಕಾಣದಿದ್ದೇವೆ.

ಇದು ಒತ್ತಟ್ಟಿಗಿರಲಿ. ಈ ಮೇಲಿನ ಕಾರ್ಯಗಳಿಂದ ನಾವಿಲ್ಲಿ ಕೇವಲ ಮಧ್ಯಸ್ಥರು. ಈ ಗ್ರಂಥವು ಗಗನಕುಸುಮಪ್ರಾಯವಾಗಿರಲಿ, ಅಥವಾ ಜಗತ್ಪೂಜ್ಯವಾಗಿರಲಿ, ಅಥವಾ ಶ್ರೀಪತಿಪಂಡಿತಾ ಚಾರ್ಯ ನಿರ್ಮಿತವಾಗಿರಲಿ, ಅಥವಾ ಅಲ್ಲದಿರಲಿ, ಈ ವಿಷಯವಿಲ್ಲಿ ಅವಿಚಾರರಮಣೀಯ. ಆದರೂ ಇಷ್ಟು ಮಾತ್ರ ಸತ್ಯ– ವಿಮರ್ಶಕರಿಂದ 'ಮಾತ್ಸರ್ಯವನ್ನು ದೂರ ಸರಿಸಿ ವಿಚಾರಿಸಿ ಕಾರ್ಯಮಾಡಬೇಕು.'

ಯದ್ಯಪಿ ಉಪಸ್ಥಿತವಾದ ಶ್ರೀಕರಭಾಷ್ಯದಲ್ಲಿನ ಶಾಸ್ತ್ರಸರಣಿಯು ಇತರ ಭಾಷ್ಯಗಳಂತೆ ರಮಣೀಯವಾಗಿಲ್ಲವಾದರೂ ಇದೊಂದು ನವನವೀನವಾದ ವೀರಶೈವಪರವಾದ ಬಾದರಾಯಣನ ಬ್ರಹ್ಮಸೂತ್ರಪರವಾದ ಭಾಷ್ಯವೆಂಬುದರಲ್ಲಿ ಯಾವ ಕ್ಷತಿಯೂ ಇಲ್ಲ.

ಆದ್ದರಿಂದ ಈ ಗ್ರಂಥದ ಕರ್ತೃವಿನ ವಿಷಯದಲ್ಲಿ ಅವನ ಕಾಲ ನಿರ್ಣಯಾದಿವಿಷಯಗಳಲ್ಲಿ ಲೋಪೋದ್ಧರಣವನ್ನು ಒತ್ತಟ್ಟಿಗಿಟ್ಟು ಹಂಸಕ್ಷೀರನ್ಯಾಯದಂತೆ ಗುಣಗ್ರಹಣವನ್ನು ಮಾತ್ರ ಮಾಡ ಬೇಕೆಂಬುದು ನಮ್ಮ ಆಶಯ. ಇಂತಹ ಕ್ಷುಲ್ಲಕವಾದ ವಿಷಯಗಳ ವಿಮರ್ಶನದಲ್ಲಿ ಇದು ವಾದಭೂಮಿಯಲ್ಲ. ಅದನ್ನು ಮತ್ತೊಂದೆಡೆ ಚಿಂತಿಸುವಾ ! ಸತ್ಯನಿರ್ಣಯಕ್ಕಾಗಿ ವಿಮರ್ಶಿಸುವಾ ! ಮತ್ತೇನೆಂದರೆ– ವೀರಶೈವರ ಪರಸ್ಪರವಾದ ಈ ಕ್ಷುಲ್ಲಕ-ವಾದವಿವಾದಗಳ ಉದ್ಘಾಟನೆಯ ವಿಷಯಕ್ಕಾಗಿ ದುಃಖಿಸುತ್ತೇವೆ.

ಇಂತಹ ಈ ಸಂದರ್ಭದಲ್ಲಿ ಪರಿಷ್ಕೃತವಾದ ಪಾಠಾದಿಗಳಿಂದ ಉಪಶೋಭಿಸುತ್ತಿರುವ ಈ ಶ್ರೀಕರಭಾಷ್ಯವು ಯಾರಿಗೂ ಸಿಕ್ಕದಿರುವ ಸ್ಥಿತಿಯನ್ನು ಪರಿಹರಿಸಿ, ಸಂಸ್ಕೃತಮಹಾಪಾಠಶಾಲೆಗಳಲ್ಲಿ -ಸಾಂಪ್ರದಾಯಿಕ-ವೀರಶೈವ-ದರ್ಶನಾಧ್ಯೇತೃಗಳ ಅಧ್ಯಯನ-ಅಧ್ಯಾಪನ-ವಿಮರ್ಶಾದಿಗಳ ಉಪ ಉಪಯೋಗಕ್ಕಾಗಿ- ಈ ಪ್ರಾಚ್ಯವಿದ್ಯಾಸಂಶೋಧನಾಲಯವು, ಮೈಸೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಈ ಗ್ರಂಥಪ್ರಕಾಶನಕ್ಕಾಗಿ ಸಂಕಲ್ಪಿಸಿತು.

ಈ ಸಂಕಲ್ಪಾನುರೋಧವಾಗಿ- ಸಂಸ್ಕೃತ-ಕರ್ಣಾಟಕ-ಆಂಧ್ರ-ಭಾಷಾಕೋವಿದರೂ, ವೇದ-ವೇದಾಂತ-ಆಗಮ-ಅಲಂಕಾರ-ಶಾಸ್ತ್ರವಿದ್ವಾಂಸರೂ, ಅಧ್ಯಯನಾಧ್ಯಾಪನಾದಿಗಳಿಂದ ಸುಪ್ರಸಿದ್ಧರೂ, ಸಂಸ್ಕೃತಮಹಾಪಾಠಶಾಲೆಗಳಲ್ಲಿ ಬಹುಕಾಲ ಅಲಂಕಾರ-ಆಗಮ-ವೀರಶೈವದರ್ಶನವಿಭಾಗಗಳಲ್ಲಿ ಪ್ರಾಧ್ಯಾಪಕ-ಪದವಿಯನ್ನು ಅಲಂಕರಿಸಿದವರೂ, ಸಂಸ್ಕೃತ-ಕರ್ಣಾಟಕ-ಭಾಷೆಗಳಲ್ಲಿ ನಾನಾಗ್ರಂಥ ಪ್ರಕಾಶಕರೂ, ಅಸ್ಮತ್ಸುಹೃದ್ವರ್ಯರೂ, ಆಸ್ಥಾನವಿದ್ವಾಂಸರೂ ಆದ ಶ್ರೀ ಎಂ. ಜಿ. ನಂಜುಂಡಾರಾಧ್ಯ ಮಹೋದಯರ ಸಹಾಯವನ್ನು ಈ ಮಹಾಗ್ರಂಥದ ಪರಿಷ್ಕರಣದಲ್ಲಿಯೂ ಆವಿಷ್ಕರಣದಲ್ಲಿಯೂ ಚೆನ್ನಾಗಿ ವಿನಿಯೋಜಿಸಿ ಈ ಗ್ರಂಥವು ಅತ್ಯಲ್ಪಕಾಲದಲ್ಲಿಯೇ ಪ್ರಕಾಶಿಸಲ್ಪಟ್ಟಿತು. ಅತ್ಯಧಿಕೋಪಕಾರಿಗಳಾದ ಆ ಆರಾಧ್ಯಮಹಾಶಯರಿಗೆ ಹಾರ್ದವಾದ ಅಭಿನಂದನೆಗಳನ್ನು ಸಮರ್ಪಿಸುತ್ತೇವೆ.

ಈ ರೀತಿಯಾದ ಈ ಭಾಷ್ಯವನ್ನು ತತ್ತ್ವದರ್ಶಿಗಳಾದ ಸಾರಾಸಾರವಿವೇಕಜ್ಞರು ಮಾತ್ಸರ್ಯವಿಲ್ಲದವರಾಗಿ ಆದರಿಸುವರೆಂದು ನಾವು ಆಶಿಸುತ್ತೇವೆ.

ಈ ಎಲ್ಲವನ್ನೂ ಮನಸ್ಸಿನಲ್ಲಿಟ್ಟು, ಈ ಗ್ರಂಥಪ್ರಕಾಶನದಲ್ಲಿ ಮಹದೌದಾರ್ಯವನ್ನು ಪ್ರದರ್ಶಿಸಿ ಪ್ರಭೂತವಾದ ಧನವನ್ನಿತ್ತ ಮೈಸೂರು ವಿಶ್ವವಿದ್ಯಾಲಯಾಧಿಕಾರಿಗಳಿಗೆ ನಾವು ಕೃತಜ್ಞತೆಗಳನ್ನರ್ಪಿಸುತ್ತೇವೆ.

ಕೊನೆಯದಾಗಿ- ಹೃದ್ಯವಾದ ಅಕ್ಷರವಿನ್ಯಾಸಚಾತುರ್ಯದಿಂದ ಈ ಗ್ರಂಥವನ್ನು ಸಕಾಲದಲ್ಲಿ ಮುದ್ರಿಸಿದ ಮೈಸೂರು ಶ್ರೀ ವಿಜಯಲಕ್ಷ್ಮೀ ಪ್ರೆಸ್ಸಿನ ಮಾಲೀಕರಿಗೆ ಅನೇಕವಾದ ಅಭಿನಂದನೆಗಳನ್ನು ನಾವು ಸಮರ್ಪಿಸುತ್ತೇವೆ.

ಈ ಗ್ರಂಥಸಂಪಾದನ ಕಾರ್ಯಕ್ಕಾಗಿ ತಮ್ಮ ಭಾಂಡಾಗಾರದಲ್ಲಿದ್ದ ಅಸಮುಗ್ರವಾದ ಮೂಲ ಪ್ರತಿಯನ್ನು ಚಿತ್ರಗ್ರಹಣಕ್ಕಾಗಿ (O.R.I. Film No. 9 9) ಇತ್ತ ಕಾಶಿಯ ಶ್ರೀ ಜಂಗಮವಾಡೀ ಮಠಾಧೀಶರಿಗೆ ಹಾಗೂ ಈ ದಿಕ್ಕಿನಲ್ಲಿ ಸಹಾಯವನ್ನು ಮಾಡಿದ ಇತರರಿಗೆ ನಾವು ಅತ್ಯಂತ ಕೃತಜ್ಞರು.

"ಸತ್ಯಂ ಜ್ಞಾನಮನಂತಂ ಬ್ರಹ್ಮ"

ಇತಿ ಸಿದ್ಧಾಂತಃ

ಮೈಸೂರು (ಡಾ|| ಜಿ. ಮರುಳಸಿದ್ಧಯ್ಯ)

ತಾ|| 22-3-1977 ಪ್ರಾಧ್ಯಾಪಕರು, ಸ್ನಾತಕೋತ್ತರ-ಸಂಸ್ಕೃತವಿಭಾಗಮುಖ್ಯಾಧಿಕಾರಿಗಳು,

ಮತ್ತು ನಿರ್ದೇಶಕರು

ಪ್ರಾಚ್ಯವಿದ್ಯಾಸಂಶೋಧನಾಲಯ,

ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಶ್ರೀ

# ಅವತರಣಿಕಾ

## (ದ್ವಿತೀಯ ಸಂಪುಟ)

ವಿಮರ್ಶನ-ವಿಚಕ್ಷಣರಾದ ವಿದ್ವಾಂಸರ ಕರತಲವನ್ನು ಅಲಂಕರಿಸಿರುವ ಈ ಗ್ರಂಥವು ಶ್ರೀಕರಭಾಷ್ಯದ ದ್ವಿತೀಯ-ಭಾಗ. ಪ್ರಥಮ-ಭಾಗದಲ್ಲಿ ಐದುಪಾದಗಳಲ್ಲಿ ಬ್ರಹ್ಮಜಿಜ್ಞಾಸೆಯನ್ನು ಆರಂಭಿಸಿ ಜಗನ್ಮಿಥ್ಯಾತ್ವ-ನಿರಾಸಾಂತಭಾಗವು ವರ್ಣಿತವಾಗಿದೆ.

ಈ ಎರಡನೆಯ ಭಾಗದಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದವನ್ನು ಆರಂಭಿಸಿ ಚತುರ್ಥಾಧ್ಯಾಯಾಂತಭಾಗವು ಸನ್ನಿವಿಷ್ಟವಾಗಿದೆ. ಅಲ್ಲಿ ಮೂರನೆಯ ಅಧ್ಯಾಯದ ಮೂರು ಮತ್ತು ನಾಲ್ಕನೇ ಪಾದಗಳಲ್ಲಿ ವರ್ಣಾಶ್ರಮಧರ್ಮವಿಚಾರಗಳು ಉಪವರ್ಣಿತವಾಗಿವೆ. ಇವೆಲ್ಲವೂ ವೀರಶೈವಾನುರುದ್ಧವಾದವುಗಳೆಂದು ಸಾಧಿಸಲು ಮಹತ್ತ್ರಯತ್ನವು ಮಾಡಲ್ಪಟ್ಟಿತು. ಯಾವ ಕಾರಣ ದಿಂದ ಈ ವರ್ಣಾಶ್ರಮಾಚಾರವಿಚಾರಗಳು ವೀರಶೈವಸಂಪ್ರದಾಯ-ವಿರುದ್ಧಾರ್ಥ-ಪ್ರತಿಪಾದಕವೋ, ಮತ್ತೆ ಎಲ್ಲಾದರೂ ಕೂಡ ವೀರಶೈವಸಂಪ್ರದಾಯಾನುರುದ್ಧವಾದ-ವೀರಶೈವಪ್ರಮಾಣಾರ್ಣವ-ವಚನಶಾಸ್ತ್ರ-ವಿಧಿಗಳು ಸ್ವಲ್ಪವೂ ಕೂಡ ಸಂಯೋಜಿಸಲ್ಪಟ್ಟಿಲ್ಲವೋ, ಆದ್ದರಿಂದಲೇ ಅವರಲ್ಲಿ (ಮೇಲೆ ಹೇಳಿದ ಪ್ರಯತ್ನದಲ್ಲಿ) ಈ ಗ್ರಂಥಕಾರನು ಅಸಫಲನೇ ಸರಿ. ಈ ರೀತಿಯಾದ ಈ ಗ್ರಂಥದ ವೀರಶೈವ-ವಚನ-ಧರ್ಮ-ತತ್ತ್ವಶಾಸ್ತ್ರ-ಪ್ರತಿಪಾದಕತ್ವವು ಹೇಗೆತಾನೇ ಸರಿಹೊಂದೀತು ? ಅದನ್ನು ಹೇಗೆತಾನೇ ಪ್ರಮಾಣೀಕರಿಸಬಹುದು ? ಎಂಬುದನ್ನು ನಾವು ತಿಳಿಯಲಾರೆವು.

ಎಲ್ಲ ವೀರಶೈವರಿಗೂ ವಚನಶಾಸ್ತ್ರವೇ ಪ್ರಮಾಣ. ಅದನ್ನು ಪ್ರತಿಪಾದಿಸುವ ಮಹಾ-ಚಾರ್ಯಪುರುಷರಾದ ಬಸವಾದಿ-ಪ್ರಮಥರು : ಜಗದಾದರ್ಶಭೂತರಾದ ಷಟ್ಸ್ಥಲಜ್ಞರು. ಆದ್ದರಿಂದಲೇ ಅವರು ಪ್ರಮಾಣೀಭೂತರು ; ಮತ್ತು ವಂದನೀಯರು. ಇಂತಹವರ ವಚನಶಾಸ್ತ್ರದಲ್ಲಿ ಪ್ರಾಮಾಣ್ಯ ಮತ್ತು ಪ್ರತಿಪತ್ತಿ ಶ್ರೀಕರಭಾಷ್ಯಕರ್ತೃಗಳಿಗೆ ಇದೆಯೋ ಅಥವಾ ಇಲ್ಲವೋ ಎನ್ನುವಲ್ಲಿ ಯಾವ ಪ್ರಾಮಾಣ್ಯವೂ ಇಲ್ಲಿ ಸಿಕ್ಕುವುದಿಲ್ಲ.

ಇದನ್ನಿಲ್ಲಿ ತಿಳಿಯಬೇಕು– ಬಸವಾದಿ-ಪ್ರಮಥರ ಸರಣಿಯನ್ನು ಅನುಸರಿಸಿ ಯಾವುದು ಪ್ರವರ್ತಿತವಾಗಿದೆಯೋ ಅದೇ ವೀರಶೈವ. ಎಲ್ಲಿ ಅವರ ಅನುರೋಧವೂ ಅನುಸರಣವೂ ಕಾಣುವುದಿಲ್ಲವೋ ಅದು ವೀರಶೈವವಲ್ಲ ; ಎಂಬುದರಲ್ಲಿ ಸಂದೇಹಗಂಧವೂ ಇಲ್ಲ. ಆದ್ದರಿಂದಲೇ ಬ್ರಾಹ್ಮಣ ಧರ್ಮಾಚಾರ-ಪ್ರತಿಪಾದಕರೂ, ತದಾಚಾರವಿಚಾರಶೀಲರೂ, ತಮ್ಮನ್ನು ಮಾತ್ರ ವೀರಶೈವರೆಂದು ತಿಳಿದವರೂ ಆದ ಅವರು ಪರಶಿವನ ಪಾರಮ್ಯಮಾತ್ರವನ್ನೇ ಒಪ್ಪುವ ಆಭಾಸಶೈವರೆಂಬ ಹೇಳಿಕೆಯು ಯಾವ ಕ್ಷತಿಯನ್ನೂ ಉಂಟುಮಾಡುವುದಿಲ್ಲ.

ಇವರೋ ಎಂದರೆ ತಮಗಭಿಮತವಾದ ವಿಷಯಗಳ ವೀರಶೈವತ್ವ-ಸ್ಥಾಪನದಲ್ಲಿ ಬದ್ಧಕಂಕಣ ರಾಗಿ ಮಹತ್ತರವಾದ ಪ್ರಯಾಸವನ್ನು ಅನುಭವಿಸುತ್ತ ಈ ಭಾಷ್ಯದಲ್ಲಿ ಭಾಷ್ಯಾಂತರವರ್ಣಿತಗಳಾದ ವಿಷಯಗಳನ್ನೇ ಕೆಲವೆಡೆ ಅನುವಾದರೂಪದಿಂದ ಕೆಲವೆಡೆ ಅದೇ ವಾಕ್ಯಗಳ ಆನುಪೂರ್ವೀರೂಪದಿಂದ ಸೇರಿಸಿ ಆ ಕೆಲಸದಿಂದ ತಮ್ಮನ್ನು ಕೃತಕೃತ್ಯರನ್ನಾಗಿ ತಿಳಿಯುತ್ತಾರೆ. ಇಲ್ಲಿಯೋ ಅವರಿಂದ ಅನುಸೃತವಾದ ರೀತಿಯು ದ್ರಾವಿಡಪ್ರಾಣಾಯಾಮವನ್ನು ಅನುಕರಿಸುವಂತಿದೆ. ಈ ರೀತಿಯಾದ ಅವರು– "ಕುರುಡರಿಂದಲೇ ಒಯ್ಯಲ್ಪಟ್ಟ ಕುರುಡರಂತೆ" ಎಂಬಂತೆ ಮತ್ತೊಬ್ಬರನ್ನು ಅನುಕರಿಸುತ್ತಾ– ಸಂಸಾರ ಸಾಗರದಿಂದ ತಾವೇ ದಡಮುಟ್ಟಲು ಅಸಮರ್ಥರಾಗಿರುವಾಗ ಹೇಗೆ ತಾನೇ ಮತ್ತೊಬ್ಬರನ್ನು ದಡಮುಟ್ಟಿಸುತ್ತಾರೆಂಬುದನ್ನು ನಾವರಿಯೆವು.

ಆದರೂ ಕೂಡ ಸಂಸ್ಕೃತ ಭಾಷೆಯಲ್ಲಿ ವೀರಶೈವದರ್ಶನಾಧ್ಯೇತೃಗಳ ಉಪಯೋಗಕ್ಕಾಗಿ ಈ ಭಾಷ್ಯಗ್ರಂಥ ಪಾಠಗ್ರಂಥವಾಗಿ ನಿಯಮಿತವಾಗಿದೆಯೆಂಬುದೊಂದನ್ನು ಮಾತ್ರ ಅನುಸರಿಸಿ ಪ್ರಕಟಿತವಾದ ಈ ಗ್ರಂಥದ ಎರಡನೆಯ ಸಂಪುಟದಲ್ಲಿ ವಿದ್ವಾಂಸರು ಆದರವುಳ್ಳವರಾಗಿ ಅಭಿಮಾನಹೊಂದಿ ಈ ಗ್ರಂಥವನ್ನು ಆದರಿಸಲಿ; ಹಾಗೆಯೇ ಮಾತ್ಸರ್ಯವನ್ನು ದೂರಸರಿಸಿ ತಮ್ಮ ಅಭಿಪ್ರಾಯವನ್ನು ಪ್ರಕಟಪಡಿಸಲಿ; ಎಂದು ಆಶಿಸುತ್ತೇನೆ. ಆಗಲೋ ಅವರ ಸೂಕ್ತಿಗಳನ್ನು ನಮ್ರವಾಗಿ ಸ್ವೀಕರಿಸುತ್ತೇನೆ; ಸಂತುಷ್ಟರೂ ಆಗುತ್ತೇನೆ.

ಕೊನೆಯಲ್ಲಿ ಈ ಗ್ರಂಥದ ಸಂಪಾದನಕಾರ್ಯವನ್ನು ಮಾಡಿದ ಆಸ್ಥಾನ ವಿದ್ವಾಂಸರೂ, ನಿವೃತ್ತಪ್ರಾಧ್ಯಾಪಕರೂ ಆದ ಶ್ರೀ: ಎಂ. ಜಿ. ನಂಜುಂಡಾರಾಧ್ಯಮಹೋದಯರಿಗೂ, ಹಾಗೂ ಈ ಗ್ರಂಥದ ಪ್ರಕಾಶನಕಾರ್ಯದಲ್ಲಿ ಅತ್ಯಧಿಕವಾದ ಧನವನ್ನಿತ್ತು ಪ್ರೋತ್ಸಾಹಿಸಿದ ಮೈಸೂರು ವಿಶ್ವವಿದ್ಯಾಲಯಾಧಿಕಾರಿಗಳಿಗೂ, ಹಾಗೂ ಸುಂದರಾಕ್ಷರಗಳಿಂದ ಈ ಗ್ರಂಥವನ್ನು ಮುದ್ರಿಸಿ ಸಹಕರಿಸಿದ ಶ್ರೀ ವಿಜಯಲಕ್ಷ್ಮೀ ಪ್ರೆಸ್ಸಿನ ಮಾಲೀಕರಿಗೂ ಮತ್ತೂ ಈ ಕೆಲಸದಲ್ಲಿ ಅತ್ಯಧಿಕವಾಗಿ ಉಪಕರಿಸಿದ ಎಲ್ಲ ಇತರರಿಗೂ ಕೃತಜ್ಞತಾಯುಕ್ತವಾದ ಅಭಿನಂದನಗಳನ್ನು ವಂದನೆಗಳನ್ನು ನಾವು ಸಮರ್ಪಿಸುತ್ತೇನೆ. ಇತಿ ಶಮ್.

ಮೈಸೂರು
ತಾ॥ ೨-೩-೧೯೭೮

ಇತಿ ಸಿದ್ಧಾಂತಃ
(ಡಾ॥ ಜಿ. ಮರುಳಸಿದ್ಧಯ್ಯ)
ಪ್ರಾಧ್ಯಾಪಕರು ಮತ್ತು ಸ್ನಾತಕೋತ್ತರ-ಸಂಸ್ಕೃತ-ವಿಭಾಗ ಮುಖ್ಯರು
ಮತ್ತು ನಿರ್ದೇಶಕರು,
ಪ್ರಾಚ್ಯವಿದ್ಯಾಸಂಶೋಧನಾಲಯ,
ಮೈಸೂರು ವಿಶ್ವವಿದ್ಯಾಲಯ, ಮೈಸೂರು.

# ಪರಿಶಿಷ್ಟಂ

## ಭಾರತೀಯಸಂಸ್ಕೃತಿ-ವೀರಶೈವದರ್ಶನ

(ಶ್ರೀಕರಭಾಷ್ಯಭೂಮಿಕೆಯ ಕನ್ನಡ ಭಾಷಾಂತರ)

# ಭಾರತೀಯಸಂಸ್ಕೃತಿ-ವೀರಶೈವದರ್ಶನ

## ೧

## ಹಾದಿಗಳು ಹಲವು ಗುರಿ ಒಂದು

ಮೂರು ಲೋಕಗಳ ವೈಭವವೆಂಬ ಚಿತ್ರರಚನೆಗೆ ಭಿತ್ತಿಯಂತಿರುವ ಸಚ್ಚಿದಾನಂದ ಸ್ವರೂಪನಾದ ಪರಶಿವಬ್ರಹ್ಮನಿಗೆ ನಮಸ್ಕಾರ.

ಶಾಸ್ತ್ರವನ್ನು ಬಲ್ಲವರು ಯಾವಳನ್ನು ಎಲ್ಲ ಲೋಕಗಳ ಪ್ರಕೃತಿಯೆಂದೂ, ಶಂಭುವಿನ ಸಹಧರ್ಮ ಚಾರಿಣಿಯೆಂದೂ ಹೇಳುವರೋ ಅಂತಹ ಪರಶಿವೆಗೆ ನಮಿಸುವೆನು.

—ಸಿ. ಶಿವಾಮಣಿ

**ಸುಖಮೂಲ**

ಲೋಕದಲ್ಲಿ ಎಲ್ಲರ ಉದ್ದೇಶವೂ ದುಃಖಮಿಶ್ರವಲ್ಲದ ಸುಖವು ಬೇಕೆಂಬುದು. ಹಾಗಾದರೆ ಅಂಥ ಮಿಗಿಲಾದ ಸುಖವು ಯಾವುದು ? ಎಂದು ವಿಚಾರಮಾಡಿದ ಹಿರಿಯರು 'ಆ ಸುಖವು ಪರ ಬ್ರಹ್ಮವೇ' ಎಂದು ನಿರ್ಣಯಿಸಿದರು.

ಈ ದಿಶೆಯಲ್ಲಿ ಉಪನಿಷತ್ತಿನಲ್ಲಿ ನಡೆದ ಮೀಮಾಂಸೆಯೊಂದು ಹೀಗಿದೆ–'ಒಮ್ಮೆ ನಾರದನು ಸನತ್ಕುಮಾರನನ್ನು ಕುರಿತು ಕೇಳಿದ– 'ಸ್ವಾಮಿ, ಸುಖದ ಸ್ವರೂಪವೇನು ? ಆ ಬಗೆಗೆ ವಿವರವಾಗಿ ತಿಳಿಸಬೇಕು' ಎಂದು.

ಸನತ್ಕುಮಾರನು ಹೇಳಿದ– ಯಾವುದು ಅತ್ಯಂತ ವಿಪುಲವೋ, ಅನಂತವೋ, ಅದು ಸುಖ. ಅಲ್ಪದಲ್ಲಿ ಸುಖವಿಲ್ಲ. 'ಭೂಮ'ವೆಂಬುದೇ ಆ ಸುಖ. ಭೂಮ ಎಂದರೆ ವಿಪುಲ. ಎಂದಮೇಲೆ ಆ ಭೂಮವನ್ನೇ ಅರಿಯಬೇಕು.

ನಾರದ ಕೇಳಿದ–'ಸ್ವಾಮಿ, ಹಾಗಾದರೆ ಭೂಮವೆಂಬುದನ್ನೇ ಅರಿಯಬಯಸುವೆನು.'

ಅವನು ಹೇಳಿದ–'ಮನುಷ್ಯನು ಯಾವ ಒಂದು ಸ್ಥಿತಿಯಲ್ಲಿ ತನಗಿಂತ ಬೇರೆಯಾಗಿ ಯಾವುದನ್ನೂ ನೋಡುವುದಿಲ್ಲವೋ, ಕೇಳುವುದಿಲ್ಲವೋ, ಅರಿಯುವುದಿಲ್ಲವೋ ಅದೇ ಭೂಮ' ಎಂದರೆ ಎಲ್ಲವೂ ತಾನೇ ಆಗಿರುವೆನೆಂಬ ಭಾವ ಮತ್ತು ಯಾವ ಸ್ಥಿತಿಯಲ್ಲಿ ಎರಡನೆಯದನ್ನು ನೋಡುವನೋ, ಕೇಳುವನೋ, ಅರಿಯುವನೋ ಅದು ಅಲ್ಪ. 'ಭೂಮಾ' ಎಂಬುದೆ ಅಮೃತ ; 'ಅಲ್ಪ' ವೆಂಬುದು 'ಮರ್ತ್ಯ.'

ನಾರದ ಮತ್ತೆ ಕೇಳಿದ– ಸ್ವಾಮಿ 'ಭೂಮಾ' ಎಂಬುದು ಎಲ್ಲಿದೆ ?

ಸನತ್ಕುಮಾರ ಉತ್ತರಿಸಿದ– "ಅದು ತನ್ನ ಮಹಿಮೆಯಲ್ಲಿಯೇ ಅಡಗಿದೆ. ಅಥವಾ ಅಲ್ಲಿಯೂ ಇಲ್ಲ. ಏಕೆಂದರೆ ಅದು ನಿರಾಲಂಬ."

ಇದರಿಂದ ತನಗಿಂತ ಬೇರೆಯಾಗಿ ಯಾವುದನ್ನೂ ನೋಡದೆ, ಕೇಳದೆ, ತಿಳಿಯದೆ ಇರುವುದೇ ಭೂಮ. ಅದೇ ಅಮೃತ. ಅದೇ ದುಃಖ ಲವಲೇಶವೂ ಬೆರೆಯದ ಸುಖ. ಅದಲ್ಲದುದೆಲ್ಲವೂ ಅಲ್ಪ ; ದುಃಖ ಮಿಶ್ರಿತ. ಭೂಮವೆಂಬ ಸುಖವು ತನ್ನಲ್ಲಿಯೇ ಅಡಗಿದೆ ; ಹೊರಗಲ್ಲ ಎಂಬುದು ಶ್ರುತಿಯ ಭಾವ (ಛಾಂ. ೭–೨೪–೧.)

### ದರ್ಶನ ಸ್ವರೂಪ

ಮರ್ತ್ಯವಲ್ಲದ ಸುಖವನ್ನು ಕಾಣಲೆಂದೇ ಎಲ್ಲ ದರ್ಶನಗಳೂ ಹೊರಟಿವೆ 'ದರ್ಶನ' ಎಂದರೆ ಸ್ವಾತ್ಮ ಪ್ರತ್ಯಕ್ಷ :– ತನ್ನನ್ನು ಜ್ಞಾನದಿಂದ ಅರಿಯುವುದು : ತಾನು ಯಾರು ? ಎಂದು ಪ್ರಶ್ನಿಸಿ, ಗುರುಮುಖದಿಂದ ತಿಳಿದುಕೊಳ್ಳುವುದು. 'ದೃಶಿರ್' ಪ್ರೇಕ್ಷಣೇ ಎಂಬ ಧಾತುವಿಗೆ ಲ್ಯುಟ್ ಪ್ರತ್ಯಯವು ಬಂದು ಅನಾದೇಶವಾಗಿ 'ದರ್ಶನ' ಶಬ್ದವು ನಿಷ್ಪನ್ನವಾಗುತ್ತದೆ. ಅತೀಂದ್ರಿಯವಾದ ಆ ಆತ್ಮಸಾಕ್ಷಾತ್ಕಾರವು ಶಾಸ್ತ್ರವೆಂಬ ಕಣ್ಣಿಲ್ಲದೆ ಕಾಣುವುದಿಲ್ಲ. ಆದ್ದರಿಂದ ಶಾಸ್ತ್ರವನ್ನು 'ದರ್ಶನ' ಎಂದು ಕರೆಯಲಾಗಿದೆ.

ಉಪನಿಷತ್ತಿನಲ್ಲಿ ಹೇಳಿರುವ ಆತ್ಮ ಸಂದರ್ಶನಕ್ಕೆ 'ಅಪರೋಕ್ಷಾನುಭೂತಿ' 'ಪ್ರತಿಬೋಧ' ಮುಂತಾದ ಪರ್ಯಾಯ ಪದಗಳಿವೆ.

'ಹಾದಿಗಳು ಹಲವು, ಗುರಿ ಒಂದು' (ಮೃಗ್ಯಾಭೇದೇಽಪಿ ಮಾರ್ಗಭೇದಸ್ಯ ಸಂಭವಃ) ಮೇಲೆ ಹೇಳಿದಂತೆ ತನ್ನ ಮಹಿಮೆಯಲ್ಲಿ ಅಡಗಿರುವ ಆ ಪರವಸ್ತು ಒಂದು. ಅದನ್ನು ಕಾಣಹೊರಟ ಹಾದಿಗಳು ಆಯಾ ಸಾಧಕರ ಅನುಭವಗಳಿಗೆ ಅನುಗುಣವಾಗಿ ಹಲವಾರು ತೆರನಾಗಿವೆ. ಅವುಗಳನ್ನು ಉಪನಿಷತ್ತುಗಳಲ್ಲಿ ಮೂವತ್ತೆರಡು ವಿದ್ಯೆಗಳು[1] ಎಂದು ಗ್ರಹಿಸಲಾಗಿದೆ. ದಿವ್ಯಧ್ವನಿಯಂತಿರುವ ಈ ಉಪನಿಷದ್ವಾಣಿಯು ಆಯಾ ಸಂಸ್ಕೃತಿಯ ಅಧಿಕಾರಿಗಳಿಗೆ ಬೇರೆ ಬೇರೆಯಾಗಿ ಅನುಭವಕ್ಕೆ ಬರುತ್ತದೆ. ಒಂದೇ ವಸ್ತು ಅಭಿರುಚಿಭೇದದಿಂದ ಒಬ್ಬೊಬ್ಬರಿಗೆ ಒಂದೊಂದು ತೆರನಾಗಿ ಕಾಣುತ್ತದೆ. ಶಿವಗಂಗೆ ಬೆಟ್ಟವು ಒಂದೇ ಆದರೂ ಅದು ಒಂದೊಂದು ದಿಕ್ಕಿನಲ್ಲಿ ಒಂದೊಂದು ಆಕಾರವಾಗಿ ಕಾಣುವಂತೆ, ಪುಷ್ಪದಂತ ಕವಿಯು ಶಿವ ಮಹಿಮ್ನದಲ್ಲಿ ಹಲವಾರು ಕಡೆಗಳಿಂದ ಹರಿದು ಬರುವ ನದಿಗಳೆಲ್ಲವೂ ಹೇಗೆ ಒಂದೇ ಸಮುದ್ರವನ್ನು ಸೇರುತ್ತವೆಯೋ, ಅದರಂತೆ ಅವರವರ ಅಭಿರುಚಿಗೆ ತಕ್ಕ ಹಾಗೆ ನೇರವಾಗಿ ಅಥವಾ ಬಳಸುದಾರಿಗಳಲ್ಲಿ ಹೊರಟಿರುವ ಜನರೆಲ್ಲರೂ ಸೇರುವುದು ಆ ಪರವಸ್ತುವೊಂದನ್ನೇ." [2]

---

[1] ಮಧುವಿದ್ಯೆ, ಶಾಂಡಿಲ್ಯವಿದ್ಯೆ, ಉಪಕೋಸಲವಿದ್ಯೆ, ಪರ್ಯಂಕವಿದ್ಯೆ, ಪಂಚಾಗ್ನಿವಿದ್ಯೆ, ಸಂವರ್ಗವಿದ್ಯೆ, ದಹರವಿದ್ಯೆ, ಮುಂತಾಗಿ ಮೂವತ್ತೆರಡು ವಿದ್ಯೆಗಳಿಂದ ಉಪಾಸ್ಯನಾದವನು ಪರಶಿವನು. (ಶ್ರೀಕರ ಭಾಷ್ಯ ೧–೨–೪೫).

[2] 'ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲನಾನಾಪಥಜುಷಾಮ್ ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ'

೨

# ಭಾರತೀಯ ಸಂಸ್ಕೃತಿ ಗಂಗೋತ್ರಿ

ಭಾರತೀಯ ದರ್ಶನಗಳು ಅಥವಾ ಸಂಸ್ಕೃತಿಯ ಗಂಗೋತ್ರಿಯು ವೇದವೇ. ವೇದವೆಂಬುದು ಒಂದು ಹೊತ್ತಗೆಯಲ್ಲ. ಅದೊಂದು ಕಡೆಯಿಲ್ಲದ ನುಡಿಗಡಲು. ಭರತಖಂಡದ ಇತಿಹಾಸದಲ್ಲಿ ಮತ-ಕುಲ-ಶಾಸ್ತ್ರಗಳ ಹಾಗೂ ಸಮಾಜಶಾಸ್ತ್ರ ಮೊದಲಾದವುಗಳ ಮೂಲವು ವೈದಿಕವಾಙ್ಮಯವೇ ! ಭಾರತೀಯ ದರ್ಶನಗಳ ಮತ್ತು ಆ ಸಂಸ್ಕೃತಿಯ ಪ್ರಾಣವು ವೇದವೇ.

## ವೇದ–ಶ್ರುತಿ

'ವಿದ– ಜ್ಞಾನೇ' 'ವಿದ– ಸತ್ತಾಯಾಂ' 'ವಿದ್‌ಲೃ– ಲಾಭೇ' 'ವಿದ– ವಿಚಾರಣೇ' ಎಂಬ ಪಾಣಿನೀಯ ಧಾತುಪಾಠವನ್ನು ಅನುಸರಿಸಿ ಕರಣ, ಅಧಿಕರಣ, ಕಾರಕ ಮುಂತಾದ ಅರ್ಥಗಳಲ್ಲಿ 'ಘಙ್' ಪ್ರತ್ಯಯವು ಬಂದು 'ವೇದ' ಶಬ್ದವು ಸಿದ್ಧವಾಗಿದೆ. ಯಾವುದನ್ನು ಅಭ್ಯಸಿಸಿ ಜನರು ನಿಜವನ್ನು ತಿಳಿದು,ಅದನ್ನು ಬಳಕೆಯಲ್ಲಿ ತಂದು ಇಲ್ಲಿ (ಇಹ) ಯ ಮತ್ತು ಅಲ್ಲಿ (ಪರ) ಯ ಐಹಿಕ-ಆಮುಷ್ಮಿಕ ಸುಖಗಳನ್ನು ಪಡೆಯುವರೋ ಅದು ವೇದ.

ಜ್ಞಾನಸ್ವರೂಪವಾದ ಈ ವೇದವು ಒಂದು. ಆದರೂ ಅದು ವಿನಿಯೋಗದೃಷ್ಟಿಯಿಂದ ಋಕ್-ಯಜುಸ್-ಸಾಮ ಮತ್ತು ಅಥರ್ವ ಎಂದು ನಾಲ್ಕು ಭಾಗಗಳಲ್ಲಿ ನಮಗೆ ದೊರೆತಿದೆ. ವೇದ ಭಾಷ್ಯದಲ್ಲಿ– 'ಋಕ್ಕುಗಳಿಂದ ಸ್ತುತಿಸುತ್ತಾರೆ; ಯುಜುಸ್ಸುಗಳಿಂದ ಯಜಿಸು (ಪೂಜಿಸು–ಆರಾಧಿಸು–ಸಮರ್ಪಿಸು)ತ್ತಾರೆ ; ಸಾಮಗಳಿಂದ ಹಾಡುತ್ತಾರೆ ; ಅಥರ್ವದಿಂದ ಫಲವಿಚಾರವು ವಿಹಿತವಾಗಿದೆ;' ಎಂದು ಹೇಳಿದೆ. ಸಂಹಿತಾರೂಪವನ್ನು ತಳೆದ ಈ ನಾಲ್ಕಕ್ಕೂ ವೇದವೆಂದೇ ಹೆಸರು.

'ಶ್ರುತಿ' ಎಂದು ವೇದಕ್ಕೆ ಮತ್ತೊಂದು ಹೆಸರು. 'ಶ್ರು– ಶ್ರವಣೇ' ಎಂಬ ಧಾತುವಿಗೆ ಕರಣ-ಕಾರಕ ಅರ್ಥಗಳಲ್ಲಿ 'ಕ್ತಿನ್' ಪ್ರತ್ಯಯವು ಬಂದು 'ಶ್ರುತಿ' ಎಂಬ ಶಬ್ದವು ಸಿದ್ಧವಾಗಿದೆ. ಜಗತ್ತಿನ ಸೃಷ್ಟಿಯಾದಂದಿನಿಂದ ಇಂದಿನವರೆಗೆ, ಬ್ರಹ್ಮದಿಂದ ಹುಲ್ಲುಕಡ್ಡಿಯವರೆಗೆ, ಎಲ್ಲ ಪದಾರ್ಥಗಳ ನಿಜ ಸ್ವರೂಪವನ್ನು ಜನರು ಯಾವುದರ ಮೂಲಕ ಗುರುಮುಖದಿಂದ ಕೇಳಿ ತಿಳಿಯುವರೊ ಅದು ಶ್ರುತಿ.

ಋಕ್ ಮೊದಲಾದ ವೇದಗಳು ಮತ್ತು ಅವನ್ನು ಅನುಸರಿಸಿರುವ ಬ್ರಾಹ್ಮಣ-ಆರಣ್ಯಕ ಮತ್ತು ಉಪನಿಷತ್ತುಗಳು ಹಾಗೂ ವೇದ ಸಮ್ಮತವಾದ ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳು ಕೂಡ 'ಶ್ರುತಿ' ಎನಿಸಿವೆ.[1] ನಿಗಮಾಗಮಗಳು ಪರಶಿವನ ವಿಮರ್ಶಶಕ್ತಿಸ್ವರೂಪಗಳು ಎಂದು ಸ್ಮೃತಿಗಳಲ್ಲಿ ಹೇಳಿದೆ.[2]

---

[1] ಶ್ರುತಿಯು ವೈದಿಕ ಮತ್ತು ತಾಂತ್ರಿಕ ಎಂದು ಎರಡು ವಿಧ– ಮನುಸ್ಮೃತಿ ಕುಲ್ಲೂಕ ಭಟ್ಟನ ವ್ಯಾಖ್ಯಾನ.

[2] ಪರಶಿವನ ವಿಮರ್ಶಶಕ್ತಿಯೇ ನಿಗಮ ಮತ್ತು ಆಗಮಗಳೆನಿಸಿ ಎಲ್ಲ ತತ್ತ್ವಗಳನ್ನು ಬೆಳಕಿಗೆ ತಂದಿವೆ– (ಶ್ರೀ ಕರಭಾಷ್ಯ ೧–೧–೩)

**ವೇದೋತ್ಪತ್ತಿ**

ವೇದಗಳ ಉತ್ಪತ್ತಿ ಅಥವಾ ವೇದ ರಚನೆಯ ವಿಷಯದಲ್ಲಿ ಪಾಶ್ಚಿಮಾತ್ಯ ವಿದ್ವಾಂಸರು ಮತ್ತು ಭಾರತೀಯ ಪಂಡಿತರ ಕಲ್ಪನೆಗಳು ಬೇರೆ ಬೇರೆ ಇವೆ. ಪಾಶ್ಚಿಮಾತ್ಯರು ಆಧುನಿಕ ವಿಜ್ಞಾನ ಮತ್ತು ತುಲನಾತ್ಮಕ ಭಾಷಾಶಾಸ್ತ್ರದ ನಿಯಮಗಳಿಗೆ ಅನುಗುಣವಾಗಿ ವೇದೋತ್ಪತ್ತಿ ಮತ್ತು ಅವುಗಳ ಅರ್ಥಾಭಿವ್ಯಕ್ತಿಗಳನ್ನು ಗ್ರಹಿಸಬೇಕು; ಎನ್ನುತ್ತಾರೆ. ಅವರ ದೃಷ್ಟಿಯಲ್ಲಿ ವೇದವು ಒಂದು ಗ್ರಂಥವಲ್ಲ; ಅದೊಂದು ಗ್ರಂಥರಾಶಿ. ಆದರೆ ಅದು ಒಬ್ಬನೇ ವ್ಯಕ್ತಿ ಒಂದು ಕಾಲದಲ್ಲಿ ಬರೆದುದೂ ಅಲ್ಲ. ಬೇರೆ ಬೇರೆ ಕಾಲಗಳಲ್ಲಿ ಹಲವಾರು ವ್ಯಕ್ತಿಗಳು ಭೌತಿಕ ವಸ್ತುಗಳ ಬಗೆಗೆ ಪ್ರಕಟಿಸಿದ ಉದ್ಗಾರಗಳ ಸಂಗ್ರಹವೇ ವೇದ. ಪ್ರಾಯಶಃ ಇವುಗಳ ರಚನೆಗೆ ಸುಮಾರು ಹದಿನೈದು ಇಪ್ಪತ್ತು ಶತಮಾನಗಳಾದರೂ ಸಂದಿರಬೇಕು.

"ವೇದಕಾಲದ ಆರ್ಯರು ಮೂಲತಃ ಭಾರತೀಯರಲ್ಲ. ಇವರು ಹೊರಗಿನಿಂದ ವಲಸೆ ಬಂದವರು. ಭಾರತದ ವಾಯುವ್ಯ ಗಡಿಯಿಂದ ಭಾರತವನ್ನು ಪ್ರವೇಶಿಸಿದ "ಆರ್ಯ" ಎಂಬ ಜನಾಂಗವು ಅಲ್ಲಿಯ ಪ್ರಾಕೃತಿಕ ವೈಭವವನ್ನು ಕಂಡು ಭಾವೋನ್ಮಾದದಿಂದ ಹೊರಗೆಡಹಿದ ಉದ್ಗಾರಗಳೇ ವೇದ ಋಕ್ಕುಗಳು. ಭೌತಿಕವಾದ ಅಗ್ನಿ, ವರುಣ, ವಾಯು ಮುಂತಾದುವುಗಳಲ್ಲಿ ದೇವತ್ವವನ್ನು ಆರೋಪಿಸಿ. ಅವರಿಂದ ಐಹಿಕ- ಭೋಗ-ಭಾಗ್ಯಗಳನ್ನು ಬೇಡಿರುವುದು ಪ್ರಾಯಃ ಅಲ್ಲಿ ಹೇರಳವಾಗಿ ಕಂಡುಬರುತ್ತದೆ. 'ಯಾವ ಆಧಾರವೂ ಇಲ್ಲದೆ ಆಕಾಶವು ಹೇಗೆ ಮೇಲೆ ನಿಂತಿದೆ!' 'ಕೆಂಪುಬಣ್ಣದ ಹಸುಗಳು ಬಿಳಿಯ ಬಣ್ಣದ ಹಾಲನ್ನು ಹೇಗೆ ಕೊಡುತ್ತವೆ? ಮುಂತಾಗಿ ವಿಚಾರ ಮಾಡಿರುವ ವೇದಗಳು ಅಂದಿನ ಮಾನವನ ಅಪ್ರಬುದ್ಧ ಸ್ಥಿತಿಯನ್ನು ಸಾರುತ್ತವೆ." ಮುಂತಾಗಿ ಅವರು ವಾದಿಸುತ್ತಾರೆ.

ಆದರೆ ಈ ವಿಷಯದಲ್ಲಿ ಭಾರತೀಯರ ಕಲ್ಪನೆಯೇ ಬೇರೆ. ವೈದಿಕ ಧರ್ಮದ ಉಜ್ವಲ ಅಭಿಮಾನಿಗಳೂ ಮಹರ್ಷಿಕಲ್ಪರೂ ಶ್ರೋತ್ರಿಯಬ್ರಹ್ಮನಿಷ್ಠರೂ ಆದ ಸ್ವಾಮಿ ದಯಾನಂದಸರಸ್ವತಿಯವರು ಮತ್ತು ಅತ್ಯಾಧುನಿಕ ವೈದಿಕ ವಾಙ್ಮಯ ಸಂಶೋಧಕರಾದ ಮಹರ್ಷಿ ಅರವಿಂದ ಘೋಷ್ ಮುಂತಾದವರು ವೈದಿಕ ವಾಙ್ಮಯದಲ್ಲಿ ಅಪಾರ ಸಂಶೋಧನೆಗಳನ್ನು ನಡೆಸಿರುವ ಅಂಶ ಸುಪ್ರಸಿದ್ಧ. ಇವರಲ್ಲಿ ಒಬ್ಬರಾದ ಶ್ರೀ ಅರವಿಂದರ ಮಾತಿನಲ್ಲಿ ಹೇಳುವುದಾದರೆ–

'ಭಾರತೀಯ ಪರಂಪರೆಯು ವೇದೋತ್ಪತ್ತಿಯ ರಹಸ್ಯವನ್ನು ಬಹು ಪ್ರಾಮಾಣಿಕತೆಯಿಂದ ಅಂಗೀಕರಿಸಿದೆ. ಋಷಿ ವೈದಿಕಸೂಕ್ತಗಳ ನಿರ್ಮಾಪಕನಲ್ಲ; ಅವನು ಕೇವಲ ಮಂತ್ರದ್ರಷ್ಟಾರ; ಒಂದು ಸನಾತನ ಸತ್ಯ ಅಥವಾ ಅಪೌರುಷೇಯ ಜ್ಞಾನದ್ರಷ್ಟಾರ. ವೇದದ ಭಾಷೆ ಸ್ವಯಂ ಶ್ರುತಿ. ಬೌದ್ಧಿಕವಾಗಿ ನಿರ್ಮಿಸಿದ ಛಂದಸ್ಸಲ್ಲ ಅದು. ಬದಲಾಗಿ ಸನಾತನ ಕಾಲದ ಮಹರ್ಷಿಗಳು ತಪೋಮಗ್ನರಾಗಿ ಸತ್ಯೋದ್ರಿಕ್ತಸ್ಥಿತಿಯಲ್ಲಿರುವಾಗ ತರಂಗತರಂಗವಾಗಿ ಅಸೀಮದಿಂದ ಹೊರಟ ಆ ದಿವ್ಯ ಧ್ವನಿ ಅವರ ಅಂತಃಶ್ರವಣವನ್ನು ಪ್ರವೇಶಿಸಿ, ಮುಮ್ಮೊದಲಿಗೆ ಅದು ತನಗೆ ತಾನೇ ಅಪೌರುಷೇಯವೆನಿಸಿತು. ಅವರ ಅಂತರ್ದರ್ಶನ ಹಾಗೂ ಅಂತಃಶ್ರವಣಗೋಚರವಾದ ವೈದಿಕ ವಾಕ್ಝರಿಯೇ ಅದು; ಎನ್ನುತ್ತಾರೆ, [1]

---

[1] 'ವೇದರಹಸ್ಯ'– (ಭಾ. ೧ ಪು. ೧೧) ಮಹರ್ಷಿ ಅರವಿಂದಘೋಷ್ ವಿರಚಿತ (ಆಚಾರ್ಯ ಅಭಯದೇವ ವಿದ್ಯಾಲಂಕಾರ ಅವರು ಅನುವಾದಿಸಿದ ಹಿಂದಿ ಹೊತ್ತಿಗೆಯ ಭಾಷಾಂತರ)

ಇದೇ ವಿಷಯವನ್ನು ಮುಂದುವರೆಸಿ ಶ್ರೀ ಅರವಿಂದರು "ವೇದವು ಈಶ್ವರೀಯ ಜ್ಞಾನ, ಅಥವಾ ಸ್ವತಃ ಅಭಿವ್ಯಕ್ತ ಪರಿಜ್ಞಾನ ಎಂಬ ಕಲ್ಪನೆಯಲ್ಲಿ ಯಾವ ಚಮತ್ಕಾರವಾಗಲಿ ಅಲೌಕಿಕತೆ ಯಾಗಲಿ ಇರುವುದಿಲ್ಲ. ಯಾವ ಋಷಿ, ಈ ಶಕ್ತಿಗಳನ್ನು ಸಾಧಿಸಿದನೋ ಆತ ಮುನ್ನಂದೆ ಆತ್ಮ ಸಾಧನೆಯಿಂದ ಅವುಗಳನ್ನು ಸಾಕ್ಷಾತ್ಕರಿಸಿಕೊಂಡ. ಜ್ಞಾನ ಎಂಬುದು ಒಂದು ಯಾತ್ರೆ. ಅದು ಗುರಿ ಮುಟ್ಟುವಂತಹುದು. ಅದೊಂದು ಅನ್ವೇಷಣೆ ಹಾಗೂ ವಿಜಯ. ಸ್ವತಃ ಪ್ರಕಾಶದ ಈ ಅವಸ್ಥೆ ಕೇವಲ ಆಂತರಿಕವಾಗಿ ಹೊಳೆತು ಗುರಿಮುಟ್ಟಿತು. ಅದು ಈ ಪ್ರಕಾಶದ ಒಂದು ಕಟ್ಟಕಡೆಯ ವಿಜಯ. 'ವೇದ ವಿಷಯಕವಾದ ಯಾತ್ರೆ' ಎಂಬುದು ಆಲಂಕಾರಿಕ ಉಕ್ತಿ ಆದರೂ ಇದು ಇಲ್ಲಿ ಬಹು ಸಮಂಜಸವಾಗಿ ಒಪ್ಪುತ್ತದೆ. ಏಕೆಂದರೆ ಅದು ಸತ್ಯಪಥದ ಮೇಲೆ ನಡೆದ ಆತ್ಮನ ಒಂದು ಪ್ರಯಾಣ, ಅದು ಸತತವಾಗಿ ಮುಂದುವರಿದಿದೆ. ಆ ಪಥದ ಮೇಲೆ ಮುನ್ನಡೆದಂತೆಲ್ಲ ಮಾನವನು ಮೇಲೆ ಮೇಲಕ್ಕೆ ಏರುತ್ತಾನೆ. ಆಗ ಆ ದಿವ್ಯ ಶಕ್ತಿ ಮತ್ತು ಅಲೌಕಿಕಪ್ರಕಾಶಗಳ ನೂತನ ನೆಲೆ ಈ ಬಯಕೆಗಳಿಗಾಗಿ ತೆರೆಯುತ್ತದೆ.

ಐತಿಹಾಸಿಕದೃಷ್ಟಿಕೋನದಿಂದ ನೋಡಿದರೆ ಋಗ್ವೇದವು ಒಂದು ಉತ್ಕೃಷ್ಟ ಲೇಖ; ಎಂದರೆ ಮಾನವಲೋಕದ ಸಾಮೂಹಿಕಪ್ರಗತಿಗಾಗಿ ಒಂದಾನೊಂದು ಕಾಲದಲ್ಲಿ ವಿಶೇಷ ಪ್ರಯಾಸ ದಿಂದ ಪಡೆದ ವರ ; ಅದು. ತನ್ನ ನಿಗೂಢವಾದ ಅರ್ಥವಲ್ಲಾಗಲಿ ಸ್ಥೂಲವಾದ ಅರ್ಥವಲ್ಲಾಗಲಿ ಇದೊಂದು ಕರ್ಮದ ಪುಸ್ತಕ. ಅದು ಆಭ್ಯಂತರ ಮತ್ತು ಬಾಹ್ಯಯಜ್ಞಗಳ ಒಂದು ಗ್ರಂಥ. ಇದೊಂದು ಆತ್ಮಸಂಗ್ರಾಮ. ಮಾನವನನ್ನು ವಿಚಾರ ಮತ್ತು ಅನುಭವಗಳ ಸ್ತರಗಳಲ್ಲಿ ಅನ್ವೇಷಿಸು ವಾಗ ಗಳಿಸಿದ ವಿಜಯ. ಮೇಲಾಗಿ ಮಾನವನನ್ನು ಮೇಲ್ಮಟ್ಟಕ್ಕೆ ಏರಿಸಿದ್ದು ಅದು. ಆದರೆ ಅದು ಭೌತಿಕ,ಹಾಗೂ ಪಾಶಬದ್ಧರಾದ ಮನುಷ್ಯರಿಗೆ ದುಷ್ಪ್ರಾಪ್ಯ. ಒಟ್ಟಿನಲ್ಲಿ ಹೇಳುವುದಾದರೆ ವೇದವು ಮರ್ತ ದಲ್ಲಿ ಮಾನವನ ಕಲ್ಯಾಣಕ್ಕಾಗಿ ಅವತರಿಸಿದ ದಿವ್ಯಜ್ಯೋತಿ, ದಿವ್ಯಶಕ್ತಿ ಮತ್ತು ದಿವ್ಯಕೃಪೆಗಳ ಸ್ತುತಿ."

"ವೈದಿಕ ಮಂತ್ರಗಳು ವಸ್ತುತಃ ಒಂದು ಪೂರ್ಣ ಛಂದೋಬದ್ಧರೂಪು ತಳೆದಿವೆ. ಅವುಗಳ ಪದ್ಧತಿಯಲ್ಲಿ ಒಂದು ಸತತ ಸೂಕ್ಷ್ಮತೆ ಮತ್ತು ಚಾತುರ್ಯವಿದೆ. ಆದರೆ ಪಾಶ್ಚಾತ್ಯರು ಹೇಳುವಂತೆ ಅವು ಅಸಭ್ಯ, ಅನಾಗರಿಕ ಮತ್ತು ಕಾರ್ಮಿಕರ ಕೃತಿಗಳಂತೂ ಅಲ್ಲ. ಬದಲಾಗಿ ಅವು ಒಂದು ಶ್ರೇಷ್ಠ ಕಲೆ ಮತ್ತು ಸಚೇತನ ಕಲೆಯ ಸಜೀವನಿಃಶ್ವಾಸ. ಆ ಕಲೆ ತನ್ನ ರಚನೆಗಳಿಂದ ಆತ್ಮಸಂವ ರ್ಶನದ ಅಂತಃಪ್ರೇರಣೆಯ ಸಬಲ ಮತ್ತು ಸುನಿಯಂತ್ರಿತ ಗತಿಯಲ್ಲಿ ಅಭಿವ್ಯಕ್ತವಾಗಿದೆ." (ಪು. ೧೨– ೧೩)

ವೈದಿಕ ವಾಙ್ಮಯದಲ್ಲಿ ವೇದೋತ್ಪತ್ತಿಯನ್ನು ಕುರಿತು ಹೀಗೆ ಹೇಳಿದೆ– "ಸೃಷ್ಟಿಯ ಆದಿ ಯಲ್ಲಿ ಭಗವಂತನು ತನ್ನಲ್ಲಿ ಸೂಕ್ಷ್ಮವಾಗಿ ಪ್ರಜ್ಞಾರೂಪದಿಂದ ಅಡಗಿದ್ದ ಜ್ಞಾನವನ್ನು ತಪೋಮಗ್ನ ರಾಗಿದ್ದ ಅಗ್ನಿ, ವಾಯು, ಸೂರ್ಯ ಮತ್ತು ಅಂಗಿರಾ ಎಂಬ ಹೆಸರಿನ ಮಹರ್ಷಿಗಳ ಮೂಲಕ ಕ್ರಮ ವಾಗಿ ಋಕ್, ಯಜುಸ್, ಸಾಮ ಮತ್ತು ಅಥರ್ವ ವೇದಗಳನ್ನು ಪ್ರಕಟಿಸಿದನು.[1]

---

[1] ತೇಭ್ಯಃ ತಪ್ತೇಭ್ಯಸ್ತ್ರಯೋ ವೇದಾ ಅಜಾಯಂತಾಗ್ನೇ ಋಗ್ವೇದೋ ವಾಯೋ ಯಜುರ್ವೇದಃ ಸೂರ್ಯಾತ್ಸಾಮವೇದಃ– (ಶ. ಕಾಂ. ೧೧. ಅ. ೫. ಬ್ರಾಂ. ೨. ಕಂ. ೩)

'ಸಚ್ಚಿದಾನಂದ ಸ್ವರೂಪನಾದ ಆ ಭಗವಂತನಿಂದಲೇ ಋಗಾದಿ ನಾಲ್ಕು ವೇದಗಳು ಉದಿಸಿದವು.[1] "ವೇದವು ಐಶ್ವರೀವಾಣಿ. ಅದು ಭಗವಂತನ ನಿಃಶ್ವಸಿತ"[2] ಪರಶಿವನ ವಿಮರ್ಶ ಶಕ್ತಿರೂಪವಾದ ಪ್ರಜ್ಞೆ; (ವೇದವಾಣಿ) ಅವನಿಂದ ಲೋಕಕಲ್ಯಾಣಾರ್ಥವಾಗಿ ನಿಃಶ್ವಸಿತದಂತೆ ಸಹಜವಾಗಿ ಋಷಿಹೃದಯ ದಿಂದ ಅದು ಹೊರಹೊಮ್ಮಿತು.[3] ಮುಂತಾದ ಉಕ್ತಿಗಳು ವೇದೋತ್ಪತ್ತಿಯನ್ನು ಕುರಿತು ಪ್ರಸ್ತಾಪಿ ಸಿವೆ. ಶಬ್ದ + ಮತ್ತು ಅರ್ಥಗಳು ಶಿವ-ಶಕ್ತಿಗಳಂತೆ ಅವಿನಾಭಾವ ಸಂಬಂಧದಿಂದ ಕೂಡಿವೆ. ಅರ್ಥ ಪ್ರಪಂಚವನ್ನು ಮಾನವನಿಗಾಗಿ ಸೃಜಿಸಿದ ಭಗವಂತನಿಗೆ ಆ ವಸ್ತುಗಳನ್ನು ಮಾನವ ತನ್ನ ಉಪ ಯೋಗಕ್ಕೆ ಬಳಸಿಕೊಳ್ಳಲು ಅವುಗಳ ಪರಿಜ್ಞಾನವನ್ನು ಉಂಟುಮಾಡಿಕೊಡುವುದು ಅಗತ್ಯವಾಯಿತು. ಆದಕ್ಕಾಗಿಯೇ ಆ ಈಶ್ವರಸಂಕಲ್ಪವು ಋಷಿಹೃದಯದ ಮೂಲಕ ವೇದರೂಪವಾಗಿ ಹೊರ ಹೊಮ್ಮಿತು; ಎಂಬುದು ಭಾರತೀಯರ ಕಲ್ಪನೆ.

### ವೇದವು ನಿತ್ಯ ಮತ್ತು ಸ್ವತಃ ಪ್ರಮಾಣ

ಮೀಮಾಂಸಕರ ದೃಷ್ಟಿಯಲ್ಲಿ ವೇದವು ಅನಾದಿ. ಪ್ರಳಯಕಾಲದಲ್ಲಿ ಭಗವಂತನಲ್ಲಿ ಸೂಕ್ಷ್ಮರೂಪದಿಂದ ಅಡಗಿದ್ದ ಅವನ ಪ್ರಜ್ಞಾಶಕ್ತಿಯು ಸೃಷ್ಟಿಯ ತರುವಾಯ "ಪೂರ್ವಸ್ಮರಣೆ"[4] ಯಿಂದ ಮಂತ್ರದ್ರಷ್ಟಾರರಾದ ಋಷಿಗಳ ಮೂಲಕ ಪ್ರಕಟವಾಯಿತು. ವರ್ಣಗಳು ನಿತ್ಯ ಮತ್ತು ಅನೇಕ. ಉಚ್ಚರಿಸುವುದರಿಂದ ವರ್ಣಗಳು ವ್ಯಂಜಕಗಳೇ ಹೊರತು ಉತ್ಪಾದಕಗಳಲ್ಲ. ಆದ್ದರಿಂದ ಶಬ್ದವು ನಿತ್ಯ; ಹಾಗೂ ಪ್ರಮಾಣ; ಎಂಬ ಮಾತು ಎಲ್ಲ ದಾರ್ಶನಿಕರಿಗೂ ಸಮ್ಮತ.

ವೇದಮೂಲವಾದ ಶಬ್ದಗಳು ಲೌಕಿಕವಾಗಿ ಉಚ್ಚರಿಸಿದರೂ ಸಹ ಅವು ನಿತ್ಯ. ಏಕೆಂದರೆ ಆ ಶಬ್ದದಲ್ಲಿರುವ ಅಕ್ಷರಗಳು ನಾಶವಿಲ್ಲದವು. ನಮ್ಮ ಉಚ್ಚಾರ ಮತ್ತು ಶ್ರವಣಗಳು ಅನಿತ್ಯವೇ ಹೊರತು ಅವುಗಳಿಂದ ಅಭಿವ್ಯಕ್ತವಾದ ಶಬ್ದವು ಆಕಾಶದಲ್ಲಿ ಅಡಗುವುದರಿಂದ ಅದು ನಿತ್ಯ.[5] ಎಂದು ಮಹಾಭಾಷ್ಯಕಾರ **ಪತಂಜಲಿಯು** ಸಮರ್ಥಿಸಿದ್ದಾನೆ. ಮಹರ್ಷಿ **ಜೈಮಿನಿಯು** ಮತ್ತೊಬ್ಬರಿಗೆ ಅರ್ಥವಾಗುವುದಕ್ಕಾಗಿ ಉಚ್ಚರಿಸಿದ ಶಬ್ದವು ನಿತ್ಯ[6] ವೆಂದೂ ವೈಶೇಷಿಕ ಸೂತ್ರಕಾರ **ಕಣಾದನು** 'ವೇದವು ಧರ್ಮ ಮತ್ತು ಈಶ್ವರ ವಚನ' ಧರ್ಮವು ಕರ್ತವ್ಯವಾದ್ದರಿಂದಲೂ ಅದು ಈಶ್ವರ ವಚನ

---

[1] ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಮ್ ।
ದುದೋಹ ಯಜ್ಞಸಿಧ್ಯರ್ಥಂ ಋಗ್ಯಜುಸ್ಸಾಮಲಕ್ಷಣಮ್ ॥ (ಮನು ೧-೨೩)
ಅಧ್ಯಾಪಯಾಮಾಸಪಿತೄನ್ ಶಿಶುರಾಂಗಿರಸಃ ಕವಿಃ । (ಮನು ೨-೧೫೦)

[2] "ಅಸ್ಯಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಸ್ಸಾಮ-ವೇದೋಽಥರ್ವಾಂಗಿರಸಃ" (ಬೃ. ೨-೪-೧೦)

[3] ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ । (- ಶ್ವೇತಾಶ್ವತರ)

[4] ಧಾತಾಯಥಾಪೂರ್ವಮಕಲ್ಪಯತ್ ।

[5] ಸರ್ವೇ ಸರ್ವಪದಾದೇಶಾ ದಾಕ್ಷೀ ಪುತ್ರಸ್ಯ ಪಾಣಿನೇಃ । ಏಕದೇಶವಿಕಾರೇ ಹಿ ನಿತ್ಯತ್ವಂ ನೋಪಪದ್ಯತೇ । (ಮಹಾಭಾಷ್ಯ)

[6] ನಿತ್ಯಸ್ತುಸ್ಯಾದ್ದರ್ಶನಸ್ಯ ಪರಾರ್ಥತ್ವಾತ್- (ಪೂ. ಮೀ. ೧.೧-೧೮)
ತದ್ವಚನಾದಾಮ್ನಾಯಸ್ಯ ಪ್ರಮಾಣ್ಯಂ- (ವೈಶೇಷಿಕ. ಸೂ. ೧.೧.೩)

ವಾದ್ದರಿಂದಲೂ ಪ್ರಮಾಣ[1] ವೆಂದೂ ಹೇಳಿದ್ದಾನೆ. ಇನ್ನು ನ್ಯಾಯಸೂತ್ರಕಾರ **ಗೌತಮನು**– ವೇದವು ಆಪ್ತವಚನ ; ಆಪ್ತರು ನುಡಿದ ಮಂತ್ರ ಮತ್ತು ಆಯುರ್ವೇದಗಳು ನಮಗೆ ಪಥ್ಯ; ಎಂದ ಮೇಲೆ ನಮಗೆ ಪರಮ ಆಪ್ತನಾದ ಪರಮಾತ್ಮನ ವಾಣಿ ಪ್ರಮಾಣವಲ್ಲವೇ?[2] ಎಂದೂ, ಯೋಗಶಾಸ್ತ್ರ ಕಾರ **ಪತಂಜಲಿಯು**– ಜಗತ್ಕಲ್ಯಾಣಕ್ಕಾಗಿ ಸತ್ಯವನ್ನು ಮೊದಲು ಉಪದೇಶಿಸಿದವನು ಭಗವಂತ; ಆದ್ದರಿಂದಲೇ ಆತ ಲೋಕಗುರು; ಆತ ಕಾಲಕ್ಕೆ ಮೀರಿದವ; ಆತನ ಮಾತು ನಿತ್ಯ;[3] ಎಂದೂ, ಸಾಂಖ್ಯಶಾಸ್ತ್ರಕರ್ತೃ **ಕಪಿಲನು**– ಪರಮೇಶ್ವರನ ಸ್ವಾಭಾವಿಕ ಶಕ್ತಿಯ ಅಭಿವ್ಯಕ್ತಿಯೇ ವೇದ; ಆದ್ದರಿಂದ ಅದು ಸ್ವತಃ ಪ್ರಮಾಣ;[4] ಎಂದೂ ಸಮರ್ಥಿಸಿದ್ದಾನೆ.

ವೇದಾಂತಶಾಸ್ತ್ರಕಾರರಾದ ಬಾದರಾಯಣರಂತೂ ತಮ್ಮ "ಶಾಸ್ತ್ರಯೋನಿತ್ವಾಧಿಕರಣ (ಬ್ರ. ಸೂ. ೧-೧-೩) ದಲ್ಲಿ ಭಗವಂತನು ಶಾಸ್ತ್ರಪ್ರತಿಪಾದ್ಯನೂ ಶಾಸ್ತ್ರಕಾರಣನೂ ಆಗಿರುವನೆಂದು ಘೋಷಿಸಿ ವೇದವು ನಿತ್ಯ ಹಾಗೂ ಪರಮಪ್ರಮಾಣವೆಂದು ಸಮರ್ಥಿದ್ದಾರೆ.

### ವೇದೋಕ್ತ ವಿಷಯಗಳು

ಇಷ್ಟು ಮಹತ್ವವುಳ್ಳದ್ದು ವೇದ ಎಂದ ಮೇಲೆ ಅದರಲ್ಲಿರುವ ಅಂಥ ಮಹತ್ವ ವಿಷಯಗಳು ಯಾವುವು ?– ಎಂಬ ಸಂದೇಹ ಬರುವುದು ಸಹಜ. ವೇದೋಕ್ತ ವಿಷಯಗಳಲ್ಲಿ ನಾಲ್ಕು ಮುಖ್ಯ. ಅವು **ವಿಜ್ಞಾನ, ಕರ್ಮ, ಉಪಾಸನೆ ಮತ್ತು ಜ್ಞಾನ** ಎಂದು.

**ವಿಜ್ಞಾನ** ಎಂದರೆ ವಸ್ತುತತ್ತ್ವಜ್ಞಾನ; ಜಗತ್ತಿನ ಎಲ್ಲ ಪದಾರ್ಥಗಳ ವಸ್ತುಸ್ಥಿತಿಯನ್ನು ಅರಿತು ಅದನ್ನು ಜಗತ್‌ಕಲ್ಯಾಣಕ್ಕಾಗಿ ಬಳಸಿಕೊಳ್ಳುವ ರಹಸ್ಯ ಪರಿಜ್ಞಾನ. ಇದನ್ನು ವಿಜ್ಞಾನ (Science) ಎಂದು ಕರೆಯುತ್ತಾರೆ. ಈ ಪರಿಜ್ಞಾನವು ಎರಡುಬಗೆ: **ಒಂದು** ಜಗತ್ತಿಗೆ ಕಾರಣ ವಾದ ಪರಮಾತ್ಮನ ಸ್ವರೂಪವನ್ನು ಸರಿಯಾಗಿ ಅರಿತು ಆತನ ಆಜ್ಞೆಯನ್ನು ಪಾಲಿಸುವುದು. **ಎರಡನೆಯದು** ಶಿವನು ಸೃಷ್ಟಿಸಿದ ಪದಾರ್ಥಗಳ ನಿಜಸ್ವರೂಪವನ್ನು ಅರಿತು ಲೋಕಹಿತಕ್ಕಾಗಿ ಆತ್ಮ ಕಲ್ಯಾಣಕ್ಕಾಗಿ ಅವನ್ನು ಉಪಯೋಗಿಸಿಕೊಂಡು ಸುಖಸೌಭಾಗ್ಯಗಳನ್ನು ಪಡೆಯುವುದು.

ಇವೆರಡರಲ್ಲಿ ಬಹುಮುಖ್ಯವಾದುದು ಪರಮೇಶ್ವರನ ಸ್ವರೂಪಜ್ಞಾನ. ಅದನ್ನು ಕಠೋಪ ನಿಷತ್ತು ಸ್ಫುಟವಾಗಿ ಹೇಳಿದೆ– "ಎಲ್ಲರಿಂದಲೂ ಅವಶ್ಯ ಹೊಂದಲ್ಪಡತಕ್ಕವನು ಭಗವಂತ; ಆತನ ವಿಷಯವನ್ನು ಸಂಗ್ರಹವಾಗಿ ಹೇಳುತ್ತೇನೆ. ಓಂ ಎಂಬುದೇ ಆತನ ಸ್ವರೂಪ."[5] ಎಂದು ಆಚಾರ್ಯ ಯಮಧರ್ಮನು ಶಿಷ್ಯ ನಚಿಕೇತನಿಗೆ ಉಪದೇಶಿಸಿದ್ದಾನೆ. 'ಓಂ' ಎಂಬುದು ಪರಮಾತ್ಮನ ಮುಖ್ಯ ವಾದ ಹೆಸರು.

---

[1] ತದ್ವಚನಾದಾಮ್ನಾಯಸ್ಯ ಪ್ರಮಾಣ್ಯಂ– (ವೈಶೇಷಿಕಸೂತ್ರ– ೧.೧.೩)

[2] ಮಂತ್ರಾಯುರ್ವೇದಪ್ರಾಮಾಣ್ಯವಚ್ಚ ತತ್ಪ್ರಾಮಾಣ್ಯಮಾಪ್ತವಚನಾತ್– (ನ್ಯಾ.ಅ. –೨.೧.೬೭)

[3] ಸ ಏಷ ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್– (ಯೋಗಸೂ.೧.೧.೨೬)

[4] ನಿಜಶಕ್ತ್ಯಭಿವ್ಯಕ್ತೇಃ ಸ್ವಾಮಾಣ್ಯಂ– (ಸಾಂಖ್ಯ. ಸೂ. ೫೧)

[5] ಸರ್ವೇ ವೇದಾ ಯತ್ಪದಮಾಮನಂತಿ, ತಪಾಗ್‌ಂಸಿ ಸರ್ವಾಣಿ ಚ ಯದ್ವದಂತಿ ಯದಿ ಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿ ತ್ಯೇತತ್ (ಕಠ. ೨.೧೫)

ಮುಂಡಕೋಪನಿಷತ್ತಿನಲ್ಲಿ ವಿದ್ಯೆಗಳು ಎರಡು: ಒಂದು ಪರಾವಿದ್ಯೆ ಮತ್ತೊಂದು ಅಪರಾವಿದ್ಯೆ. ಇವುಗಳಲ್ಲಿ ಅಭ್ಯುದಯ ಸುಖಸಾಧಕವಾದ ಭೌತಿಕ ವಿಜ್ಞಾನ ಬೋಧಕವಾದ ಋಗಾದಿವಿದ್ಯೆ ಅಪರಾವಿದ್ಯೆ. ಸರ್ವಶಕ್ತನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ನಿಃಶ್ರೇಯ (ಮೋಕ್ಷ) ಸ್ವೆಂಬ ನಿತ್ಯಸುಖವನ್ನು ಪಡೆವುದು 'ಪರಾವಿದ್ಯೆ' [1] ಎಂದು ಹೇಳಿದೆ.

ಈ ವಿಷಯದಲ್ಲಿ ಯುಜುಃ ಶ್ರುತಿಯು ಬ್ರಹ್ಮಕ್ಕಿಂತ ಶ್ರೇಷ್ಠ ವಸ್ತು ಮತ್ತೊಂದಿಲ್ಲ. ಸಮಸ್ತ ವಿಷಯವನ್ನು ವ್ಯಾಪಿಸಿಕೊಂಡಿರುವ ಜಗತ್ಪಾಲಕ ಅವನು. ಸೋಮ ಸೂರ್ಯ ಮತ್ತು ವಿದ್ಯುತ್ (ಅಗ್ನಿ) ಎಂಬ ನೇತ್ರತ್ರಯದಿಂದ ಅವನು ಜಗತ್ತನ್ನು ಜಾಗೃತಗೊಳಿಸಿ ಷೋಡಶಕಳಾಪರಿಪೂರ್ಣನಾಗಿದ್ದಾನೆ. [2] 'ಸರ್ವವ್ಯಾಪಿಯಾದ ಆ ಪರಮಾತ್ಮನ ಪರಮ ಪದವಿಯನ್ನೇ ಜ್ಞಾನಿಗಳು ಬಯಸುತ್ತಾರೆ.[3]' ಆದ್ದರಿಂದ ಪೂಜ್ಯರಾದ ಬಾದರಾಯಣರು ಎಲ್ಲ ಶ್ರುತಿವಾಕ್ಯಗಳೂ ಭಗವಂತನಲ್ಲಿಯೇ ಸಮನ್ವಯವಾಗುತ್ತವೆ: ಎಂದು ತಮ್ಮ ಸಮನ್ವಯಾಧಿಕರಣದಲ್ಲಿ ಪ್ರತಿಪಾದಿಸಿದ್ದಾರೆ.

ವಿಜ್ಞಾನದ ವಿಷಯವನ್ನು ತೆಗೆದುಕೊಂಡರೆ ಋಗ್ವೇದೀಯ ನಾಸದೀಯ ಸೂಕ್ತ (ಋ. ಅ.೮.ಅ.೭.ವ.೧೭) ದಲ್ಲಿ ಉಕ್ತವಾಗಿರುವ ಸೃಷ್ಟಿ ವಿದ್ಯಾರಹಸ್ಯವು ಮಹೋನ್ನತವಾಗಿದೆ. ಪುರುಷ ಸೂಕ್ತ (ಯ.ಅ.೩೧) ದಲ್ಲಿ ವರ್ಣಿತವಾಗಿರುವ ವಿಶ್ವಪುರುಷನ ವೈಭವ ಅಪ್ರಮೇಯ ಪೃಥಿವೀ ಸೂರ್ಯ ಮತ್ತು ಚಂದ್ರಾದಿ ಗ್ರಹಗಳಿಗೆ 'ಗೌಃ' ಎಂದು ಹೆಸರು. ಅವು ತಮ್ಮ ಪರಿಧಿಯಲ್ಲಿ ಅಂತರಿಕ್ಷದಲ್ಲಿ ಸದಾ ತಿರುಗುತ್ತವೆ. ಪೃಥಿವಿಗೆ ಸೂರ್ಯ ತಂದೆ; ವಾಯು ಆಕಾಶಗಳು ತಾಯಿ; ಪೃಥಿವೀ ಮುಂತಾದ ಗೋಳಗಳು ಸೂರ್ಯನ ಸುತ್ತೂ ನಿಯಮವಾಗಿ ಸುತ್ತುತ್ತಿರುತ್ತವೆ.[4]

ಭೂಮಿ ಮುಂತಾದ ಗ್ರಹಚಕ್ರವು ಸೂರ್ಯನ ಆಕರ್ಷಣಶಕ್ತಿಗೆ ಒಳಪಟ್ಟು ತನ್ನ ತನ್ನ ಕಕ್ಷೆಯಲ್ಲಿ ಸಂಚರಿಸುತ್ತವೆ; ಎಂಬ ಅಂಶವು ಕೆಲವು ಮಂತ್ರಗಳಲ್ಲಿ ಅಭಿವ್ಯಕ್ತವಾಗಿದೆ. 'ಎಲ್ಲ ಲೋಕ (ಗ್ರಹ) ಗಳನ್ನು ಸೂರ್ಯನು ಆಕರ್ಷಿಸುತ್ತಾನೆ. ಸೂರ್ಯನೇ ಮೊದಲಾದ ಗ್ರಹಗಳನ್ನು ಪರಮೇಶ್ವರನು ಆಕರ್ಷಿಸುವನು. ಎಲೈ ಇಂದ್ರ! (ಪರಮೇಶ್ವರ) ನಿನ್ನ ಅನಂತ ಬಲ ಪರಾಕ್ರಮದಿಂದ ಎಲ್ಲ ಜಗತ್ತಿಗೆ ಭಾರವಹನ ಮತ್ತು ಆಕರ್ಷಣ ಹಾಗೂ ಪಾಲನೆಗಳು ಜರುಗುತ್ತಿವೆ; ನಿನ್ನ ಈ ಗುಣಗಳು ಸೂರ್ಯ ಮೊದಲಾದ ಲೋಕಗಳನ್ನು ಧರಿಸಿವೆ ; ಆದ್ದರಿಂದ ಎಲ್ಲ ಲೋಕಗಳು ತಮ್ಮ

---

[1] ದ್ವೇ ವಿದ್ಯೇ ವೇದಿತವ್ಯೇ ಪರಾ ಚಾಪರಾ ಚ ।
ತತ್ರಾಪರಾ ಋಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವವೇದಃ ।
ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ ।
ಅಥಾಪರಾ ಯಯಾ ತದಕ್ಷರಮಧಿಗಮ್ಯತೇ (ಮುಂ. ೧.೧.೫)

[2] ಯಸ್ಮಾನ್ನಜಾತಃ ಪರೋ ಅನ್ಯೋ ಅಸ್ತಿ ಯ ಆವಿವೇಶ ಭುವನಾನಿ ವಿಶ್ವಾ ಪ್ರಜಾಪತಿಃ ಪ್ರಜಯಾ ಸಗ್ಂ ರರಾಣಸ್ತ್ರೀಣಿಜ್ಯೋತೀಗ್ಂಷಿ ಸಚತೇ ಸ ಷೋಡಶೀ (ಯಜು. ೮-೩೬)

[3] ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವಚಕ್ಷುರಾತತಂ–(ಋ.೧.೨.೭.೫)

[4] ಆಯಂ ಗೌಃ ಪೃಶ್ನಿರಕ್ರಮೀದಸನನ್ಮಾತರಂ ಪುನಃ । ಪಿತರಂ ಚ ಪ್ರಯಂತ್ಸ್ವಃ (ಯಜು. ಅ. ೯. ಮಂ.೬)

ತಮ್ಮ ಕಕ್ಷೆಯಲ್ಲಿ ಚಾಚೂತಪ್ಪದೆ ತಿರುಗುತ್ತಿವೆ.' 'ವಾಯು ಸೂರ್ಯರಲ್ಲಿ ಭಗವದ್ದತ್ತವಾದ ಆಕರ್ಷಣ ಮತ್ತು ಪ್ರಕಾಶನಗುಣಗಳಿವೆ. ಆ ಗುಣಗಳಿಂದ ಅವು ಸಮುಸ್ತಲೋಕಗಳನ್ನು ಹಿಡಿದಿವೆ; ಮತ್ತು ಬೆಳಗಿಸುತ್ತಿವೆ.[1] ಮುಂತಾದ ಮಂತ್ರಗಳಲ್ಲಿ ಸೂರ್ಯಾದಿಗ್ರಹಗಳಲ್ಲಿರುವ ಆಕರ್ಷಣ ಮತ್ತು ಪ್ರಕಾಶನ ಶಕ್ತಿಗಳ ವರ್ಣನಗಳಿವೆ. ಇನ್ನು ನೌಕೆ, ವಿಮಾನ, ತಾರವಿದ್ಯೆ (Telegrphy) ಗಣಿತ, ವೈದ್ಯ ಮುಂತಾದ ವಿಷಯಗಳೂ ಹೇರಳವಾಗಿ ವರ್ಣಿತವಾಗಿವೆ. ಒಟ್ಟಿನಲ್ಲಿ ಭಾರತದ ಹೆಮ್ಮೆ ಎನಿಸಿರುವ ನಕ್ಷತ್ರವಿದ್ಯೆ, ಶಸ್ತ್ರಾಸ್ತ್ರವಿದ್ಯೆ, (ಧನುರ್ವೇದ), ವೈದ್ಯಶಾಸ್ತ್ರ (ಆಯುರ್ವೇದ) ಪ್ರಾಣಿವಿದ್ಯೆ, ವೃಕ್ಷಶಾಸ್ತ್ರ, ಸಂಗೀತ, ಕಲೆ, ಚಿತ್ರ ಮುಂತಾದ ಸಮುಸ್ತಶಾಸ್ತ್ರಗಳಿಗೂ ವೇದವೇ ಮೂಲ ಎಂಬುದನ್ನು ಭಾರತೀಯ ದಾರ್ಶನಿಕರು ಒಪ್ಪಿದ್ದಾರೆ.

ಪುನರ್ಜನ್ಮ, ವಿವಾಹ, ನಿಯೋಗ, ರಾಜ-ಪ್ರಜಾಧರ್ಮ, ವರ್ಣಾಶ್ರಮಗಳು ಮುಂತಾದವುಗಳ ಬಗೆಗೆ ಮನೋಜ್ಞವಾದ ವಿಚಾರಗಳು ಅಲ್ಲಲ್ಲಿ ವಿಸ್ತಾರವಾಗಿ ವರ್ಣಿತವಾಗಿರುವುದಲ್ಲದೆ ಸಾಮಾಜಿಕಸಂಘಟನೆ ಹಾಗೂ ಶ್ರೇಷ್ಠಮಾನವನ ಆದರ್ಶಗಳನ್ನು ಸಾರುವ ಉದಾತ್ತ ಉಪದೇಶಗಳು ವೇದಗಳಲ್ಲಿ ಹೇರಳವಾಗಿವೆ.

'ಎಲೈ ಮಾನವರೆ! ನೀವೆಲ್ಲ ಪರಸ್ಪರ ವಿರೋಧವನ್ನು ತೊರೆದು, ಸತ್ಯಾಚರಣೆಯುಳ್ಳವರಾಗಿ ವರ್ತಿಸಿರಿ. ನಿಮ್ಮ ನಿಮ್ಮಲ್ಲಿ ಪರಸ್ಪರ ವಿಶ್ವಾಸ ಬೆಳೆಸಿಕೊಳ್ಳಿರಿ. ನಿಮ್ಮ ಮನಸ್ಸುಗಳು ಒಂದಾಗಿರಲಿ. ನಿಮ್ಮ ಗುರು ಹಿರಿಯರ ಆದರ್ಶ ನಿಮ್ಮದಾಗಿರಲಿ.[2]'

'ನಿಮ್ಮ ಆಲೋಚನೆಗಳು ವಿವೇಕಯುತವಾಗಿರಲಿ. ನಿಮ್ಮ ಸಂಘ ಸಂಸ್ಥೆಗಳ ಗೊತ್ತುಗುರಿಗಳು ಎಲ್ಲರಿಗೂ ಉಪಕಾರಕವಾಗಿರಲಿ. ನಿಮ್ಮ ಸಂಕಲ್ಪ-ಸಿದ್ಧಿಗಳ ಸಾಧನೆಯಲ್ಲಿ ನಿಮ್ಮ ಮನಸ್ಸು ಒಂದಾಗಿರಲಿ. ನಿಮ್ಮ ವ್ಯವಹಾರಗಳು ಧರ್ಮಯುಕ್ತವಾಗಿರಲಿ.[3]'

ನಿಶ್ಚಯ, ಉತ್ಸಾಹ ಮತ್ತು ಧಾರ್ಮಿಕ ನಡೆವಳಿಕೆಗಳಿಗೆ 'ಆಕೂತಿ' ಎಂದು ಹೆಸರು. 'ನಿಮ್ಮ ಎಲ್ಲ ಪುರುಷಾರ್ಥಗಳು ಸಕಲ ಜೀವೋಪಕಾರಕವಾಗಿರಲಿ. ನಿಮ್ಮ ಹೃದಯ ಮನಸ್ಸುಗಳು ಒಂದಾಗಿರಲಿ.[4]' ಮುಂತಾದ ಸೂಕ್ತಗಳಲ್ಲಿ ಉಕ್ತವಾಗಿರುವ ರಾಷ್ಟ್ರೀಯತೆಯ ಜೊತೆಗೆ ದೀರ್ಘಕಾಲದವರೆಗೆ ಇಂದ್ರಿಯ ಪಟುತ್ವ ಪಡೆದು ಆನಂದಿಸೋಣ ದೀರ್ಘಾಯುಗಳಾಗಿ ಶುದ್ಧ ನಡೆ ನುಡಿ ಭೂಷಿತ

---

[1] ಯದಾ ತೇ ಹರ್ಯತಾ ಹರೀ ವಾವೃಧಾತೇ ದಿವೇ ದಿವೇ । ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ (ಋ. ಅ. ೬. ಅ. ೧. ವ. ೬. ಮಂ. ೩)

[2] ಸಂಗಚ್ಛಧ್ವಂ ಸಂವದಧ್ವಂ ಸಂವೋ ಮನಾಂಸಿ ಜಾನತಾಮ್। ದೇವಾ ಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ (ಋ.ಅ.೮.ಅ.೮.ವ.೪೯.ಮಂ.೨)

[3] ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಮ್, ಸಮಾನಂ ಮಂತ್ರಮಭಿಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ (ಋ.ಅ.೮.ಅ.೮. ವ.೪೯.ಮಂ.೩)

[4] ಸಮಾನೀವ ಆಕೂತಿಃ ಸಮಾನಾ ಹೃದಯಾನಿ ವಃ ।
ಸಮಾನಮಸ್ತು ವೋ ಮನೋ ಯಥಾವ ಸ್ಸುಸಹಾಸತಿ॥

(ಋ.ಅ.೮.ವ.೯.ಮಂ.೪)

ರಾಗಿ ಅಜೇಯರಾಗಿ ಮಾನವೀಯತೆಯನ್ನು ಗಳಿಸೋಣ.[1] "ಭದ್ರಂ ಕರ್ಣೇಭಿ ಶೃಣವಾಮ" ಎಂದರೆ-'ನಮ್ಮ ಕಿವಿಗಳಿಂದ ಮಂಗಳವನ್ನೇ ಕೇಳೋಣ; ಕಣ್ಣುಗಳಿಂದ ಮಂಗಳವನ್ನು ನೋಡೋಣ; ಸುದೃಢವಾದ ಅಂಗಗಳಿಂದ ಕೂಡಿ ಅರೋಗ ದೃಢಕಾಯರಾಗಿ ನಲಿಯೋಣ; ಬದುಕಿರುವವರೆಗೆ ಲೋಕ ಹಿತವನ್ನು ಎಸಗೋಣ' ಮುಂತಾದ ಉಕ್ತಿಗಳು ಮಾನವನ ಜೀವನಸೌಂದರ್ಯವನ್ನು ಉಗ್ಗಡಿಸಿವೆ.

ಋತವು ತಪಸ್ಸು; ಸತ್ಯವು ತಪಸ್ಸು; ಶ್ರುತವು ತಪಸ್ಸು; ಶಾಂತಿಯು ತಪಸ್ಸು; ದಮವು ತಪಸ್ಸು; ಶಮವು ತಪಸ್ಸು; ದಾನವು ತಪಸ್ಸು; ಯಜ್ಞವು ತಪಸ್ಸು; ಭೂಃ ಭುವಃ ಸುವಃ ಸ್ವರೂಪ ವಾದ ಬ್ರಹ್ಮವನ್ನು ಉಪಾಸಿಸುವುದೇ ತಪಸ್ಸು; (ತೈ.ಆ.೧೦.೮) ಮುಂತಾದ ಮಂತ್ರಗಳು ಸಾಮಾ ಜಿಕ- ನೀತಿಶಾಸ್ತ್ರದ ಮೇಲ್ಪಂಕ್ತಿಗಳೇ ಆಗಿವೆ.

**ಕರ್ಮ :**– ಇದು ವೇದೋಕ್ತ ವಿಷಯಗಳಲ್ಲಿ ಎರಡನೆಯದು. ಇದು ಕ್ರಿಯಾ ಪ್ರಧಾನ ವಾದದ್ದು– ಪರಮಾತ್ಮನ ಸ್ವರೂಪವನ್ನು ಅರಿತಮೇಲೆ ಮಾನವನು ತನ್ನ ಅಭ್ಯುದಯ ಸಾಧನೆಗಾಗಿ ಅರ್ಥಕಾಮಗಳನ್ನು ಸಾಧಿಸುವುದು ಅಗತ್ಯ. ಅವೂ ಧರ್ಮಮೂಲವಾಗಿರಬೇಕು. ಆದ್ದರಿಂದ ಅಂಥ ಅರ್ಥ ಮತ್ತು ಕಾಮಗಳ ಸಾಧನೆಗಾಗಿ ಎಸಗುವ ಸತ್ಕರ್ಮವೇ ಕರ್ಮಕಾಂಡದ ಗುರಿ.

ಕರ್ಮವು ಎರಡು ವಿಧ – ಒಂದು ಸಕಾಮ ಮತ್ತೊಂದು ನಿಷ್ಕಾಮ. ಶಿವಶರಣರು '**ಸತ್ಯಶುದ್ಧ ಕಾಯಕ**' ಎಂದಿರುವುದು ಇದನ್ನೇ. ಎಂದರೆ ತಾನು, ತನ್ನ ಮನೆ, ಸಮಾಜ ಹಾಗೂ ರಾಷ್ಟ್ರದ ಅಭ್ಯುದಯಕ್ಕಾಗಿ ಎಸಗುವ ಎಲ್ಲ ಕೆಲಸಗಳೂ '**ಕಾಯಕ**' ವೆನಿಸುತ್ತವೆ. ಮಾಡುವು ದನ್ನು ಈಶ್ವರಾರ್ಪಿತ ಬುದ್ಧಿಯಿಂದ ಕರ್ತವ್ಯವೆಂದು ಭಾವಿಸಿ ಮಾಡಿದರೆ ಅದೇ ಕಾಯಕ ಅಥವಾ ನಿಷ್ಕಾಮ-ಕರ್ಮವಾಗುತ್ತದೆ.

ಮಾನವನ ಐಹಿಕ ಸೌಲಭ್ಯಗಳಿಗೆ ವಾಯುಮಂಡಲ ಮತ್ತು ಮೇಘಮಂಡಲಗಳ ಶುದ್ಧಿಯು ಅತ್ಯಾವಶ್ಯಕ. ಇದಕ್ಕಾಗಿ ಅಗ್ನಿಹೋತ್ರಾದಿ-ಕರ್ಮವು ವಿಹಿತವಾಗಿದೆ. ಬೆಂಕಿಯಲ್ಲಿ ನಾಲ್ಕು ಬಗೆಯ ಹೋಮ ದ್ರವ್ಯಗಳನ್ನು[2] ವಿಧ್ಯುಕ್ತವಾಗಿ ಹಾಕುವುದರಿಂದ ವಾಯುಮಂಡಲವು ಶುದ್ಧವಾಗುತ್ತದೆ. ಅದರಿಂದ ಜೀವಿಗಳು ರೋಗರುಜಿನಗಳಿಲ್ಲದೆ ಆರೋಗ್ಯದೃಢಕಾಯರಾಗಿರು ತ್ತಾರೆ. ಇದು ಅಗ್ನಿಹೋತ್ರದ ಮೊದಲ ಪ್ರಯೋಜನ. ಎರಡನೆಯದು ಮೇಘಮಂಡಲ ಶುದ್ಧಿ– ಇದರಿಂದ ಲೋಕದಲ್ಲಿ ಸುವೃಷ್ಟಿಯಾಗುತ್ತದೆ; ಎಂದು ಪೂರ್ವಮೀಮಾಂಸಾಕರ್ತೃವಾದ ಜೈಮಿ ನಿಯೂ ಸ್ಪಷ್ಟವಾಗಿ ಹೇಳುತ್ತಾನೆ. ದ್ರವ್ಯ, ಅವುಗಳ ಸಂಸ್ಕಾರ ಮತ್ತು ಉಪಯೋಗವನ್ನು ಯಜ್ಞ ಕರ್ತೃ

---

[1] ಪಶ್ಯೇಮ ಶರದಃ ಶತಂ ನಂದಾಮ ಶರದಃ ಶತಮ್ ।
ಪ್ರಬ್ರವಾಮ ಶರದಃ ಶತಮಜೀತಾಸ್ಯಾಮ ಶರದಃ ಶತಮ್ ॥

[2] ನಾಲ್ಕು ವಿಧ ಹೋಮ ದ್ರವ್ಯಗಳು– ೧. ಕಸ್ತೂರಿ, ಕೇಸರಿ ಮುಂತಾದ ಸುಗಂಧ ದ್ರವ್ಯ ಗಳು. ೨. ಬೆಲ್ಲ ಮುಂತಾದ ಮಿಷ್ಟ ದ್ರವ್ಯಗಳು ೩. ತುಪ್ಪ, ಹಾಲು, ಅನ್ನ ಮುಂತಾದ ಪೌಷ್ಟಿಕ ದ್ರವ್ಯಗಳು. ೪. ಕ್ರಿಮಿಕೀಟ ಮತ್ತು ರೋಗನಾಶಕವಾದ ಸೋಮಲತಾ ಮುಂತಾದ ಓಷಧಿ– ವನ ಸ್ಪತಿಗಳು.

ಅರಿತಿರಬೇಕು. ವೇದೋಕ್ತವಾದ ಅಹಿಂಸಾತ್ಮಕಯಜ್ಞಯಾಗಾದಿಗಳನ್ನು ನಡೆಸುವುದರಿಂದ ಸುವೃಷ್ಟಿಯಾಗಿ ಲೋಕವಲ್ಲಿ ಸುಭಿಕ್ಷವು ನೆಲೆಸುತ್ತದೆ. [1]"

'ಈಶ್ವರ ಪ್ರಿತ್ಯರ್ಥವಾಗಿ ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮಕ್ಕೆ ಯಜ್ಞವೆಂದು ಹೆಸರು. ಪರೋಪಕಾರ ರೂಪವಾದ ಕರ್ಮಗಳೆಲ್ಲ ಯಜ್ಞಗಳೇ. ಇವು ಬಂಧಕವಲ್ಲ. ದೇವತೆಗಳು ಸಂತುಷ್ಟರಾಗುವುದು ಯಜ್ಞದಿಂದ. ಅದರಿಂದ ಪ್ರಾಣಿಗಳು ಬದುಕುತ್ತವೆ. ಮಳೆಯಿಂದ ಅನ್ನವು ಉತ್ಪನ್ನವಾಗುತ್ತದೆ; ಮಳೆಯು ಯಜ್ಞದಿಂದ; ಯಜ್ಞವು ಸತ್ಕರ್ಮದಿಂದ. [2]' ಎಂಬ ಗೀತೋಕ್ತಿಯು- 'ರಾಜನು ಯಜ್ಞಕ್ಕಾಗಿ ಭೂಮಿಯನ್ನು, ದೇವೇಂದ್ರನು ಬೆಳೆಗಾಗಿ ಮಳೆಯನ್ನು ಕರೆಯುತ್ತಾರೆ.' [3] ಎಂಬ ಮಹಾಕವಿ ವಾಣಿಯಿಂದ ಸಮರ್ಥಿತವಾಗಿದೆ.

ಶ್ರುತಿಯು ವೇದೋಕ್ತ ಯಜ್ಞಸ್ವರೂಪವನ್ನು ಕುರಿತು ಹೀಗೆಂದಿದೆ- 'ಮಾನವ ಲೋಕಕ್ಕೆ ಹಿತವನ್ನು ಉಂಟುಮಾಡುವುದೇ ಯಜ್ಞದ ಉದ್ದೇಶ. ಸಂಸ್ಕರಿಸಿದ ದ್ರವ್ಯಗಳನ್ನು ಹೋಮಿಸುವ ವಿದ್ವಾಂಸನು ಆನಂದವನ್ನು ಪಡೆಯುವನು' [4] ಅಗ್ನಿಯಲ್ಲಿ ಹೋಮಿಸಿದ ದ್ರವ್ಯಗಳಿಂದ ಹೊಗೆ (ಧೂಮ) ಏಳುತ್ತದೆ. ಅದರಲ್ಲಿನ ಜಲಾಂಶವೇ ಹಬೆ. ಜಲವು ಅಳಿದ ಶುಷ್ಕಾಂಶವೇ ಪೃಥಿವಿ. ಅವೆರಡರ ಕೂಟವೇ ಧೂಮ. ಅದು ವಾಯುವಿನಿಂದ ಗಗನದಲ್ಲಿ ಹರಡಿ ಮಳೆಯಾಗುತ್ತದೆ. ಮಳೆಯಿಂದ ಸುಭಿಕ್ಷ. ಅದರಿಂದ ಅನ್ನ. ಅನ್ನದಿಂದ ಧಾತು. ಅದರಿಂದ ಶರೀರದಾರ್ಢ್ಯ. ದೃಢಶರೀರದಿಂದ ಸತ್ಕರ್ಮಗಳು ಏರ್ಪಡುತ್ತವೆ. [5] ತೈತ್ತಿರೀಯವು ಹೇಳುವ 'ಆ ಪರಮೇಶ್ವರನಿಂದ ಕ್ರಮವಾಗಿ ಆಕಾಶ, ವಾಯು, ಅಗ್ನಿ, ಅಪ್ ಮತ್ತು ಪೃಥಿವಿಗಳೂ, ಅದರಲ್ಲಿ ಓಷಧಿಗಳೂ ಅವುಗಳಿಂದ ಅನ್ನ, ಅನ್ನದಿಂದ ರೇತಸ್ಸು, ಅದರಿಂದ ಪುರುಷ. ಆದ್ದರಿಂದ ಪುರುಷನು ಅನ್ನರಸಮಯ." ಎಂಬ ಅರ್ಥವೂ ಇದನ್ನೇ ಸಮರ್ಥಿಸುತ್ತದೆ.

ಮುಂತಾದ ಮಂತ್ರಗಳಲ್ಲಿ ಅಹಿಂಸಾತ್ಮಕವಾದ ಯಜ್ಞದ ಪರಮಪ್ರಯೋಜನವು ಸ್ಪಷ್ಟವಾಗಿದೆ. ಇನ್ನು ಆಗಮೋಕ್ತಪೂಜಾವಿಧಿಯಲ್ಲಿ ಬಳಸುವ ಧೂಪ-ದೀಪ ಮುಂತಾದ ಆರಾಧ

---

[1] ದ್ರವ್ಯ ಸಂಸ್ಕಾರ ಕರ್ಮಸು ಪರಾರ್ಥತ್ವಾತ್ಫಲಶ್ರುತಿರರ್ಥವಾದಃ ಸ್ಯಾತ್ ।
ದ್ರವ್ಯಾಣಾಂ ತು ಕ್ರಿಯಾರ್ಥಾನಾಂ ಸಂಸ್ಕಾರಃ ಕ್ರತುಧರ್ಮಃ ಸ್ಯಾತ್ ॥
— (ಪೂ.ಮಿ.೪.೩.೧- ೮)

[2] ಯಜ್ಞಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ
— (ಭ.ಗೀ. ೩.೧೪)

[3] ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಂ ।
ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್
— (ರಘು.೧.೨೬)

[4] ಯಜ್ಞೋಽಪಿ ತಸ್ಯೈ ಜನತಾಯೈ ಕಲ್ಪತೇ ।
ಯತ್ರೈವಂ ವಿದ್ವಾನ್ ಹೋತಾ ಭವತಿ ॥
— (ಐತ.ಬ್ರಾಂ.೧.೨)

[5] ಅಗ್ನೇರ್ವೈ ಧೂಮೋ ಜಾಯತೇ । ಧೂಮಾದಭ್ರಮಭ್ರಾದ್ವೃಷ್ಟಿರಗ್ನೇರ್ವಾ ಏತಾ ಜಾಯಂತೇ । ತಸ್ಮಾದಾಹ ತಪೋಜಾ ಇತಿ ॥
— (ಶತ.ಕಾಂ.೫.೩.೫)

ನೋಪಯುಕ್ತವಸ್ತುಗಳು ವೇದೋಕ್ತಕರ್ಮೋಪಾಸನೆಯ ಫಲವನ್ನೇ ನೀಡುತ್ತವೆ; ಎಂಬುದು ವಿದ್ವಾಂಸರ ಆಶಯ.

**ಉಪಾಸನ :–** ವೇದೋಕ್ತ ವಿಷಯಗಳಲ್ಲಿ ಇದು ಮೂರನೆಯದು. ವೇದೋಕ್ತ ಉಪಾಸನವು ಧ್ಯಾನಮೂಲವಾದದ್ದು. ಈ ಕೆಳಗಿನ ಮಂತ್ರಗಳು ಧ್ಯಾನಕ್ಕೆ ಮೂಲವಾದ ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸುವುದನ್ನು ವರ್ಣಿಸಿವೆ.

'ಉಪಾಸಕನ ಮನಸ್ಸು ಭಗವಂತನಲ್ಲಿ ನೆಲೆಸಬೇಕು. ಸರ್ವಜ್ಞನೂ, ದೊಡ್ಡದಕ್ಕೆ ದೊಡ್ಡವನೂ, ಸರ್ವಸಾಕ್ಷಿಯೂ ಆದ ಪರಮೇಶ್ವರನಲ್ಲಿ ವಿದ್ವಾಂಸರು ಮನಸ್ಸನ್ನು ಲೀನಗೊಳಿಸುವರು. [1]'

"ಯೋಗಸಾಧಕರು ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿ ಮೊದಲು ತಮ್ಮ ಮನಸ್ಸನ್ನು ಭಗವಂತನಲ್ಲಿ ಮಗ್ನಗೊಳಿಸಬೇಕು ಅಂಥವರನ್ನು ಪರಮೇಶ್ವರನು ತನ್ನಲ್ಲಿ ಅಡಗಿಸಿಕೊಳ್ಳುವನು." [2]

ಸಾಧಕನು ಭಗವಂತನ ಉಪಾಸನವನ್ನು ಯೋಗಶಾಸ್ತ್ರ ಕ್ರಮದಿಂದ ನಡೆಸಬೇಕು. **ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ** ಮತ್ತು **ಧಾರಣ**ವೆಂಬ ಅಷ್ಟಾಂಗಯೋಗದ ದಿಶೆಯಲ್ಲಿ ಅದು ಸಾಗಬೇಕು. ಅಂತರಿಂದ್ರಿಯನಿಗ್ರಹವೆಂಬ **'ಯಮ',** ಬಹಿರಿಂದ್ರಿಯ ನಿಗ್ರಹವೆಂಬ **'ನಿಯಮ'** ಗಳು ಉಪಾಸನದ ಬುನಾದಿ. ನೀತಿ ಅದರ ನೆಲೆಗಟ್ಟು. ನೀತಿಬಾಹಿರನು ಮಾಡುವ ಉಪಾಸನವು ಬೂದಿಯಲ್ಲಿ ಹೋಮ ಮಾಡಿದಂತೆ ವ್ಯರ್ಥ.

"ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ|
ಪಾಪಿ ಹೂವನೇರಿಸಲು ಮಸೆದಡಾಯುಧ ಗಾಯ|" (ಬಸವೇಶ್ವರನ ವಚನ ೬೫೨)

ಎಂಬ ಬಸವೇಶ್ವರ ವಚನವು ಈ ಅಂಶವನ್ನು ಸೂಚಿಸಿದೆ.

"ಪರಶಿವನ ಧ್ಯಾನ, ಧಾರಣ, ತತ್ತ್ವವಿಚಾರ ಇವುಗಳನ್ನು ನಿರಂತರವಾಗಿ ಮಾಡುವುದರಿಂದ ಮಾನವನ ಅಜ್ಞಾನವು ಅಳಿಯುತ್ತದೆ. [3]"

'ನೀನು ತೇಜೋರೂಪನು; ನನ್ನಲ್ಲಿ ತೇಜವನ್ನಿರಿಸು. ನೀನು ವೀರ್ಯ ಸ್ವರೂಪ; ನನ್ನನ್ನು ವೀರ್ಯವಂತನನ್ನಾಗಿ ಮಾಡು. ನೀನೇ ಬಲ ; ನನ್ನನ್ನು ಬಲಿಷ್ಠನನ್ನಾಗಿ ಮಾಡು. ನೀನು ಓಜಸ್ವರೂಪ; ನನ್ನನ್ನು ಓಜೋವಂತನನ್ನಾಗಿಸು. ನೀನು ಮನ್ಯು (ಸಿಟ್ಟು)ವಾಗಿರುವೆ; ನಾವೂ ಹೇಯವನ್ನು ಕಂಡಕೆ ಸಿಟ್ಟಾಗುವಂತೆ ಮಾಡು. ನೀನು ಸಹನ ಶೀಲ; ನನಗೂ ಸಹನೆಯನ್ನು ಕೊಡು [4]'

---

[1] ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ "ವಿಹೋತ್ರಾದಧೇವಯುನಾ ವಿದೇಕ ಇನ್ಮಹಿ ದೇವಸ್ಯ ಸವಿತುಃ ಪರಿಷ್ಟುತಿಃ"– (ಋ.ಅ.೪.ಅ.೪.ವ.೨೪.ಮಂ.೧)

[2] ಯುಂಜಾನಃ ಪ್ರಥಮಂ ಮನಸ್ತತ್ವಾಯ ಸವಿತಾ ಧಿಯಮ್ |
ಅಗ್ನೇರ್ಜ್ಯೋತಿರ್ನಿಚಾಯ್ಯ ಪೃಥಿವ್ಯಾ ಅಧ್ಯಾಭರ ತತ್ || (– ಯಜು.ಅ.೧೧.ಮಂ.೧.೫)

[3] ತಸ್ಯಾಭಿಧ್ಯಾನಾತ್ ಯೋಜನಾತ್, ತತ್ವಭಾವಾತ್ ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ (– ಶ್ವೇತಾಶ್ವರ.೧.೧೦)

[4] "ತೇಜೋಽಸಿ ತೇಜೋ ಮಯಿ ಧೇಹಿ; ವೀರ್ಯಮಸಿ ವೀರ್ಯಂ ಮಯಿ ಧೇಹಿ, ಬಲಮಸಿ ಬಲಂ ಮಯಿಧೇಹಿ, ಓಜೋಸಿ ಓಜೋಮಯಿಧೇಹಿ, ಮನ್ಯುರಸಿ ಮನ್ಯುಂಮಯಿಧೇಹಿ, ಸಹೋಂಸಿ ಸಹೋ ಮಯಿ ಧೇಹಿ (–ಯಜು.೧೯.೯)

ತೇಜ, ವೀರ್ಯ, ಬಲ, ಓಜಃ ಇವುಗಳ ಸ್ವರೂಪನಾದ ಭಗವಂತನಿಂದ ತೇಜಸ್ಸು, ವೀರ್ಯ, ಬಲ ಮತ್ತು ಓಜಸ್ಸುಗಳನ್ನು ಬೇಡಿದ ಭಕ್ತನು ಅವುಗಳ ಜೊತೆಗೆ ಮನ್ಯು (ಕೋಪ) ಮತ್ತು ಸಹನೆಗಳನ್ನು ಪ್ರಾರ್ಥಿಸಿರುವ ಬಗೆ ವೈದಿಕಉಪಾಸನೆಯ ಗೊತ್ತುಗುರಿಗಳನ್ನು ನಿರ್ದೇಶಿಸಿದೆ.

**ಜ್ಞಾನ** :– ವೇದೋಕ್ತ ವಿಷಯುಗಳಲ್ಲಿ ಜ್ಞಾನವು ನಾಲ್ಕನೆಯದು. 'ಮೋಕ್ಷ ವಿಷಯಕವಾದ ತಿಳುವಳಿಕೆಗೆ 'ಜ್ಞಾನ' ವೆಂದೂ, ಇನ್ನುಳಿದ ಶಿಲ್ಪ ಮುಂತಾದ ವಿಷಯುಗಳಿಗೆ 'ವಿಜ್ಞಾನ' ವೆಂದೂ ಹೆಸರು.[1] 'ಯಾ ವಿದ್ಯಾ ಸಾ ವಿಮುಕ್ತಯೇ' ಯಾವುದು ಮುಕ್ತಿಗೆ ಸಾಧನವೋ ಅದೇ ವಿದ್ಯೆ; ಮುಂತಾದ ಉಕ್ತಿಗಳು ಮೋಕ್ಷವೇ ಜ್ಞಾನದ ಗುರಿ ಎಂಬುವದನ್ನು ಸಾರಿವೆ.

**ಮೋಕ್ಷ** :– ಬಿಸಿಲಿಗೆ ಕಾಯ್ದು ಕಡಲ ಜಲ ಆವಿಯಾಗಿ ಮೇಲೇರಿ ಮೋಡವಾಗಿ ಮಳೆಗರೆದು ನದಿಗಳ ಮೂಲಕ ಮತ್ತೆ ಕಡಲನ್ನು ಸೇರುವದು ಎಲ್ಲರ ಅನುಭವದಲ್ಲಿದೆ. ಬೆಂಕಿಯಿಂದ ಸಿಡಿದ ಕಿಡಿ ದೈವಗತಿಯಿಂದ ರಂಜಕ ವಸ್ತುವಿನಲ್ಲಿ ಬಿದ್ದು ಮತ್ತೆ ಬೆಂಕಿಯಾಗುವುದೂ ಎಲ್ಲರ ಅನುಭವದಲ್ಲಿದೆ. ಅದರಂತೆ ಅನಾದಿಕರ್ಮವಶದಿಂದ ಭಗವಂತನ ಅಂಶವೆನಿಸಿ ಅವತರಿಸಿದ ಜೀವಿಗಳು ಪುಣ್ಯವಶದಿಂದ ಸದ್ಗುರುವಿನ ಕೃಪೆಗೆ ಪಾತ್ರವಾಗಿ ಅವನ ಆದೇಶದಂತೆ ನಡೆದು, ಜೀವಗುಣವಳಿದು ಭಗವತ್ಸ್ವರೂಪವನ್ನು ತಳೆದು ನಿತ್ಯಾನಂದವನ್ನು ಪಡೆವುದೇ ಮೋಕ್ಷ.

ಮೋಕ್ಷದ ಸ್ವರೂಪವು **ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ** ಮತ್ತು **ಸಾಮರಸ್ಯ** ಎಂದು ಐದು ಬಗೆ. ಇನ್ನು ಮೀಮಾಂಸಕರು ಹೇಳುವ ಸಾಲೋಕ್ಯವು ಇದಲ್ಲ. ಅದು ಇಲ್ಲಿ ಮಾನವರು ಎಸಗುವ ಪುಣ್ಯವಿಶೇಷಗಳಿಂದ ಅವನಿಗೆ ಪರದಲ್ಲಿ ದೊರೆಯುವ ಸ್ವರ್ಗಾದಿಲೋಕ ಪ್ರಾಪ್ತಿ ಆದರೆ ಅದು ನಿತ್ಯ ಸುಖವಲ್ಲ. ಪುಣ್ಯವು ಮುಗಿದ ತರುವಾಯ 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂಬಂತೆ ಅವನು ಮತ್ತೆ ಅಲ್ಲಿಂದ ಮರ್ತ್ಯಕ್ಕೆ ಹಿಂದಿರುಗಬೇಕು.

ವೇದಾಂತ ದಾರ್ಶನಿಕರಲ್ಲಿ ಒಬ್ಬರಾದ ದ್ವೈತಿಗಳು ಸಾಮೀಪ್ಯಮುಕ್ತಿಯನ್ನು ಒಪ್ಪುತ್ತಾರೆ. ಅವರ ಮತದಲ್ಲಿ ಮುಕ್ತಿದೆಶೆಯಲ್ಲಿಯೂ ಜೀವ ಮತ್ತು ದೇವರಿಗೆ ಭೇದವುಂಟು. ಜೀವಾತ್ಮರು ಭಗವಂತನ ಕೃಪೆಯಿಂದ ವಿಷ್ಣುಸಾನ್ನಿಧ್ಯವನ್ನೈದಿ ಅಲ್ಲಿಯೂ ಭಗವತ್ಕೈಂಕರ್ಯಾದಿಗಳನ್ನು ಎಸಗುತ್ತಾ ವಿಷ್ಣುವಿನ ಸಾಮೀಪ್ಯವನ್ನು ಹೊಂದಿ ಆನಂದಿಸುವರು. ಪೂಜ್ಯರಾದ ಮಧ್ವಾಚಾರ್ಯರು (ಕ್ರಿ. ಶ. ೧೪೦೦) ಈ ಮತದ ಪ್ರತಿಷ್ಠಾಪಕರು.

ಸಾರೂಪ್ಯ ಮುಕ್ತಿಯನ್ನು **ವಿಶಿಷ್ಟಾದ್ವೈತಿಗಳು** ಒಪ್ಪುತ್ತಾರೆ. ಇವರಲ್ಲಿ **ಶೈವವಿಶಿಷ್ಟಾದ್ವೈತ** ಮತ್ತು **ವೈಷ್ಣವ ವಿಶಿಷ್ಟಾದ್ವೈತ** ಎಂದು ಎರಡು ಬಗೆ. ಶೈವವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಪ್ರವರ್ತಕರು ಶ್ರೀಕಂಠಶಿವಾಚಾರ್ಯರು (ಕ್ರಿ. ಶ. ೧೦೦೦) ವೈಷ್ಣವ ವಿಶಿಷ್ಟಾದ್ವೈತ ಪ್ರವರ್ತಕರು **ಶ್ರೀರಾಮಾನುಜಾಚಾರ್ಯರು** (ಕ್ರಿ. ಶ. ೧೦೦೦) ಇವರ ಸಿದ್ಧಾಂತಗಳೆರಡೂ ಸಾರೂಪ್ಯ ಮುಕ್ತಿಯನ್ನು ಸಿದ್ಧಾಂತಿಸಿವೆ.

---

[1] ಮೋಕ್ಷೇಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ :– ನಿಘಂಟು.

ಭಗವಂತನ ಉಪಾಸನದಿಂದ ಭಕ್ತನಿಗೆ ಮುಕ್ತಿದೆಶೆಯಲ್ಲಿ ಶಿವಕೃಪೆಯಿಂದ ಶಿವನಲ್ಲಿರುವ ಗೌರೀವಲ್ಲಭತ್ವ ಮುಂತಾದ ವಿಶಿಷ್ಟಗುಣಗಳ ಹೊರತು ಉಳಿದ ತ್ರಿನೇತ್ರತ್ವ, ಚಂದ್ರಶೇಖರತ್ವ ಮುಂತಾದವುಗಳು ಅಳವಟ್ಟು ಶಿವಸಾರೂಪ್ಯವು ಲಭಿಸುತ್ತದೆ. ಇವರು ಶಿವಲೋಕದಲ್ಲಿ ಶಿವಸಾರೂಪ್ಯವನ್ನು ಧರಿಸಿರುವ ವೀರ, ನಂದಿ, ಭೃಂಗಿ ಮುಂತಾದ ಪ್ರಮಥರೊಂದಿಗೆ ನಿತ್ಯಸುಖ ಪಡೆಯುತ್ತಾರೆ.

ಅದರಂತೆ ವೈಷ್ಣವವಿಶಿಷ್ಟಾದ್ವೈತದಲ್ಲಿಯೂ ಸಹ ಭಕ್ತರು ಮುಕ್ತಿಯ ಅವಸ್ಥೆಯಲ್ಲಿ ಲಕ್ಷ್ಮೀವಲ್ಲಭತ್ವ ಮುಂತಾದ ವಿಶಿಷ್ಟಗುಣಗಳಿಲ್ಲದೆ ಉಳಿದ ಶಂಖ-ಚಕ್ರ-ಗದಾಧಾರಣ ಮುಂತಾದವುಗಳನ್ನು ಪಡೆದು ವಿಷ್ಣುಸಾರೂಪ್ಯವನ್ನು ಪಡೆದು ಅಲ್ಲಿರುವ ಸಂಕರ್ಷಣ, ಅನಿರುದ್ಧ, ವಿಷ್ವಕ್ಸೇನ ಮುಂತಾದವರೊಡನೆ ಆನಂದವನ್ನು ಪಡೆಯುತ್ತಾರೆ

ನಾಲ್ಕನೆಯದು **ಸಾಯುಜ್ಯಮುಕ್ತಿ.** ಇದು ಅದ್ವೈತಿಗಳು ಒಪ್ಪಿರುವ ಮೋಕ್ಷಸ್ವರೂಪ. ಇವರ ಮತದಲ್ಲಿ ಬ್ರಹ್ಮವೊಂದೇ ಸತ್ಯ. ಉಳಿದ ಜೀವ, ಜಗತ್ತುಗಳು ಮಿಥ್ಯ. ಅವಿದ್ಯೆಯ ವಶದಿಂದ ಬ್ರಹ್ಮವೇ ಜೀವಕೋಟಿಯಾಗಿ ವ್ಯವಹರಿಸುತ್ತದೆ. ಇದಕ್ಕೆ ಮೂಲ ಭ್ರಾಂತಿ. ಸುಜ್ಞಾನದಿಂದ ಈ ಭ್ರಾಂತಿ ಅಳಿದಾಗ ಜೀವವೇ ಬ್ರಹ್ಮವೆಂಬ ಅರಿವುಂಟಾಗಿ ಜೀವನು ಸ್ವಯಂ ಬ್ರಹ್ಮಸ್ವರೂಪವೇ ಆಗುತ್ತಾನೆ. **ಶ್ರೀ ಶಂಕರಾಚಾರ್ಯರು** (ಕ್ರಿ. ಶ. ಸು. ೮೦೦) ಈ ಮತ ಸ್ಥಾಪಕರು.

**ಸಾಮರಸ್ಯಮುಕ್ತಿ** ಇವುಗಳಲ್ಲಿ ಕಡೆಯದು. ಇದರ ಮೂಲ ಪ್ರತಿಷ್ಠಾಪಕರು ಜಗದ್ಗುರು ಪಂಚಾಚಾರ್ಯರೆಂದು ಪ್ರತೀತಿ. ಆದರೆ ಶ್ರೀಶಂಕರರ ಸಮಕಾಲೀನರೆನಿಸಿದ **ನೀಲಕಂಠಶಿವಾಚಾರ್ಯರು** ಈ ಸಿದ್ಧಾಂತಪ್ರತಿಷ್ಠಾಪಕರು. ಇವರು ರಚಿಸಿದ್ದರೆಂದು ತಿಳಿದು ಬಂದಿರುವ ಬ್ರಹ್ಮಸೂತ್ರ ಭಾಷ್ಯದಲ್ಲಿ ಸಾಮರಸ್ಯಮುಕ್ತಿ ಸ್ವರೂಪವು ಪ್ರತಿಪಾದಿತವಾಗಿದೆ; ಎಂಬುದು ನೀಲಕಂಠಭಾಷ್ಯಕಾರಿಕೆಯಾಗಿರುವ **ಕ್ರಿಯಾಸಾರ** (ಕ್ರಿ. ಶ. ಸು. ೧೪೦೦) ದಲ್ಲಿ ನಿರೂಪಿಸಲಾಗಿದೆ.

> ನೀಲಕಂಠ ಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್ ।
> ವಿಶಿಷ್ಟಾದ್ವೈತಸಿದ್ಧಾಂತಪ್ರತಿಪಾದನಮುತ್ತಮಮ್ ॥ ೩೨ ॥
> ಮಯಾಪಿ ತಸ್ಯ ತಾತ್ಪರ್ಯಂ ಶ್ರೋತೃಣಾಂ ಸುಖಬುದ್ಧಯೇ ।
> ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥ ೩೩ ॥
> ಲಿಂಗಾಂಗ ಸಾಮರಸ್ಯೈಕಲಭ್ಯಂ ಪಾಶವಿಮೋಚನಂ । ( - ಕ್ರಿ. ಸಾ. ಉ. ೧)

ಇವರ ತರುವಾಯ **ಶ್ರೀಪತಿಪಂಡಿತಾರಾಧ್ಯರು** (ಕ್ರಿ. ಶ. ಸು. ೧೧೦೦) **'ವಿಶೇಷಾದ್ವೈತ'** ಅಥವಾ **'ಭೇದಾಭೇದಸಿದ್ಧಾಂತ'** ಎಂಬ ಹೆಸರಿನಿಂದ ಬ್ರಹ್ಮಸೂತ್ರಗಳಿಗೆ ವಿಸ್ತಾರವಾದ ಭಾಷ್ಯವನ್ನು ಬರೆದು ಸಾಮರಸ್ಯಮುಕ್ತಿಯನ್ನು ಸ್ಥಾಪಿಸಿದರು. ಮುಂದೆ **ಶ್ರೀ ಸ್ವಪ್ರಭಾನಂದಶಿವಾಚಾರ್ಯರು** (ಕ್ರಿ. ಶ. ಸು. ೧೬೦೦) ತಮ್ಮ 'ಶಿವಾದ್ವೈತಮಂಜರಿ'ಯಲ್ಲಿ 'ಉತ್ತಮಾಧಿಕಾರಿಣಂ ಪ್ರತಿ ಈಕ್ಷತ್ಯಂತೈವ ಬ್ರಹ್ಮವಿದ್ಯಾ' ಎಂದು ಬ್ರಹ್ಮಸೂತ್ರಗಳ ಮೊದಲ ಐದು ಅಧಿಕರಣಗಳಿಗೂ, ಶ್ರೀ ಮನ್ಮರಿತೋಂಟದಾರ್ಯರು ವೀರಶೈವಾನಂದಚಂದ್ರಿಕೆಯಲ್ಲಿ ಬ್ರಹ್ಮಸೂತ್ರಗಳ ಚತುಸ್ಸೂತ್ರಿಗೂ ಇತ್ತೀಚಿಗೆ **ಲಿಂ॥ ಉಮಚಗಿ ಶಂಕರಶಾಸ್ತ್ರಿಗಳು "ಬ್ರಹ್ಮಸೂತ್ರವೃತ್ತಿ"**ಯಲ್ಲಿ ಸಾಮರಸ್ಯ ಮುಕ್ತಿಯನ್ನು ದೃಢಪಡಿಸಿದ್ದಾರೆ.

೩

# ಉಪನಿಷದುದ್ಯಾನ

ಭಾರತಸಂಸ್ಕೃತಿವಿಚಾರಧಾರೆಯು ವೇದಗಂಗೋತ್ರಿಯಲ್ಲಿ ಉದಿಸಿ ಉಪನಿಷದುದ್ಯಾನವನ್ನು ಪ್ರವೇಶಿಸುತ್ತದೆ. ತತ್ತ್ವಶಾಸ್ತ್ರಗಳ ಸಾಹಿತ್ಯಕ್ಷೇತ್ರದಲ್ಲಿ ಉಪನಿಷತ್ತುಗಳು ಪ್ರಧಾನಸ್ಥಾನವನ್ನು ಆಕ್ರಮಿಸಿವೆ. ಪಾಶ್ಚಿಮಾತ್ಯತತ್ತ್ವಶಾಸ್ತ್ರಪ್ರವೀಣರು ಮತ್ತು ಸಾಹಿತ್ಯಸಂಶೋಧಕರು ಉಪನಿಷತ್ತುಗಳ ಪ್ರಾಧಾನ್ಯವನ್ನು ಮುಕ್ತಕಂಠದಿಂದ ಹೊಗಳುತ್ತಾರೆ. ಅವರಲ್ಲಿ ಅತ್ಯಾಧುನಿಕ ನಿರೀಶ್ವರವಾದಿಯೂ ಆದ ಆರ್ಥರ್ ಶೋಪನ್‌ಹೋರ್ (Aurthur Schopen Huer) ಮಹಾಶಯನು– "ಉಪನಿಷತ್ತುಗಳ ಅಧ್ಯಯನವು ನನಗೆ ಅತ್ಯಂತಫಲಪ್ರದವೂ ಉತ್ಕರ್ಷದಾಯಕವೂ ಆಗಿದೆ. ಅವು ನನ್ನ ಜೀವನ ಮತ್ತು ಮರಣಕಾಲಗಳೆರಡರಲ್ಲಿಯೂ ಶಾಂತಿಯನ್ನು ನೀಡುತ್ತವೆ; ಎಂದು ಭಾವಿಸುತ್ತೇನೆ." [1] ಎಂದು ಆತನು ಬರೆದ ತತ್ತ್ವಶಾಸ್ತ್ರಗ್ರಂಥದಲ್ಲಿ ಉಪನಿಷತ್ತುಗಳ ಸಿದ್ಧಾಂತಗಳು ಓತಪ್ರೋತವಾಗಿ ಬೆರೆತಿವೆ.

ಜರ್ಮನ್ ದೇಶದ ಕೀಲ್ (Keil) ವಿಶ್ವವಿದ್ಯಾನಿಲಯದಲ್ಲಿದ್ದ ಪ್ರೊ. ಡಾಯಸನ್ನ್ (Deussen) ನು "ಉಪನಿಷತ್ತುಗಳಲ್ಲಿ ಪಾರ್ಮೆನೈಡೀಸ್ (Parmenides) ಪ್ಲೇಟೋ (Plato) ಕ್ಯಾಂಟ್ (Kant) ಮುಂತಾದವರ ಸಿದ್ಧಾಂತಗಳು ಕಾಣುತ್ತವೆ." ಎಂದು ಹೇಳಿ, ತಾನು ಸ್ವದೇಶಕ್ಕೆ ಹಿಂದಿರುಗುವಾಗ "ವೇದಾಂತದ ನಿಸರ್ಗೋಪದೇಶಗಳು ನಿಷ್ಕಳಂಕವಾದ ನೀತಿಶಾಸ್ತ್ರಕ್ಕೆ ಆಧಾರವಾದವುಗಳು ; ಅವು ಜೀವನದ ಮತ್ತು ಮರಣದ ಕ್ಲೇಶವನ್ನು ಉಪಶಮನಮಾಡುವಲ್ಲಿ ತುಂಬ ಸಾಧನವಾಗಿವೆ. ಆದ್ದರಿಂದಲೇ ಭಾರತೀಯರು, ಅವುಗಳನ್ನು ದೃಢವಾಗಿ ಅನುಷ್ಠಾನಮಾಡುತ್ತಿದ್ದಾರೆ."– ಎಂದು ಹೇಳಿದನು. [2]

ಪ್ರೊ|| ಜಿ. ಎಸ್. ಮೆಕೆಂಜೀ (Prop. G. S. Mackenzie) ಮಹಾಶಯನು "ಸುಖವ್ಯವಸ್ಥೆಯ ವಿಶ್ವರಚನೆಯನ್ನು ಕುರಿತು ನಡೆದ ವಾದದಲ್ಲಿ ಮೊತ್ತಮೊದಲಿಗೆ ಆರಂಭವಾದ ಸ್ವರಸವೂ ಅಸಾಧಾರಣವೂ ಆದ ವಾದವು ಉಪನಿಷತ್ತುಗಳಲ್ಲಿ ಉಲ್ಲೇಖಿಸಿದೆ."– ಎಂದು ಘೋಷಿಸಿದನು. [3]

ನ್ಯೂಯಾರ್ಕ್‌ನಗರದ ಮತೇತಿಹಾಸಪ್ರಧಾನಾಧ್ಯಾಪಕನಾದ ಡಾ|| ಹ್ಯೂಮ್ (Dr. Hume) ಮಹಾಶಯನು "ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಏಕತತ್ತ್ವವಾದವು ಪಾಶ್ಚಾತ್ಯ-ಏಕತತ್ತ್ವವಾದದ ಮೇಲೆ ಕೇವಲ ಪ್ರಭಾವವನ್ನು ಮಾತ್ರವೇ ಉಂಟುಮಾಡಲಿಲ್ಲ; ಬದಲಾಗಿ ಅದು ಮುಂದೆಯೂ ಬೆಳಕನ್ನು ಚೆಲ್ಲುತ್ತದೆ. ಏಕೆಂದರೆ ಆಧ್ಯಾತ್ಮಿಕ ಅನುಭವವನ್ನು ಬಯಸುವವರೆಲ್ಲರೂ ಗ್ರಹಿಸುವ ಸತ್ಯಾಂಶಗಳ ಮೂಲತತ್ತ್ವಗಳು ಉಪನಿಷತ್ತುಗಳಲ್ಲಿ ಆಳವಾಗಿ ಬೇರೂರಿವೆ."– ಎಂದು ಹೇಳಿದ್ದಾನೆ.

---

1 Thirteen principal Upanishads : by Hume p.p.3-4 1934.

2 Thirteen principal Upanishads : by Hume p.p.4.

3 Indian philosophy by Dr. S. Radhakriahnan Vol.1.p.139 1941.

**ಉಪನಿಷ್-ಶಬ್ದದ ಅರ್ಥ**

ಭಾರತದಲ್ಲಿ ಉಪನಿಷತ್ತುಗಳ ಸ್ಥಾನ ಅಸದೃಶ. ವೇದಾಂತ ಎಂಬುದು ಅವಕ್ಕಿರುವ ಬೇರೆ ಹೆಸರು. ವೇದಗಳ ಕಡೆಯ ಭಾಗಗಳೆನಿಸಿರುವ ಅದು ವೇದಸಾರವನ್ನೇ ಉಪದೇಶಿಸುತ್ತವೆ. ಉಪವೇಶನ ಎಂಬ ಅರ್ಥವುಳ್ಳ 'ಸದ್' ಎಂಬ ಧಾತುವು 'ಉಪ' 'ನಿ' ಎಂಬ ಉಪಸರ್ಗಗಳಿಂದ ಕೂಡಿ 'ಸಮೀಪದಲ್ಲಿ ಕೂಡು.' ಎಂಬ ಅರ್ಥವನ್ನು ಸೂಚಿಸುತ್ತದೆ. ಎಂದರೆ– ಶ್ರದ್ಧೆ, ಆಸಕ್ತಿ, ಭಕ್ತಿ ಇವುಗಳಿಂದ ಸದ್ಗುರುವಿನ ಸಮೀಪವನ್ನೈದಿದ ಬ್ರಹ್ಮವನ್ನು ತಿಳಿಯಬಯಸಿದ ಅಧಿಕಾರಿಯು ಸ್ವೀಕರಿಸುವ ಉಪದೇಶಗಳಿಗೆ "ಉಪನಿಷತ್ತು" ಎಂದು ಹೆಸರು. ಉಪನಿಷದ್ಯುಗದ ಅನುಭಾವಿಗಳ ಧರ್ಮಸ್ಫೂರ್ತಿಗೆ ಶ್ರುತಿಯು ಮೂಲ. ವೈದಿಕಾರ್ಯರು ಅತ್ಯುಚ್ಚತತ್ತ್ವವೇದಿಗಳು. ಅವರು ಕೇವಲ ನಿಸರ್ಗತತ್ತ್ವೋಪದೇಶಕರು ಮಾತ್ರವೇ ಅಲ್ಲದೆ, ಏಕಮೇವಾದ್ವಿತೀಯವಾದ ಪರವಸ್ತುವಿನ ಪರಿಪೂರ್ಣಾನುಭವವೂ ಅವರಿಗಿದ್ದಿತೆಂದು ತಿಳಿದುಬರುತ್ತದೆ.

ಎರಡನೆಯದಾಗಿ ಸ್ಲೆಗಲ್, ರೇ|| ಬ್ರಾಯಿಸ್, ರೇ|| ವಾರ್ಡ್, ಚಾರ್ಲಿಸ್ ಕೊಲ್ಮನ್, ಕೊಲ್ಬ್ರೂಕ್, ಕೌಂಟ್, ಜಾಸ್‌ಜನರ್ ಮುಂತಾದ ವೇದಾಭ್ಯಾಸಿಗಳು ಏಕದೇವತಾಕಲ್ಪನೆಗೆ ವೇದವೇ ಮೂಲವೆಂದು ತಮ್ಮ ಗ್ರಂಥಗಳಲ್ಲಿ ಬರೆದಿದ್ದಾರೆ.[1] ಮೇಲಾಗಿ ತತ್ತ್ವಜ್ಞಾನದ ಹಿರಿಮೆಯ ವಿಷಯದಲ್ಲಿ ನಾಸದೀಯ ಸೂಕ್ತದ ಒಂದು ಉದಾಹರಣೆ ಸಾಕು. ಏಕೆಂದರೆ ಅಲ್ಲಿ ಮಂತ್ರದ್ರಷ್ಟಾರರಾದ ಮಹರ್ಷಿಗಳ ತತ್ತ್ವಜಿಜ್ಞಾಸೆಯು ವಿಚಾರಶಕ್ತಿಯ ಮೇರೆಯನ್ನು ಮೀರಿ ಹೇಗೆ ಸ್ಫುರಿಸಿದೆ ?– ಎಂಬುದು ವೇದ್ಯವಾಗುತ್ತದೆ.

ವೇದಧರ್ಮದಿಂದ ಸ್ಫೂರ್ತಿಪಡೆದ ಉಪನಿಷತ್ಕಾಲದ ಯೋಗಸ್ಥಅನುಭಾವಿಗಳ ಉಪದೇಶರೂಪವಾದ ಮಂತ್ರಗಳು ಉಪನಿಷತ್ತುಗಳಲ್ಲಿ ಮೆರೆದಿವೆ. ಆದ್ದರಿಂದಲೇ ಉಪನಿಷದ್ಧರ್ಮವು ವೈದಿಕ ಸಂಸ್ಕೃತಿಯ ಸುವರ್ಣಕಲಶವೆನಿಸಿ ತತ್ತ್ವಜ್ಞಾನನಭೋಮಂಡಲದ ಧ್ರುವತಾರೆಯಂತೆ ಬೆಳಗುತ್ತಿದೆ.

ಯೋಗಸ್ಥಿತಿಯಲ್ಲಿ ಶುದ್ಧ-ಚೈತನ್ಯ-ಪ್ರತಿಭೆಯ ಪ್ರಕಾಶದಿಂದ ಹೊಮ್ಮಿದ ಸತ್ಯವನ್ನೇ ಮಹರ್ಷಿಗಳು ಲಲಿತ-ಸುಭಗ-ಶೈಲಿಯಿಂದ ಬೋಧಿಸಿದರು. ಅನಂತಶಕ್ತನಾದ ಪರಮಾತ್ಮನ ದಿವ್ಯ ಸಂದರ್ಶನದಿಂದುಂಟಾದ ಆನಂದದಿಂದ ಉಬ್ಬಿದ ಮನಸ್ಸುಳ್ಳ ಮುನಿಗಳು ಆತ್ಮಾನಂದದಲ್ಲಿ ತನ್ಮಯರಾಗಿ ಶಬ್ದಸೃಷ್ಟಿಯ ಸಾರ್ವಭೌಮರಾಗಿ ಜ್ಞಾನಶಿಲ್ಪಿಗಳಂತೆ ಕಾಣುತ್ತಾರೆ. ಅವರ ಅಂತರ್ವಾಣಿಯೇ ಉಪನಿಷತ್ತು. ಅದೇ ದಿವ್ಯಧ್ವನಿ ! ಅಥವಾ ಭಗವದ್ವಾಣಿ ! ದಿವ್ಯಧ್ವನಿಯೆನಿಸಿರುವ ಭಗವದ್ವಾಣಿಯು ವಿವಿಧಭಾಷಾತ್ಮಕ ಎಂಬುದನ್ನು ಪಂಡಿತಪ್ರಕಾಂಡನೆನಿಸಿರುವ **ಭಟ್ಟಾಕಳಂಕನು** ತನ್ನ **ಶಬ್ದಾನುಶಾಸನ** ಎಂಬ ಕರ್ಣಾಟಕ ವ್ಯಾಕರಣಶಾಸ್ತ್ರದಲ್ಲಿ ಹೀಗೆ ಹೇಳಿದ್ದಾನೆ–

"ಒಂದೇ ಭಗವದ್ವಾಣಿಗೆ ನಾನಾಭಾಷಾತ್ಮಕತ್ವವು ಹೇಗೆ ? ಎಂದರೆ– ಅದೇ ದಿವ್ಯಧ್ವನಿಯ ಅಚಿಂತ್ಯಮಹಿಮೆಯ ಪ್ರಭಾವ ! ಹೇಗೆ ಮಳೆಗಾಲದಲ್ಲಿ ಗಗನತಲದಿಂದ ಬಿದ್ದ ಅಂತರಿಕ್ಷಜಲವು ಒಂದೇ ಅವ್ಯಕ್ತರಸವುಳ್ಳದ್ದಾದರೂ ಉಪ್ಪು-ಕಪ್ಪು-ಬಂಜರನೆಲಗಳನ್ನು ಸೇರಿ ಅದೇ ಉಪ್ಪು. ಸಿಹಿ ಮತ್ತು ಒಗರು ಎಂಬ ಗುಣಭೇದದಿಂದ ರುಚಿಸುವುದೋ, ಹೇಗೆ ಸೂರ್ಯನು ಸ್ವಾತೀ ನಕ್ಷತ್ರಕ್ಕೆ

---

[1] ಆರ್. ಆರ್. ದಿವಾಕರ್ ಅವರ ಕನ್ನಡ ಉಪನಿಷತ್ಪ್ರಕಾಶದ ಪ್ರಸ್ತಾವನೆ ಪು.೩೧-೩೨

ಬಂದಾಗ ಎಂದರೆ- ಶರದೃತುವಿನಲ್ಲಿ ಬಿಳಿಮುಗಿಲಿನಿಂದ ಉದುರುವ ಗಗನಹನಿಯೊಂದೇ ಆದರೂ ಅದು ತಾಮ್ರಪರ್ಣೀ-ಶುಕ್ತಿ-ಸಪ್ತಚ್ಛದಗಳನ್ನು ಸೇರಿ ಮುತ್ತು, ಕರ್ಪೂರ ಮುಂತಾದ ಅನೇಕ ಆಕಾರಗಳನ್ನು ತಳೆವುದು ಎಲ್ಲರ ಅನುಭವವಲ್ಲಿದೆ. ಹೇಗೆ ತೋಟದ ಒಂದೇ ಕಾಲುವೆಯಲ್ಲಿ ಹರಿಯುವ ನೀರು ಮಾವು ಬೇವು ಮುಂತಾದ ಆಯಾ ಮರಗಳ ಬುಡದ ಪಾತಿಗಳನ್ನು ಸೇರಿ ಆಯಾ ಮರದ ಹಣ್ಣು ಸಿಹಿ, ಹುಳಿ, ಕಹಿ ಮುಂತಾದ ನಾನಾರಸವಾಗಿ ಪರಿಣಮಿಸಿ ಅನೇಕವಿಧವಾದ ರುಚಿಯನ್ನುಂಟುಮಾಡುವುದು ಸರ್ವಶ್ರುತವಾಗಿದೆಯೊ ಅದರಂತೆ ಭಗವದ್ಭಾಷೆಯೂ ಸಹ ತಾನು ಹುಟ್ಟುವಾಗ ಸಮುದ್ರಘೋಷದಂತೆ ಅವ್ಯಕ್ತವಾದ ಒಂದೇ ಭಾಷೆಯಾದರೂ ಸಹ ವಿಚಿತ್ರಶಕ್ತಿಯುಳ್ಳದ್ದಾದ್ದರಿಂದ ಅದು ಅವರವರ ಕಿವಿಗಳಿಗೆ ಆಯಾ ಭಾಷೆಯಾಗಿ ಪರಿಣಮಿಸುತ್ತದೆ."[1]

ಇಲ್ಲಿ ದಿವ್ಯಧ್ವನ್ಯಾತ್ಮಕವಾದ ಶಬ್ದವು ಹೇಗೆ ನಾನಾಭಾಷೆಗಳಾಗಿ ಪರಿಣಮಿಸುತ್ತದೆಯೋ ಅದರಂತೆ ಆ ಶಬ್ದದಲ್ಲಿ ಅವಿನಾಭಾವಸಂಬಂಧದಿಂದಿರುವ ಅರ್ಥವೂ ಸಹ ಅಧಿಕಾರಿಭೇದದಿಂದ ಅನೇಕತತ್ತ್ವಗಳಾಗಿ ತೋರುವಲ್ಲಿ ಯಾವ ವಿರೋಧವೂ ಕಾಣುವುದಿಲ್ಲ. ಸತ್ತ್ವೋದ್ರಿಕ್ತ ಸ್ಥಿತಿಯಲ್ಲಿ ಯೋಗಸ್ಥರಾದ ಮುನಿಪುಂಗವರ ಅಂತರ್ವಾಣೀಸ್ವರೂಪವಾದ ಈ ಉಪನಿಷತ್ತು ಅನುಷ್ಠಾನಶೀಲರಾದ ಶಂಕರರೇ ಮೊದಲಾದ ಆಚಾರ್ಯರಿಗೆ ಒಂದೇ ಸತ್ಯವು ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ (ವಿಶೇಷಾದ್ವೈತ) ಮುಂತಾಗಿ ತೋರುವಲ್ಲಿ ಅಸಂಗತವಾಗಲಿ ಆಶ್ಚರ್ಯವಾಗಲಿ ಕಾಣುವುದಿಲ್ಲ. ಈ ವಿಷಯದಲ್ಲಿ ಅತ್ಯಾಧುನಿಕತತ್ತ್ವಶಾಸ್ತ್ರಜ್ಞನಾದ ಆರ್. ಡಿ. ರಾನಡೇ (R. D. Ranade) ಮಹಾಶಯನ ಆಶಯವಿದು-

"ದಿಕ್ಕುದಿಕ್ಕಿ"ಗೆ ಹರಿವ ನದಿಗಳಿಗೆ ಪರ್ವತವು ಹೇಗೋ ಹಾಗೆ ಉಪನಿಷತ್ತುಗಳೇ ತತ್ತ್ವಶಾಸ್ತ್ರಗಳಿಗೆ ಮೂಲ. ಆ ಉಪನಿಷತ್ತುಗಳಿಂದ ನಾನಾವಿಧವಾದ ಉಪನದಿಗಳು ಹುಟ್ಟಿ ಜೀವನಸಾಗರವನ್ನು ಕುರಿತು ಹರಿಯುತ್ತವೆ. ತಮ್ಮ ತಮ್ಮ ಬುದ್ಧಿಯ ವೈಚಿತ್ರ್ಯದಿಂದ ಜನಿಸಿದ ಉಪಶಾಖಾರೂಪವಾದ ಉಪನದಿಗಳ ಸಂಗಮದಿಂದ ಪರಿಪುಷ್ಟವಾದ ಅವುಗಳಿಂದ ಜೀವನಸಾಗರಕ್ಷೇತ್ರದಲ್ಲಿ ತತ್ತ್ವಶಾಸ್ತ್ರದ ಸುವಿಶಾಲಜಲಪಾತ್ರವು ನಿರ್ಮಿತವಾಗಿದೆ. ಇದರಂತೆ ಜೈನ-ಬೌದ್ಧ-ಸಾಂಖ್ಯ-ಯೋಗ-ಶೈವ-ಮೀಮಾಂಸಕರೇ ಮುಂತಾದವರ ದ್ವೈತ-ಅದ್ವೈತ-ವಿಶಿಷ್ಟಾದ್ವೈತಪಂಥಗಳ ಮೂಲಗಳು ಉಪನಿಷತ್ತುಗಳಲ್ಲಿ ಕಾಣುತ್ತವೆ. ಆದ್ದರಿಂದಲೇ ಉಪನಿಷತ್ತುಗಳು ಒಂದೇ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ ; ಎಂದು ಯಾರೂ ಹೇಳಲಾಗುವುದಿಲ್ಲ. [1] ಇದರಿಂದ ಮಂತ್ರದ್ರಷ್ಟಾರರು ಅಂತರಾತ್ಮನ ಪ್ರೇರಣೆಯಿಂದ ಹೊರಹೊಮ್ಮಿದ ಭಾವನೆಗಳ ಸ್ವರೂಪವನ್ನು ಹೃದಯಂಗಮವೂ ಸರಲ-ಸುಭಗವೂ ಆದ ಶೈಲಿಯಿಂದ ಪ್ರಕಾಶಪಡಿಸಿದರು. ಅವರ ಆಲೋಚನಾತರಂಗಗಳಲ್ಲಿನ ಸ್ವಯಂಪ್ರೇರಿತ-ಭಾವಜನಿತನಿರೂಪಣೆಗಳೇ ಉಪನಿಷತ್ತುಗಳಲ್ಲಿ ಕಂಡುಬರುತ್ತವೆ.

## ಉಪನಿಷತ್ತುಗಳ ಕಾಲ ಮತ್ತು ಅವುಗಳ ಪ್ರಭೇದಗಳು

ಶ್ರುತಿ ಎಂದು ಪ್ರಸಿದ್ಧವಾದ ಉಪನಿಷತ್ತುಗಳು ಅಪೌರುಷೇಯಗಳು. ಆದ್ದರಿಂದಲೇ ಅವು ಪ್ರಮಾಣಭೂತವೂ ಪವಿತ್ರವೂ ಆಗಿವೆ. ಸಂಪ್ರದಾಯಸಮ್ಮತವಾದ ಎಲ್ಲ ಪಂಥಗಳೂ ತಮ್ಮ ಅಭಿ

---

[1] ಕನ್ನಡ ಶಬ್ದಾನುಶಾಸನ ಪು.೯.೧೦

[2] E.H.I.P., Vol.2.A Constructive Survey of Upanishadic Philosophy 1926.p.179 by, R. D. Ranade.

ಮತವನ್ನು ಸಮರ್ಥಿಸುವುದಕ್ಕಾಗಿ ಉಪನಿಷತ್ತುಗಳನ್ನು ಉದಾಹರಿಸುತ್ತವೆ. ಉಪನಿಷತ್ತುಗಳಲ್ಲಿ ಅಭಿಪ್ರಾಯಸ್ವಾತಂತ್ರ್ಯಕ್ಕೆ ಹಾಗೂ ಅರ್ಥವೈಶಾಲ್ಯಕ್ಕೆ ಅವಕಾಶವಿರುವುದರಿಂದ ಅಲ್ಲಿ ತತ್ತ್ವಜಿಜ್ಞಾಸೆ ಮತ್ತು ವಿವಿಧನ್ಯಾಯಾಭಿಮತಕ್ಕೆ ಪ್ರಾಮಾಣ್ಯವನ್ನು ಕಂಡುಹಿಡಿವುದು ಸುಲಭ. ಆದ್ದರಿಂದಲೇ ಮುಸ್ಮುಂದೆ ತಮ್ಮ ತಮ್ಮ ಮತಗಳನ್ನು ಅಭಿವ್ಯಂಜಿಸುವ ವಿವಿಧಪಂಥಗಳು ಉದಯಿಸಿದವು. ಸ್ವಮತದ ಆಶಯವನ್ನು ಸಮರ್ಥಿಸಲು ಪ್ರಾಚೀನಉಪನಿಷತ್ತುಗಳಿಂದ ಪ್ರಾಮಾಣ್ಯವನ್ನು ತೋರಲು ಅವಕಾಶ ವಿಲ್ಲದಾಗ ಪ್ರಾಚೀನಉಪನಿಷತ್ತುಗಳನ್ನು ಅನುಕರಣಮಾಡಿ ಬೇರೆ ಉಪನಿಷತ್ತುಗಳೂ ಹೊರಟವು. ಆದ್ದರಿಂದಲೇ ಇಂದು ಉಪನಿಷತ್ತುಗಳ ಸಂಖ್ಯೆ ಸು. ೨೫೦ ಕ್ಕೆ ಏರಿದೆ.

ಈ ಉಪನಿಷತ್ತುಗಳೆಲ್ಲವೂ ಪ್ರಾಚೀನ ಎಂದು ಒಪ್ಪಲಾಗುವುದಿಲ್ಲ. ಅವುಗಳಲ್ಲಿ ಹಳೆಯವು ಮತ್ತು ಹೊಸವು ಎಂದು ನಿರ್ಣಯಿಸುವುದಕ್ಕೆ ವಿಮರ್ಶಕರು ಕೆಲವು ಕಾರಣಗಳನ್ನು ಸೂಚಿಸಿದ್ದಾರೆ. ಉಪನಿಷತ್ತುಗಳ ಭಾಷೆ, ಶೈಲಿ, ಶಬ್ದಕೋಶ, ವ್ಯಾಕರಣವಿಶೇಷ, ವಿಷಯನಿರ್ದೇಶ, ಯಜ್ಞಗಳ ಮೇಲೆ ಬ್ರಾಹ್ಮಣಗ್ರಂಥಗಳ ಪ್ರಭಾವ, ಮಂತ್ರ (ಐಂದ್ರಜಾಲಿಕ), ವ್ರತ, ಫಲಶ್ರುತಿ, ತತ್ತ್ವಾಭಿ ಪ್ರಾಯಗಳ ಐತಿಹಾಸಿಕಪ್ರಗತಿ ಮುಂತಾದುವುಗಳ ಪರ್ಯಾಲೋಚನೆಯಿಂದ ಉಪನಿಷತ್ತುಗಳ ಪೌರ್ವಾಪರ್ಯವನ್ನು ನಿರ್ಣಯಿಸಲಾಗಿದೆ. ಪ್ರಾಚೀನಉಪನಿಷತ್ತುಗಳಲ್ಲಿ ಕೆಲವು ಕ್ರಿ.ಪೂ.ಸು.೬೦೦ ವರ್ಷಗಳ ಹಿಂದೆ ಬುದ್ಧನ ಕಾಲದವುಗಳು. ಕೆಲವರ ಅಭಿಪ್ರಾಯದಂತೆ ಅವು ಹತ್ತು, ಮತ್ತೆ ಕೆಲವರ ಆಶಯದಂತೆ ಹದಿಮೂರು ಎಂದು.

ಪ್ರಾಚೀನೋಪನಿಷತ್ತುಗಳ ಕ್ರಮವು ಹೀಗಿದೆ– **ಬೃಹದಾರಣ್ಯಕ, ಛಾಂದೋಗ್ಯ, ತೈತ್ತಿರೀಯ, ಐತರೇಯ, ಕೌಷೀತಕೀ, ಕೇನ, ಕಠ, ಈಶ, ಮುಂಡಕ, ಪ್ರಶ್ನ, ಮಾಂಡೂಕ್ಯ, ಶ್ವೇತಾಶ್ವತರ, ಮೈತ್ರೇಯ** ಎಂದು. ಮೇಲಿನ ಪಟ್ಟಿಕೆಯಲ್ಲಿ ಮೊದಲ ಆರು ಅತ್ಯಂತ ಪ್ರಾಚೀನವೆಂದೂ, ಈ ಹದಿಮೂರರ ಮೇಲೆ ಇರುವುವುಗಳು ಅರ್ವಾಚೀನವೆಂದೂ ಹೇಳ ಲಾಗಿದೆ.

### ಉಪನಿಷತ್ತುಗಳ ಉದ್ದೇಶ

ಉಪನಿಷತ್-ದ್ರಷ್ಟಾರರು ತಮ್ಮ ಅನೋಘತಪಃಪ್ರಭಾವದಿಂದ ದುಃಖದ ಮೂಲವೇನು ?– ಎಂಬುದನ್ನು ಚನ್ನಾಗಿ ಅರಿತಿದ್ದರು. ಅವರ ಉದ್ದೇಶವು ಜೀವಾತ್ಮನನ್ನು ಕರ್ಮಬಂಧನದಿಂದ ಬಿಡಿಸಿ ಆತ್ಮಜ್ಞಾನದ ಮೂಲಕ ಅಮೃತತ್ವದ ಕಡೆ ತಿರುಗಿಸುವುದು. ಪ್ರೇಯಸ್ಸಿ (ಪ್ರಾಪಂಚಿಕ ವಿಷಯಗಳು) ನಲ್ಲಿ ಮಗ್ನನಾಗಿರುವ ಜೀವನಿಗೆ ವಿಷಯಸುಖವು ನಶ್ವರವಾದ್ದರಿಂದ ಅದರಲ್ಲಿ ಹೇಯಭಾವವನ್ನುಂಟು ಮಾಡಿ ಅವನನ್ನು ಶ್ರೇಯಸ್ಸಿನ ಕಡೆ ತಿರುಗಿಸುವುದೇ ಉಪನಿಷತ್ತುಗಳ ಅಧ್ಯಯನಕ್ಕೆ ಪ್ರಯೋಜನ. ಆದರೆ ಉಪನಿಷತ್ತು ಕೇವಲ ಅತೀಂದ್ರಿಯವೂ ಪಾರಲೌಕಿಕವೂ ಆದ ವಿಷಯವನ್ನು ಮಾತ್ರ ಬೋಧಿ ಸುವುದಿಲ್ಲ; ಮೇಲಾಗಿ ಅದು ಸಮಾಜದ ಭದ್ರತೆಗೆ ಆಧಾರವಾದ ನೀತಿಯ ನೆಲೆಗಟ್ಟನ್ನು ದೃಢಪಡಿಸಿ ಅಭ್ಯುದಯಸಾಧಕವಾದ ಲೌಕಿಕಜೀವನವನ್ನು ಅನಾಸಕ್ತಿನೌಕೆಯ ಮೂಲಕ ಸಂಸಾರಸಾಗರವನ್ನು ದಾಂಟಿಸಿ ಮತ್ತೆ ಹುಟ್ಟದೆ ನಿರತಿಶಯವಾದ ಆನಂದವನ್ನು ದೊರಕಿಸುವುದು. ಇದೇ ಉಪನಿಷತ್ತುಗಳ ಧ್ಯೇಯ. ಅಲ್ಲಿ ತರ್ಕಕ್ಕಾಗಲಿ, ವಾದವಿವಾದಗಳಿಗಾಗಲಿ ಅವಕಾಶವಿಲ್ಲ. "ನ ಹಿ ತರ್ಕೇಣಾನು ಸಂಧತ್ತೇ"– ಎಂದು ಬೌದ್ಧಿಕವಾದವನ್ನು ಅದು ಟೀಕಿಸಿದೆ; ಏಕೆಂದರೆ ಯುಕ್ತಿಯು ನಿಲ್ಲತಕ್ಕದ್ದಲ್ಲ.

ಒಟ್ಟಿನಲ್ಲಿ ಆದರ್ಶಜೀವನ, ಸಾತ್ವಿಕಾಹಾರ, ಮಾನಸಿಕ ನೈರ್ಮಲ್ಯ, ಇಂದ್ರಿಯ ನಿಗ್ರಹ, ಅನಾಸಕ್ತಿ, ಸದಾಚಾರ ಅನುಷ್ಠಾನಗಳಿಂದ ಸಾಧಕನು ಎಲ್ಲಿಡೆ ಭಗವಂತನಿರುವನೆಂದು ತಿಳಿದು ಶಿವಾನಂದವನ್ನು ಅನುಭವಿಸಬೇಕು; ಎಂಬುದು ಉಪನಿಷತ್ತುಗಳ ಹೃದಯ. ಆದ್ದರಿಂದ-

"ಅಸತ್ತಿನಿಂದ ಸತ್ತಿನ ಕಡೆಗೆ
ಕತ್ತಲಿನಿಂದ ಬೆಳಕಿನ ಕಡೆಗೆ
ಮೃತ್ಯುವಿನಿಂದ ಅಮೃತತ್ತ್ವದ ಕಡೆಗೆ-

ನಮ್ಮನ್ನು ನಡೆಸು" ಎಂಬ ಅಮರ ಸಂದೇಶವು ಎಲ್ಲರ ಹೃದಯಗಳಲ್ಲಿ ಸ್ಫುರಿಸಿ, ಎಲ್ಲೆಡೆ ಹರಡುತ್ತಾ ಭಾರತಸಂಸ್ಕೃತಿಯ ಓಜಸ್ಸನ್ನು ಬೆಳಗಿಸುತ್ತದೆ.

೪

# ವೇದಾ(ಬ್ರಹ್ಮ)ಧಿಕಾರನಿರ್ಣಯ

ವೇದೋಕ್ತವಾದ ಉಪಾಸನಾರಹಸ್ಯ ಮತ್ತು ವೇದರಕ್ಷಣೆಯ ರೀತಿಯನ್ನು ಕುರಿತು ಮಹರ್ಷಿ ಅರವಿಂದಘೋಷರ ಅಭಿಪ್ರಾಯವಿದು- "ಆತ್ಮಜ್ಞಾನ ಮತ್ತು ದೇವತಾವಿಷಯಕವಾದ ಸತ್ಯಜ್ಞಾನರಹಸ್ಯವನ್ನು ಸಂರಕ್ಷಿಸುವುದೇ ವೇದರಹಸ್ಯರಕ್ಷಣಾವಾದಿಗಳಉದ್ದೇಶ. ಅದು ಉಚಿತವೇ! ಸರಿ ಏಕೆಂದರೆ ಇಂಥ ಪವಿತ್ರರಹಸ್ಯವಿಚಾರವು ಅನಧಿಕಾರಿಗಳಿಂದ ದುರುಪಯೋಗವಾಗಬಾರದೆಂಬುದು. ಅದಕ್ಕಾಗಿ ಅವರು ಬಾಹ್ಯಪೂಜಾವಿಧಿಯನ್ನು ಪ್ರಾಕೃತಜನರ ಉಪಯೋಗಕ್ಕಾಗಿ ರಚಿಸಿದರು. ಅಧಿಕಾರಿಗಳಿಗೆ ಮತ್ತು ಜ್ಞಾನಿಗಳಿಗೆ ಅಂತರಿಕೋಪಾಸನೆ ವಿಹಿತವಾಯಿತು. ಪೂಜಾವಿಧಿಯು ಜನರಂಜಕವಾದ ರೀತಿಯಲ್ಲಿ ವಿಶಿಷ್ಟಭಾಷೆಯಿಂದ ಕೂಡಿತ್ತು. ಅಲ್ಲಿ ವಿಶಿಷ್ಟಜ್ಞಾನದ ಮಟ್ಟವನ್ನು ಪಡೆದ ಜ್ಞಾನಿಗಳಿಗೆ ಆಧ್ಯಾತ್ಮಿಕಾರ್ಥಬೋಧವೂ ಸಾಧರಣಜನರಿಗೆ ಸ್ಥೂಲಾರ್ಥಬೋಧವೂ ಆಗುವಂತಿದೆ. ವೈದಿಕಸೂಕ್ತಗಳು ಈ ಅರ್ಥವನ್ನು ಒಳಗೊಂಡೇ ರಚಿತವಾಗಿವೆ. ಎಲ್ಲ ವೈದಿಕವಿಧಿವಿಧಾನಗಳೂ ಬಾಹ್ಯದೃಷ್ಟಿಯಿಂದ ಪ್ರಕೃತಿಪೂಜೆ (ಆ ಕಾಲಕ್ಕೆ ಉಚಿತವಾಗಿ) ನಿಯೋಜಿತವಾಗಿದೆ. ಅದೇ ಕರ್ಮಕಾಂಡದ ವಿಸ್ತೃತವಾದ ಆಚಾರ. ಆದರೆ ಆಂತರಿಕದೃಷ್ಟಿಯಿಂದ ಅವು ಆಧ್ಯಾತ್ಮಿಕ-ಅನುಭೂತಿಗೆ ಜ್ಞಾನೋದಯಕ್ಕೆ ಮತ್ತು ಆತ್ಮಾನುಸಂಧಾನಕ್ಕೆ ಸಾಧನವಾಗಿವೆ."[1]

**ಅಪಶೂದ್ರಾಧಿಕರಣಮೀಮಾಂಸೆ**

ವೇದೋಪದೇಶಗಳು **ಇಡಿಯ ಮಾನವ ಸಮಾಜವನ್ನು** ಉದ್ಧರಿಸಲು ಅಭಿವ್ಯಕ್ತವಾದವುಗಳಾದರೂ, ಅವುಗಳನ್ನು ಜನತೆಗೆ ಬೋಧಿಸುವಲ್ಲಿ 'ಅಧಿಕಾರಿ ಯಾರು?' ಎಂಬ ಸಂದೇಹ ಬಂತು. ಶೂದ್ರರು, ಅಂತ್ಯಜಾತಿಯವರು ಮತ್ತು ಸ್ತ್ರೀಯರಿಗೆ ವೇದಾಧ್ಯಯನವನ್ನು ಮಾಡುವ ಅಧಿಕಾರವಿಲ್ಲ; ಎಂಬುದು ಸಂಪ್ರದಾಯ. ಈ ಬಗೆಗೆ 'ಸ್ತ್ರೀ-ಶೂದ್ರರು ವೇದಾಧ್ಯಯನ ಮಾಡಬಾರದು'[2] ಮುಂತಾದ ಉಕ್ತಿಗಳನ್ನು ಉದಾಹರಿಸುವುದುಂಟು. ಬಾದರಾಯಣರೂ ಕೂಡ ತಾವು ರಚಿಸಿರುವ ಅಪಶೂದ್ರಾಧಿಕರಣದಲ್ಲಿ ಈ ವಿಷಯವನ್ನು ಪ್ರತಿಪಾದಿಸಿರುವರೆಂದು ಸಮರ್ಥಿಸಲಾಗುತ್ತಿದೆ. ಆದರೆ ಈ ಬಗೆಗೆ ಇಲ್ಲಿ ವಿವೇಚನೆ ಮಾಡಲಾಗಿದೆ.

---

[1] ವೇದರಹಸ್ಯಂ ಭಾ. I. ಪು.೮.    [2] "ಸ್ತ್ರೀ. ಶೂದ್ರೌ ನಾಧೀಯಾತಾಮ್."

ಅಪಶೂದ್ರಾಧಿಕರಣವು ಬ್ರಹ್ಮಸೂತ್ರದ ಮೊದಲ ಅಧ್ಯಾಯದ ಮೂರನೆಯ ಪಾದದಲ್ಲಿದೆ. ಈ ಅಧಿಕರಣದಲ್ಲಿ ಐದು ಸೂತ್ರಗಳಿವೆ ಇವುಗಳಲ್ಲಿ–

"ಶುಗಸ್ಯ ತದಾನಾದರಶ್ರವಣಾತ್ತದಾ ದ್ರಾವಣಾತ್ಸೂಚ್ಯತೇ ಹಿ[1]"

ಎಂಬ ಈ ಸೂತ್ರವು ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಬರುವ ಒಂದು ಆಖ್ಯಾಯಿಕೆಯನ್ನು ಅವಲಂಬಿಸಿದೆ. ಆ ಆಖ್ಯಾಯಿಕೆ ಹೀಗಿದೆ–

ಜಾನಶ್ರುತಿ ಎಂಬುವನು ಒಬ್ಬ ಅರಸು. ಆತ ಧರ್ಮಿಷ್ಠ. ಆತ ದಾನಧರ್ಮಪರೋಪಕಾರಗಳಿಂದ ಕೀರ್ತಿಶಾಲಿಯಾಗಿದ್ದ. ಎಲ್ಲ ದಿಕ್ಕುಗಳಲ್ಲಿಯೂ ಗ್ರಾಮ-ನಗರ ಮೊದಲಾದಲ್ಲೆಲ್ಲ ದಾರಿಗರಿಗೆ ಅನಾಥರಿಗೆ ಧರ್ಮಸತ್ರ, ಅರವಂಟಿಗೆಗಳನ್ನಿರಿಸಿ ಅನ್ನೋದಕಗಳನ್ನು ಕೊಡುವ ವ್ಯವಸ್ಥೆ ಮಾಡಿದ್ದ. ಇಷ್ಟು ಧರ್ಮಿಷ್ಠನಾದ ಅವನಲ್ಲಿ ಬ್ರಹ್ಮಜಿಜ್ಞಾಸೆಯನ್ನು ಹುಟ್ಟಿಸಬೇಕೆಂದು ಕೆಲವರು ಋಷಿಗಳು ಬಯಸಿದರು. ಅದಕ್ಕಾಗಿ ಅವರು ಹಂಸಗಳ ರೂಪುಧರಿಸಿ ರಾತ್ರಿಯಲ್ಲಿ ಅರಮನೆಯ ಮೇಲೆ ಹಾರುವಾಗ ಉಪ್ಪರಿಗೆಯಲ್ಲಿ ಮಲಗಿದ್ದ ಅರಸನಿಗೆ ಕೇಳಿಸುವಂತೆ ಹೀಗೆ ಮಾತನಾಡಿಕೊಂಡರು. ಗಗನದಲ್ಲಿ ಹಾರಿಹೋಗುತ್ತಿದ್ದ ಹಂಸಗಳಲ್ಲಿ ಮುಂದೆ ಹೋಗುತ್ತಿದ್ದ ಹಂಸವನ್ನು ಕುರಿತು ಹಿಂದಿದ್ದ ಹಂಸವು ಗಾಬರಿಯಿಂದ ಹೀಗೆಂದಿತು. "ಎಲೈ ಸಂಜೆಗಣ್ಣನೆ ! ನಿಲ್ಲು ! ನಿಲ್ಲು ! ಮುಂದೆ ಜಾನಶ್ರುತಿಯ ಧರ್ಮಪ್ರಭಾವದಿಂದ ಉಂಟಾದ ಜ್ಯೋತಿಯು ಹರಡಿದೆ. ನೀನು ಅಲ್ಲಿಗೆ ಹೋಗಬೇಡ ! ಹಾಗೆ ಹೋದಲ್ಲಿ ನೀನು ಸುಟ್ಟುಹೋಗುವೆ !" ಎಂದು.

ಅದನ್ನು ಕೇಳಿ ಮುಂದಿದ್ದ ಹಂಸವು– "ನೀನು ಮಂದಮತಿ ! ಜಾನಶ್ರುತಿ ಎಂಬುವನು ಯಾರು ? ಆ ಬಂಡಿಯ ರೈಕ್ವನ ಬ್ರಹ್ಮಜ್ಞಾನದಿಂದುಂಟಾದ ಪ್ರಭಾವದ ಮುಂದೆ ಇವನದೆಂತಹ ಪ್ರಭಾವ ? ಬ್ರಹ್ಮಜ್ಞನಾದ ಆ ರೈಕ್ವನೆಲ್ಲಿ ! ಬಡಪಾಯಿಯಾದ ಈ ಜಾನಶ್ರುತಿಯೆಲ್ಲಿ ?" ಎಂದು ಜಾನಶ್ರುತಿಯನ್ನು ಅಲ್ಲಗಳೆಯಿತು.

ಹಂಸಗಳ ಈ ಸಂಭಾಷಣೆಯನ್ನು ಕೇಳಿದ ರಾಜನಿಗೆ ತುಂಬಾ ದುಃಖವಾಯಿತು. "ಧರ್ಮಪ್ರಭಾವಕ್ಕಿಂತಲೂ ಬ್ರಹ್ಮಜ್ಞಾನವು ಹಿರಿದು ಎಂದಮೇಲೆ ನಾನೂ ರೈಕ್ವನನ್ನು ಆಶ್ರಯಿಸಿ ಅವನಿಂದ ಬ್ರಹ್ಮೋಪದೇಶವನ್ನು ಏಕೆ ಪಡೆಯಬಾರದು?" ಎಂದು ರಾಜ ನಿರ್ಧರಿಸಿದನು. ರಾತ್ರಿ ಅವನಿಗೆ ನಿದ್ರೆ ಹತ್ತಲಿಲ್ಲ. ದುಗುಡದಿಂದ ಅವನ ಮನಸ್ಸು ದ್ರವಿಸಿತ್ತು. ರಾತ್ರಿಯೆಲ್ಲಾ ರೈಕ್ವನದೇ ಹಂಬಲ. 'ಎಷ್ಟು ಹೊತ್ತಿಗೆ ಅವನನ್ನು ಸಂದರ್ಶಿಸಿ ಅವನ ಕೃಪೆಗೆ ಪಾತ್ರನಾದೇನು ?' ಎಂಬ ಕುತೂಹಲ ! ಅವನನ್ನು ಹುಡುಕಲು ಚಾರರು ನಿಯಮಿತರಾದರು.

ರಾಜನು ಉದಯಕ್ಕೆ ಮುನ್ನವೇ ಎದ್ದು ನಿತ್ಯಕರ್ಮಗಳನ್ನು ಮುಗಿಸಿದ. ಅಷ್ಟರಲ್ಲಿ ರೈಕ್ವನನ್ನು ಹುಡುಕಲು ಹೋಗಿದ್ದ ಚಾರರು ಹಿಂದಿರುಗಿ ಬಂದು "ರೈಕ್ವನೆಂಬುವನು ಮನೆಮಠಗಳಿಲ್ಲದೆ ಬಂಡಿಯ ಕೆಳಗೆ ಕುಳಿತು ನವೆ ತುರಿಸಿಕೊಳ್ಳುತ್ತಿರುವ ಒಬ್ಬ ಸಾಮಾನ್ಯ ವ್ಯಕ್ತಿ" ಎಂದು ತಿಳಿಸಿದರು. "ಬ್ರಹ್ಮವನ್ನು ಬಲ್ಲವನು ಎಂತಿದ್ದರೇನು ?" ಎಂದುಕೊಂಡ ಜಾನಶ್ರುತಿ ಅವನನ್ನು ಕಂಡು ಅವನಿಗೆ ಶರಣಾಗಲು ನಿರ್ಧರಿಸಿದ. ರಾಜನು ಅವನಿಗೆ ಕಾಣಿಕೆಯಾಗಿ ಒಪ್ಪಿಸಲು ನೂರಾರು ಆಕಳುಗಳು, ಒಂದು ರಥ ಮತ್ತು ಅನೇಕ ಆಭರಣಗಳನ್ನು ಕೊಂಡೊಯ್ದು ರೈಕ್ವನಿಗೆ ಶರಣಾದ. ಆದರೆ ರೈಕ್ವ

---

[1] ಬ್ರಂ.ಸೂ.೧.೩.೯.೩೪

ಬ್ರಹ್ಮಜ್ಞನಾದ್ದರಿಂದ ರಾಜನ ದುಗುಡವನ್ನು ಮೊದಲೇ ಅರಿತಿದ್ದ. ಆದ್ದರಿಂದಲೇ ಆತ ರಾಜನನ್ನು ಕುರಿತು "ಎಲೈ ಶೂದ್ರನೆ, ನಿನ್ನ ಕಾಣಿಕೆ ನಿನಗೇ ಇರಲಿ; ಹೋಗು." ಎಂದ. ಅರಸನ ದುಃಖ ಇಮ್ಮಡಿಸಿತು. ಹೃದಯ ಮತ್ತಷ್ಟು ದ್ರವಿಸಿತು. ಮತ್ತೆ ಜಾನಶ್ರುತಿ ಸಾವಿರಾರು ಆಕಳು, ರಥ, ಆಭರಣಗಳೇ ಅಲ್ಲದೆ ಅವನಿಗಾಗಿ ಒಂದು ಗ್ರಾಮ ಮತ್ತು ಅವನನ್ನು ವರಿಸಲಿಚ್ಛಿಸಿದ ತನ್ನ ಮಗಳನ್ನೂ ಒಪ್ಪಿಸಿ ಬ್ರಹ್ಮವಿದ್ಯೆಯನ್ನು ಯಾಚಿಸಿದ. ಇವರಿಂದ ಸಂತುಷ್ಟನಾದ ಗುರು (ರೈಕ್ವ) ರಾಜನಿಗೆ ಬ್ರಹ್ಮೋಪದೇಶವನ್ನು ಕರುಣಿಸಿದ.

ಇಲ್ಲಿ ಆಚಾರ್ಯ ರೈಕ್ವನು ಬ್ರಹ್ಮಜ್ಞನಾದ್ದರಿಂದ ಸರ್ವಜ್ಞನಾಗಿದ್ದ. ಆದ್ದರಿಂದಲೇ ಅವನು ಹಂಸಗಳ ಅನಾದರಣೆಯ ಮಾತುಗಳನ್ನು ಕೇಳಿ ರಾಜನ ಮನಸ್ಸು ದುಃಖದಿಂದ ದ್ರವಿಸಿದೆ; ಎಂದು ಮೊದಲೇ ಅರಿತಿದ್ದ. ಅದಕ್ಕಾಗಿಯೇ ಅವನು ಅರಸನನ್ನು "ಶೂದ್ರ" ಎಂದು ಕರೆದದ್ದು. "ಶುಚಾ ದ್ರವತೀತಿ ಶೂದ್ರಃ" ಎಂಬ ವ್ಯುತ್ಪತ್ತಿಯಿಂದ ಜಾನಶ್ರುತಿ ಕ್ಷತ್ರಿಯನಾಗಿದ್ದರೂ ಯೋಗ ವೃತ್ತಿಯಿಂದ ಶೂದ್ರನೆನಿಸಿದ್ದ. ಆದರೆ ಅವನು ಜಾತಿಶೂದ್ರನಲ್ಲ. ಇದನ್ನೇ ಬಾದರಾಯಣರು "ಶುಗಸ್ಯ ತದಾನಾದರಶ್ರವಣಾತ್...." ಎಂಬ ಸೂತ್ರದಲ್ಲಿ ಸೂಚಿಸಿರುವುದು: ಎಂದರೆ– ಹಂಸಗಳ ಅನಾದರದ ಉಕ್ತಿಗಳನ್ನು ಕೇಳಿದ ಅವನಿಗೆ ದುಃಖವಾಗಿ ಗುರುವಿನಲ್ಲಿಗೆ ಧಾವಿಸಿಬಂದಿರುವನೆಂದು ಉಕ್ತ ವಾಗಿರುವುದರಿಂದ ಇಲ್ಲಿಯ ಶೂದ್ರಪದ ಜಾತಿಶೂದ್ರನನ್ನು ಕುರಿತದಲ್ಲ. ಆದರೂ ಶ್ರುತಿಯಲ್ಲಿಯೇ ಗುರು ತನ್ನ ಶಿಷ್ಯನನ್ನು 'ಶೂದ್ರ'ನೆಂದು ಕರೆದು ಅವನಿಗೆ ಬ್ರಹ್ಮೋಪದೇಶ ಮಾಡಿರುವುದರಿಂದ ಶೂದ್ರ ನಿಗೂ ಬ್ರಹ್ಮವಿದ್ಯೆಯಲ್ಲಿ ಏಕೆ ಅಧಿಕಾರವಿಲ್ಲ? ಎಂಬ ಶಂಕೆಗೆ ಮುಂದಿನ ಸೂತ್ರ ಸಮಾಧಾನ ನೀಡಿದೆ–

**"ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್"[1]**

ಈ ಸೂತ್ರದ ಅರ್ಥ ಹೀಗಿದೆ. ಇದೇ ಉಪನಿಷತ್ತಿನಲ್ಲಿ ಈ ಆಖ್ಯಾಯಿಕೆಯ ತರುವಾಯ "ಏತೇನ ವೈ ಚೈತ್ರರಥಂ ಕಾಪೇಯ ಅಯಾಜಯನ್ನಿತಿ" ಎಂಬಲ್ಲಿ "ಕಪಿಗೋತ್ರದ ಶೌನಕನು ಚೈತ್ರ ರಥನೆಂಬ ರಾಜನಿಂದ ಯಾಗವನ್ನು ಮಾಡಿಸಿದನು"– ಎಂದಿದೆ. ಆದ್ದರಿಂದ ಅಲ್ಲಿ ಬರುವ ಚೈತ್ರ ರಥನು ಕ್ಷತ್ರಿಯನಾದ್ದರಿಂದ ಅದೇ ಪ್ರಕರಣದಲ್ಲಿ ಉಕ್ತನಾಗಿರುವ ಜಾನಶ್ರುತಿಯೂ ಕ್ಷತ್ರಿಯನೇ. ಅಂಥವನನ್ನು ಗುರುವು ಶೂದ್ರ ಎಂದಿರುವುದರಿಂದ ಅದು "ಯೋಗಾರ್ಥ"ವೇ ಹೊರತು ಜಾತಿಶೂದ್ರ ಸೂಚಕವಾದ ರೂಢಿಯ ಅರ್ಥವಲ್ಲ; ಎಂದಮೇಲೆ ಜಾತಿಶೂದ್ರನಿಗೆ ವೇದಾಧಿಕಾರವಿಲ್ಲ ; ಎಂಬುದು ಸಿದ್ಧವಾಯಿತು.

ಇನ್ನು ಶೂದ್ರನಿಗೆ ವೇದಾಧಿಕಾರವಿಲ್ಲ; ಎಂಬುದು ಸಾಮಾನ್ಯ (General) ನಿಯಮ. "ನಿಷಾದಸ್ಥಪತಿಂ ಯಾಜಯೇತ್" (ಬೇಡರ ಒಡೆಯನಿಂದ ಯಾಗ ಮಾಡಿಸಬೇಕು.) ಎಂಬುದು ವಿಶೇಷ(Exception) ನಿಯಮ. 'ವಿಶೇಷ ನಿಯಮವು ಸಾಮಾನ್ಯವನ್ನು ಬಾಧಿಸುತ್ತದೆ.' ಎಂಬ ಉಕ್ತಿಯಂತೆ ನಿಷಾದನು ಶೂದ್ರನಾದರೂ ಅವನಿಗೆ ಯಾಗಮಾಡುವಷ್ಟು ಮಾತ್ರ ಅಧಿಕಾರವುಂಟು."– ಎಂಬುದು ಮೇಲಿನ ವಿಶೇಷವಿಧಿಯಿಂದ ಸಿದ್ಧವಾಗುತ್ತದೆ. ಅದರಂತೆ ಜಾನಶ್ರುತಿಯನ್ನು 'ಶೂದ್ರ' ನೆಂದು ಕರೆದಿರುವುದರಿಂದ ಶೂದ್ರನಿಗೂ ವೇದಾಧಿಕಾರ ಬರಬಹುದಲ್ಲವೆ ? ಎಂಬ ಸಂಶಯ ನಿವಾರಣೆಗೆ ಮುಂದಿನ ಸೂತ್ರ ಉತ್ತರಿಸಿದೆ–

---

[1] ಬ್ರಂ.ಸೂ.೧.೩.೯.೩೫

"ಸಂಸ್ಕಾರಪರಾಮರ್ಶಾತ್ತದಭಾವಾಭಿಲಾಪಾಚ್ಚ"[1]

ಎಂದರೆ ಬ್ರಹ್ಮವಿದ್ಯೆಯನ್ನು ಉಪದೇಶಿಸುವ-ಪ್ರಕರಣದಲ್ಲಿ ಉಪನಯನಸಂಸ್ಕಾರ ಪಡೆದವನಿಗೆ ಮಾತ್ರ ಬ್ರಹ್ಮೋಪದೇಶಮಾಡಬೇಕೆಂದು ವಿಧಿಸಿದೆ. ಉಪನಯನವು ದ್ವಿಜ (ಬ್ರಾಹ್ಮಣ-ಕ್ಷತ್ರಿಯ-ವೈಶ್ಯ) ರಿಗೆ ಮಾತ್ರ ಮೀಸಲು. ಶೂದ್ರನಿಗೆ ಉಪನಯನವನ್ನು ಹೇಳಿಲ್ಲ. ಆದ್ದರಿಂದ ಅವನಿಗೆ ಬ್ರಹ್ಮ ವಿದ್ಯಾಧಿಕಾರವಿಲ್ಲ. ಅಲ್ಲದೆ ಶ್ರುತಿಯಲ್ಲಿ ಶೂದ್ರನಲ್ಲಿ ಪ್ರಬಲವಾದ ಪ್ರಮಾಣವನ್ನು ಕಂಡುಕೊಂಡ ಜ್ಞಾನಿಗಳು ಉಪನಯನವನ್ನು ಮಾಡಿರುವರು.

"ತದಭಾವನಿರ್ಧಾರಣೇ ಪ್ರವೃತ್ತೇಃ"[2]

ಎಂಬ ಸೂತ್ರವು ಈ ಅಂಶವನ್ನು ಪ್ರಸ್ತಾಪಿಸಿದೆ. ಎಂದರೆ ಇದೇ ಛಾಂದೋಗ್ಯದ ನಾಲ್ಕನೇ ಅಧ್ಯಾಯದ ನಾಲ್ಕನೇ ಖಂಡದ ಸತ್ಯಕಾಮಜಾಬಾಲನ ಆಖ್ಯಾಯಿಕೆಯಿದಕ್ಕೆ ಪ್ರಮಾಣ ಅದಾಗಿ :-

ಪರಿಚಾರಿಕೆಯ ಮಗನೂ, ಅವಿಜ್ಞಾತಗೋತ್ರನೂ ಆದ ಸತ್ಯಕಾಮಜಾಬಾಲನು ಬ್ರಹ್ಮೋಪದೇಶ ಪಡೆಯಲು ಗುರು ಗೌತಮನಲ್ಲಿಗೆ ಬಂದಾಗ ಗುರು– 'ನಿನ್ನ ಗೋತ್ರವು ಯಾವುದು?' ಎಂದು ಪ್ರಶ್ನಿಸಿದ. ಅವನು ಆ ಬಗ್ಗೆ ತಾಯಿಯನ್ನು ಕೇಳಿದಾಗ ಅವಳು "ಅಪ್ಪ, ನಿನ್ನ ಗೋತ್ರವನ್ನು ನಾನು ಅರಿಯೆನು. ಏಕೆಂದರೆ ಪರಿಚಾರಿಕೆಯಾದ ನಾನು ಯೌವನದಲ್ಲಿ ಅನೇಕ ಕಡೆ ಸೇವಾವೃತ್ತಿ ಯಲ್ಲಿರುವಾಗ ನಿನ್ನನ್ನು ಪಡೆದೆ. ಆದ್ದರಿಂದ ನಿನ್ನ ಗೋತ್ರವು ಯಾವುದೆಂದು ನನಗೆ ತಿಳಿಯದು. ನನ್ನ ಹೆಸರು "ಜಬಲೆ" ಆದ್ದರಿಂದ ನೀನು "ಜಾಬಾಲ"ನೆನಿಸುವೆ. ಇದನ್ನೇ ನಿನ್ನ ಗುರುವಿಗೆ ಹೇಳು" ಎಂದಳು. ಗುರು ಅವನ ಉತ್ತರವನ್ನು ಕೇಳಿ ಆನಂದಿಸಿದ. ಅವನು ಹೀಗೆಂದನು– "ಇಂಥ ರಹಸ್ಯ ವಿಷಯವನ್ನು ಬ್ರಾಹ್ಮಣನಲ್ಲದವನು ಹೇಳಲಾರ. ಆದ್ದರಿಂದ ನೀನು ಬ್ರಹ್ಮಜನ್ಯನೇ ಸರಿ. ನೀನು ಸಮಿತ್ತುಗಳನ್ನು ತಾ. ನಿನಗೆ ಉಪನಯನವನ್ನು ಮಾಡುವೆನು. ನೀನು ಸತ್ಯವನ್ನು ಬಿಡಲಿಲ್ಲವಾದ್ದ ರಿಂದ ನೀನು "ಸತ್ಯಕಾಮಜಾಬಾಲನೆನಿಸುವೆ!" ಎಂದ.

ಹೀಗೆ ಬ್ರಾಹ್ಮಣನೇ ಎಂದು ನಿರ್ಧರಿಸುವುದಕ್ಕೆ ಪ್ರಬಲವಾದ "ಸತ್ಯಸಂಧತ್ವ" ದಂತಹ ಪ್ರಮಾಣವಿಲ್ಲದಾಗ ಶೂದ್ರನಿಗೆ ಬ್ರಹ್ಮವಿದ್ಯೆಯನ್ನು ಖಂಡಿತ ಹೇಳಬಾರದು. ಬ್ರಹ್ಮವಿದ್ಯೆಯನ್ನು ಹೇಳಬಾರದಷ್ಟೇ ಅಲ್ಲ. "ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ"[3] ಶೂದ್ರನ ಹತ್ತಿರ ವೇದಾಧ್ಯಯನ ಮಾಡಬಾರದು. ಅಕಸ್ಮಾತ್ ಶೂದ್ರನು ವೇದವನ್ನು ಕೇಳಿದರೆ ಅವನ ಕಿವಿಗೆ ಸೀಸವನ್ನು ಕಾಯಿಸಿ ಸುರಿಯಬೇಕು. ಅವನು ವೇದವನ್ನು ಬಾಯಲ್ಲಿ ಉಚ್ಚರಿಸಿದರೆ ಅವನ ನಾಲಗೆ ಯನ್ನು ಕತ್ತರಿಸಬೇಕು. ವೇದವನ್ನು ಅವನು ನೆನಪಿನಲ್ಲಿಟ್ಟುಕೊಂಡಲ್ಲಿ ಅವನ ಶರೀರವನ್ನೇ ಕತ್ತರಿಸಿ ಹಾಕಬೇಕು. ಮುಂತಾದ ಕ್ರೂರಶಿಕ್ಷೆಗಳನ್ನು ಸ್ಮೃತಿಗಳು ವಿಧಿಸಿವೆ.

ಹೀಗೆ ಬಾದರಾಯಣರು ತಮ್ಮ ಬ್ರಹ್ಮಮೀಮಾಂಸೆಯಲ್ಲಿ ಇಷ್ಟು ಆಳವಾಗಿ ವಿಚಾರಮಾಡಿ ದ್ದರೂ ಸಹ ಅವರು ಅಲ್ಲಿ ಶೂದ್ರನೆಂದರೆ ಯಾರು ಎಂದು ನಿರ್ಧರಿಸಿರುವರೆಂಬುದನ್ನು ಬ್ರಹ್ಮಸೂತ್ರ ಗಳಿಗೆ ಭಾಷ್ಯಗಳನ್ನು ಬರೆದಿರುವ ಆಚಾರ್ಯರಾರೂ ಸ್ಪಷ್ಟಪಡಿಸಿಲ್ಲ. ಮೇಲಾಗಿ ಈ ಅಧಿಕರಣದ ಹಿಂದಿನ "ಪ್ರಮಿತಾಧಿಕರಣ"ದಲ್ಲಿ ಬಾದರಾಯಣರು "ಹೃದ್ಯಪೇಕ್ಷಯಾತು ಮನುಷ್ಯಾಧಿಕಾರ ತ್ವಾತ್" (ಬ್ರಂ:ಸೂ.೧.೩.೭.೨೫) ಎಂಬ ಸೂತ್ರದಲ್ಲಿ ವೇದಾಧಿಕಾರವು ಸಮಸ್ತ ಮಾನವರಿಗೂ ಉಂಟು ಎಂದು ಸಾಧಿಸಿದ್ದಾರೆ. ಏಕೆಂದರೆ ಮಾನವರೆಲ್ಲರಿಗೂ ಹಿತವನ್ನು ಬಯಸುವುದೇ ಪರ

---

[1] ಬ್ರಂ.ಸೂ.೧.೩.೯.೩೬ [2] ಬ್ರ.ಸೂ.೧.೩.೯.೩೭ [3] ಬ್ರ.ಸೂ.೧.೩.೯.೩೮.೩

ಮಾತ್ರನ ಉದ್ದೇಶ. ಅರ್ಥೀ– ಸಮರ್ಥೋ– ವಿದ್ವಾನ್ ಎಂಬ ಅರ್ಹತೆಯು ಮಾನವರಿಗಲ್ಲದೆ ತಿರ್ಯಕ್‌ಜಂತುಗಳಿಗಿರುತ್ತದೆಯೆ ? ಅಲ್ಲದೆ ಅಂಗುಷ್ಠಪರಿಮಾಣದ ಹೃದಯವು ಮಾನವರಿಗೆ ಮಾತ್ರವೇ ಇರುವುದು. ಉಪಾಸನಾಶಾಸ್ತ್ರವಿಧಿಯನ್ನು ಅಭ್ಯಾಸಮಾಡಲು ಮಾನವರೇ ಸಮರ್ಥರು. ಆದುದರಿಂದ ಬ್ರಹ್ಮಶಾಸ್ತ್ರವನ್ನು ಅಭ್ಯಾಸಮಾಡುವುದಕ್ಕೆ ಮಾನವರೆಲ್ಲರೂ ಅರ್ಹರು ; ಎಂದು ತೀರ್ಮಾನಿಸಲಾಗಿದೆ. ಅಪಶೂದ್ರಾಧಿಕರಣಕ್ಕೆ ಬರೆಯುವ ಭಾಷ್ಯವು ಈ ಅಭಿಪ್ರಾಯಕ್ಕೆ ಅನುಗುಣವಾಗಿರುವುದು ಅಗತ್ಯ ತಾನೆ ! ಈ ದೃಷ್ಟಿಯನ್ನು ಗಮನಿಸಿ ಇಲ್ಲಿ ಕೊಂಚ ವಿಚಾರ ಮಾಡಿದೆ.

ಪ್ರಸ್ತುತ ಮೇಲಿನ ಸೂತ್ರಾರ್ಥಗಳನ್ನು ವಿಚಾರಮಾಡೋಣ ! ಮೇಲೆ ಹೇಳಿದ ಸತ್ಯಕಾಮ ಜಾಬಾಲನ ಹಾಗೆಯೇ, ಸ್ವಯಂ ಬಾದರಾಯಣನೂ ಸಹ ಬ್ರಾಹ್ಮಣಿಯಲ್ಲಿ ಜನಿಸಿದವನಲ್ಲ. ಅವನು ಯೋಜನಗಂಧಿ ಎಂಬ ಬೆಸ್ತಕನ್ಯೆಯ ಮಗ.[1] ಸತ್ಯವತಿ ಎಂಬುದು ಅವಳಿಗೆ ತರುವಾಯ ಬಂದ ಹೆಸರು. ಪರಾಶರ ಋಷಿಯಿಂದ ಅವಳು ಇನ್ನೂ ಕನ್ಯಕಾವಸ್ಥೆಯಲ್ಲಿರುವಾಗಲೇ ಅಕಾಲವೆನಿಸಿದ ಪ್ರಭಾತಸಮಯದಲ್ಲಿ ನದಿಯ ನಡುಗಡ್ಡೆಯ ಎಲಚಿ (ಬದರಿ) ಗಿಡದಡಿ ರಮಿಸಲೆಳಸಿದ ಆ ಋಷಿಯಿಂದ ಹುಟ್ಟಿದವನು. ಬದರಿಗಿಡದಡಿಯಲ್ಲಿ ಜನಿಸಿದ್ದರಿಂದ ಅವನು 'ಬಾದರಾಯಣ'ನಾದ; ಪರಾಶರನಿಂದ ಹುಟ್ಟಿದವನಾದ್ದರಿಂದ 'ಪಾರಾಶರ್ಯ'. ಈ ಸತ್ಯವತೀಸುತನು ತಂದೆಯಿಂದ ಉಪನಯನಹೊಂದಿ ಬ್ರಹ್ಮಜ್ಞನಾದ. ಅಂಥ ಬಾದರಾಯಣನಿಗೆ ದಾಸಿಯಲ್ಲಿ ಹುಟ್ಟಿದವನಾದರೂ ವಿದುರ ಉಪನಯನವಿಲ್ಲದಿದ್ದರೂ ಬ್ರಹ್ಮಜ್ಞನೆಂಬುದು ಸುಪ್ರಸಿದ್ಧ. ಆದ್ದರಿಂದಲೇ ಬಾದರಾಯಣನು ಪ್ರಮಿತಾಧಿಕರಣದಲ್ಲಿ– 'ಈ ಶಾಸ್ತ್ರಕ್ಕೆ ಮಾನವರೆಲ್ಲರೂ ಅಧಿಕಾರಿಗಳು.' ಎಂದದ್ದು. ಇದೇ ವಿಷಯವನ್ನು ಯಜುರ್ವೇದವು ಹೀಗೆ ಸಮರ್ಥಿಸಿದೆ–

"ಪರಮೇಶ್ವರನು ಎಲ್ಲ ಮಾನವರೂ ವೇದಗಳನ್ನು ಅಧ್ಯಯನಮಾಡಬೇಕೆಂದೂ ಎಲ್ಲರಿಗೂ ಅವುಗಳನ್ನು ಅಭ್ಯಾಸಮಾಡಿಸಬೇಕೆಂದೂ ಅಪ್ಪಣೆ ಮಾಡಿದ್ದಾನೆ– "ಹೇಗೆ ನಮ್ಮೆದುರಿಗಿರುವ ಕಲ್ಯಾಣಸಾಧಕವಾದ ಈ ಋಗಾದಿವೇದವಾಣಿಯನ್ನು ಎಲ್ಲ ಮಾನವರಿಗೂ ಕೊಟ್ಟಿದ್ದಾನೆ. ಎಲ್ಲ ವಿದ್ವಾಂಸರೂ ಅವುಗಳನ್ನು ಎಲ್ಲರಿಗೂ ಬೋಧಿಸಬೇಕು. ಯಾರುಯಾರಿಗೆ ವೇದಗಳನ್ನು ಅಭ್ಯಾಸಮಾಡುವ ಅಧಿಕಾರವಿದೆಯೆಂದರೆ– ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯ, ಶೂದ್ರ ಮತ್ತು ಅತಿ ಶೂದ್ರರೆನಿಸಿದ ಅಂತ್ಯಜನಿಗೂ ವೇದಗಳನ್ನು ಓದುವ ಅಧಿಕಾರವುಂಟು. ಇನ್ನು 'ಸ್ವಾಯಚಾರಣಾಯ' ಆತ್ಮೀಯನೆನಿಸಿದ ಭೃತ್ಯನಿಗೂ ವೇದಗಳನ್ನು ಹೇಳಬೇಕು. ನಾನು ಹೇಗೆ ಮಾನವರ ಏಳ್ಗೆಗಾಗಿ ಪಕ್ಷಪಾತವಿಲ್ಲದೆ ವೇದವಾಣಿಯನ್ನು ನೀಡಿದೆನೋ ಅದರಂತೆ ವಿದ್ವಾಂಸರಾದ ನೀವೂ ಸಹ ಎಲ್ಲರಿಗೂ ಅವುಗಳನ್ನು ಉಪದೇಶಿಸಬೇಕು. ನಿಮಗೆಲ್ಲ ಮಂಗಳವಾಗಲಿ. ಇದೇ ನನ್ನ ಆಶೀರ್ವಾದ."[2]

[ಸ್ವಾಮಿ ದಯಾನಂದ ಸರಸ್ವತಿಯವರ ಋಗ್ವೇದಾದಿ ಭಾಷ್ಯಭೂಮಿಕೆಯಿಂದ ಉದ್ಧೃತ]

---

[1] ವ್ಯಾಸ ಬೋಯತಿಯ ಮಗ ; ಮಾರ್ಕಂಡೇಯ ಮಾತಂಗಿಯ ಮಗ ; ಮಂಡೋದರಿ ಕಪ್ಪೆಯ ಮಗಳು ; ಸಾಕ್ಷಾತ್ ಅಗಸ್ತ್ಯ ಕಬ್ಬಿಲ ; ದೂರ್ವಾಸ ಮುಚ್ಚಿಗ ; ಕಶ್ಯಪ ಕಮ್ಮಾರ ; ಕೌಂಡಿನ್ಯನೆಂಬ ಋಷಿ ಮೂರು ಭುವನವರಿಯೆ ; ನಾವಿಂದಕಾಣೆಭೋ– "ಶ್ವಪಚೋಪಿಯಾದರೇನು ? ಶಿವಭಕ್ತನೆ ಕುಲಜನು." ಎಂಬ ಬಸವಣ್ಣನವರ ವಚನವನ್ನು ಇಲ್ಲಿ ನೆನೆಯಬಹುದು.

[2] ಯಥೇಮಾಂ ವಾಚಂ ಕಲ್ಯಾಣೀಮಾವದಾನಿ ಜನೇಭ್ಯಃ ।
ಬ್ರಹ್ಮರಾಜನ್ಯಾಭ್ಯಾಗ್‌ಂ ಶೂದ್ರಾಯ ಚಾರ್ಯಾಯ ಚ ಸ್ವಾಯಚಾರಣಾಯ ।
ಪ್ರಿಯೋ ದೇವಾನಾಂ ದಕ್ಷಿಣಾಯೈ ಧಾತುರಿಹ ಭೂಯಾಸಮಯಂ ಮೇ
ಕಾಮಃ ಸಮೃದ್ಧ್ಯತಾಮುಪಮಾದೋ ನಮತು" (ಯಜು.೨೬.೨)

ಇದೇ ಅಭಿಪ್ರಾಯವು ಉವಟಾರ್ಯರ “ಮಂತ್ರಭಾಷ್ಯ” ಮತ್ತು ಮಹೀಧರನ “ವೇದಪ್ರದೀಪ” ಭಾಷ್ಯದಲ್ಲಿಯೂ ಸಹ ಸಮರ್ಥಿಸಲ್ಪಟ್ಟಿದೆ.[1]

ಮೇಲಿನ ವೇದವಾಣಿಯಿಂದ ಎಲ್ಲ ಮಾನವರಿಗೂ ವೇದಾಧಿಕಾರವುಂಟು ; ಎಂಬುದು ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಜಾತಿಶೂದ್ರನಿಗೆ ವೇದಾಧಿಕಾರವನ್ನು ನಿರಾಕರಿಸಿದಲ್ಲಿ ದೇವತೆಗಳು ಕೂಡ ಸಿಟ್ಟಾಗುವರು ; ಎಂದು ಐತರೇಯ ಬ್ರಾಹ್ಮಣದ ಒಂದು ಆಖ್ಯಾಯಿಕೆಯಿಂದ ವೇದ್ಯವಾಗುತ್ತದೆ. ಅದರ ಆಶಯವಿದು–

“ಸರಸ್ವತೀತೀರದಲ್ಲಿ ಋಷಿಗಳು ಒಂದು ಯಜ್ಞವನ್ನು ಪ್ರಾರಂಭಿಸಿದ್ದರು. ಕವಷಐಲೂಷ ಎಂಬ ಒಬ್ಬ ಬಾಲಕನು ಅಲ್ಲಿಗೆ ಬಂದು ತನ್ನನ್ನು ಯಾಗಕರ್ಮದಲ್ಲಿ ಸೇರಿಸಿಕೊಳ್ಳಲು ಬೇಡಿದನು. ಆಗ ಋಷಿಗಳು ‘ನೀನು ಶೂದ್ರ ! ದೂರ ಸರಿ !’ ಎಂದು ಗದರಿಸಿ ಅವನನ್ನು ಅಲ್ಲಿಂದ ಹೊರಕ್ಕೆ ತಳ್ಳಿದರು. ದುಃಖಿತನಾದ ಐಲೂಷ ದೂರದ ಒಂದು ಹೊಳೆಯ ದಡದಲ್ಲಿ ಹೋಗಿ ಕುಳಿತ. ಋಷಿಗಳು ಯಾಗದಲ್ಲಿ ಕೊಟ್ಟ ಹವಿಸ್ಸನ್ನು ಒಬ್ಬ ದೇವತೆಯೂ ಬಂದು ತೆಗೆದುಕೊಳ್ಳಲಿಲ್ಲ. ಋಷಿಗಳಿಗೆ ಆಶ್ಚರ್ಯವಾಯಿತು. ವಿಚಾರಿಸಿದಾಗ ಅವರಿಗೆ ತಮ್ಮ ತಪ್ಪು ತಿಳಿಯಿತು. ಕೂಡಲೇ ಅವರು ಪಶ್ಚಾತ್ತಾಪಪಟ್ಟು, ಐಲೂಷನನ್ನು ಹುಡುಕಿ, ಅವನನ್ನು ಪ್ರಸನ್ನಗೊಳಿಸಿ ಯಾಗಶಾಲೆಗೆ ಕರೆತಂದರು. ಆಗ ದೇವತೆಗಳು ಹವಿಸ್ಸನ್ನು ಸ್ವೀಕರಿಸಿದರು.”[2]

ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಗೆ ಅಧಿಕಾರಿ ಯಾರು ? ಎಂಬ ಪ್ರಶ್ನೆಗೆ ಭಗವಂತನು–

“ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥
ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ (ಭ.ಗೀ.೧೮.೬೭.೬೮)

ಬ್ರಹ್ಮವಿದ್ಯೆಗೆ ಭಗವಂತನಿಗೆ ಅಭಿಮುಖವಾದ ಭಕ್ತಿಯೊಂದೇ ಬೇಕು. ಭಗವಂತನಿಗಾಗಿ ಪರಿತಪಿಸದವನಿಗೆ ಅವನಲ್ಲಿ ಭಕ್ತಿಯಿಲ್ಲದವನಿಗೆ ಭಗವಂತನ ವಿಷಯವನ್ನು ಕೇಳಬಯಸದವನಿಗೆ ಮತ್ತು ಭಗವಂತನನ್ನು ವಿರೋಧಿಸುವವನಿಗೆ ಖಂಡಿತ ಬ್ರಹ್ಮವಿದ್ಯೆಯನ್ನು ಹೇಳಬಾರದು. ಹಾಗೆ ಯಾವನು ಈ ನನ್ನ ಅತ್ಯಂತ ರಹಸ್ಯವಾದ ಬ್ರಹ್ಮವಿದ್ಯೆಯನ್ನು ನನ್ನ ಭಕ್ತರಿಗೆ ಮಾತ್ರ ಉಪದೇಶಿಸುವನೋ ಅವನು ನನ್ನಲ್ಲಿ ಪರಮಭಕ್ತಿಯನ್ನೆಸಗಿ ನನ್ನನ್ನೇ ಹೊಂದುವನು.” ಎಂದು ಸ್ಪಷ್ಟಪಡಿಸಿದ್ದಾನೆ. ಇಲ್ಲಿ ಭಗವಂತನು ಶೂದ್ರನು ವೇದಕ್ಕೆ ಅಧಿಕಾರಿಯಲ್ಲವೆಂದಾಗಲಿ ಅಥವಾ ದ್ವಿಜರು ಮಾತ್ರವೇ ಅಧಿಕಾರಿಗಳೆಂದಾಗಲಿ ಹೇಳಿರುವುದಿಲ್ಲ. ಮೇಲಾಗಿ ಅಲ್ಲಿ ಚಾತುರ್ವರ್ಣ್ಯವ್ಯವಸ್ಥೆಯನ್ನು ಅವರವರ ಗುಣಕರ್ಮಗಳನ್ನು ಅವಲಂಬಿಸಿಯೇ ನಾನು ವ್ಯವಸ್ಥೆಮಾಡಿರುವೆನೆಂದು ಘೋಷಿಸಲಾಗಿದೆ.[3]

ಪ್ರಾಜ್ಞನಾದ ಮನುವೂ ಕೂಡ ಇದೇ ಅಭಿಪ್ರಾಯವನ್ನು ಸಮರ್ಥಿಸಿದ್ದಾನೆ– “ಶೂದ್ರನು ಪೂರ್ಣವಿದ್ಯೆ ಸೌಶೀಲ್ಯ ಮುಂತಾದ ಉತ್ತಮಗುಣಶೀಲಗಳುಳ್ಳವನಾದರೆ ಅವನು ಬ್ರಾಹ್ಮಣಭಾವ

---

[1] ವಾಜಸನೇಯ-ಮಾಧ್ಯಂದಿನ-ಶುಕ್ಲಯಜುರ್ವೇದಭಾಷ್ಯ – ಪು.೮೭೩(ನಿರ್ಣಯಸಾಗರ ಪ್ರೆಸ್ ಮುಂಬಯಿ)

[2] ಕರ್ಣಾಟಕ ಸಂಸ್ಕೃತಿಃ ದೇವುಡು ನರಸಿಂಹಶಾಸ್ತ್ರಿ (ಪು.೨೦೩)

[3] ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ (ಭ.ಗೀ. ೪.೧೩)

ವನ್ನು ಹೊಂದುತ್ತಾನೆ ಅದರಂತೆ ಬ್ರಾಹ್ಮಣನಾದರೂ ಸಹ ದುರ್ನಡತೆ, ಅಧರ್ಮಾಚಾರ, ಮೂಢತ್ವ ಮೂರ್ಖತನ, ಪರಾಧೀನತೆ ಮತ್ತು ಪರಸೇವೆ ಮುಂತಾದ ಶೂದ್ರಗುಣಗಳಿಂದ ಕೂಡಿದವನಾದರೆ ಶೂದ್ರನೇ ಆಗುತ್ತಾನೆ. [1]

ಆಪ ಸ್ತಂಬ ಧರ್ಮಸೂತ್ರದಲ್ಲಿಯೂ ಸಹ ಇದೇ ಅಭಿಪ್ರಾಯವು ಸಮರ್ಥಿಸಲ್ಪಟ್ಟಿದೆ-

ಸತ್ಯಧರ್ಮಾಚರಣದಿಂದಲೇ ಶೂದ್ರನೂ ವೈಶ್ಯನೂ ಕ್ಷತ್ರಿಯನೂ ಕಡೆಗೆ.ಬ್ರಾಹ್ಮಣನೇ ಆಗುತ್ತಾನೆ. ಅದರಂತೆ ಬ್ರಾಹ್ಮಣನೂ ಸಹ ಅಧರ್ಮಾಚರಣೆಯಿಂದ ತನ್ನ ವರ್ಣವನ್ನು ಬದಲಾಯಿಸಿಕೊಂಡು ಕೀಳು ವರ್ಣವನ್ನು ಹೊಂದುತ್ತಾನೆ [2]

ಎಂದಮೇಲೆ 'ಶೂದ್ರ' ಎಂಬ ಪದಪ್ರವೃತ್ತಿಗೆ ನಿಮಿತ್ತವು ಯಾವುದು ಎಂಬುದು ಸ್ಪಷ್ಟವಾಗಿಯೇ ಇದೆ; ಎಂದರೆ ಒಟ್ಟಿನಲ್ಲಿ- ಶೂದ್ರನೆಂದರೆ- ಯಾವನು ಪ್ರಜ್ಞೆಯಿಲ್ಲದವನೂ, ಮೂರ್ಖನೂ, ದೌರ್ಜನ್ಯಾದಿಗುಣವುಳ್ಳವನೂ, ವಿಷಯಲಂಪಟನೂ ಆಗಿರುವನಲ್ಲದೆ ಯಾವನಿಗೆ ಶುದ್ಧವಾಗಿ ಓದುವುದಕ್ಕಾಗಲಿ, ಓದಿರುವುದನ್ನು ನೆನಪಿಡುವುದಕ್ಕಾಗಲಿ, ಅದನ್ನು ವಿಚಾರಮಾಡುವ ಸಾಮರ್ಥ್ಯವಾಗಲಿ ಇರುವುದಿಲ್ಲವೋ ಅವನೇ ಶೂದ್ರ. ಅಂಥವನಿಗೆ ವೇದಾಧ್ಯಯನ ಮಾಡಿಸುವುದು ನಿಷ್ಫಲ ! ನಿಷ್ಫಲವಷ್ಟೇ ಅಲ್ಲ ! ಹಾಗೆ ವೇದವನ್ನು ಅಶುದ್ಧವಾಗಿ ಅರ್ಥಜ್ಞಾನವಿಲ್ಲದೆ ಉಚ್ಚರಿಸಿದರೆ ಅದು ಅನರ್ಥಕ್ಕೆ ಕೊಟ್ಟ ಕರೆ ! ಏಕೆಂದರೆ ಪತಂಜಲಿಯು "ಒಂದೇ ಒಂದು ಶಬ್ದವಾದರೂ ಸಾಕು ; ಅದನ್ನು ಸ್ಪಷ್ಟವಾಗಿ ಉಚ್ಚರಿಸಿ, ಅದರ ಅರ್ಥವನ್ನು ಸರಿಯಾಗಿ ತಿಳಿದ ಪಕ್ಷದಲ್ಲಿ ಅದೇ ಇಷ್ಟಾರ್ಥವನ್ನು ಈಡೇರಿಸುತ್ತದೆ,"[3] ಎಂದಿದ್ದಾನೆ. ಹಾಗಿಲ್ಲದಿದ್ದಲ್ಲಿ ಮಹದನರ್ಥವೇ ಸಂಭವಿಸುತ್ತದೆ ಎಂದು ಪಾಣಿನಿಯ ಶಿಕ್ಷೆ ಸೂಚಿಸಿದೆ. ಸ್ವರದಲ್ಲಿ ಅಥವಾ ವರ್ಣೋಚ್ಚಾರದಲ್ಲಿ ಅಶುದ್ಧವಾಗಿ ವೇದವನ್ನು ಉಚ್ಚರಿಸಿದ ಪಕ್ಷದಲ್ಲಿ ಅದು ದುಷ್ಟವೆನಿಸುತ್ತದೆ. ವಾಕ್ ವಜ್ರವೆನಿಸಿದ ಅದು ಕಡೆಗೆ ಯಜಮಾನನನ್ನೇ ಕೊಲ್ಲುತ್ತದೆ ಎಂದು ಹೀಗೆ ಉದಾಹರಿಸಲಾಗಿದೆ- ಹಿಂದೆ ವೃತ್ರಾಸುರನ ತಂದೆಯು ಇಂದ್ರನನ್ನು ಕೊಲ್ಲುವ ಮಗನು ಹುಟ್ಟಲಿ ಎಂಬ ಉದ್ದೇಶದಿಂದ ಒಂದು ಯಾಗವನ್ನು ಮಾಡಿದನು. ಅಲ್ಲಿ "ಇಂದ್ರ ಶತ್ರುಃ" ಎಂಬ ಪದವನ್ನು ಅಪಸ್ವರವಾಗಿ ಉಚ್ಚರಿಸಿದ್ದರಿಂದ ಇಂದ್ರನನ್ನು ಕೊಲ್ಲುವ ಮಗನು ಹುಟ್ಟುವುದಕ್ಕೆ ಬದ

---

[1] ಶೂದ್ರೋಽಪಿ ಬ್ರಾಹ್ಮತಾಮೇತಿ ಬ್ರಾಹ್ಮಕ್ಶ್ಚೈತಿ ಚ ಶೂದ್ರತಾಮ್ ।
ಕ್ಷತ್ರಿಯಾ ಜ್ಞಾತಮೇವಂ ತು ವಿದ್ಯಾದ್ವೈಶ್ಯಾಸ್ತಥೈವ ಚ ॥
(ಮನು.೧೦-೬೫)

[2] ಧರ್ಮಚರ್ಯಯಾ ಜಘನ್ಯೋ ವರ್ಣಃ ಪೂರ್ವಂ ಪೂರ್ವಂ
ವರ್ಣತಾಮಾಪದ್ಯತೇ ಜಾತಿಪರಿವೃತ್ತೌ ॥ ೧ ॥
ಅಧರ್ಮಚರ್ಯಯಾ ಪೂರ್ವೋ ವರ್ಣೋ ಜಘನ್ಯಂ
ಜಘನ್ಯಂ ವರ್ಣಮಾಪದ್ಯತೇ ಜಾತಿಪರಿವೃತ್ತೌ ॥ ೨ ॥
(ಆಪ.ಪ್ರ.೨.ಪಟಲ- ೫.೩೦.೧೧.ಸೂ.೧೦-೧೧)

[3] "ಏಕಃ ಶಬ್ದಃ ಸುಷ್ಠು ಪ್ರಯುಕ್ತಃ ಸಮ್ಯಕ್ ಜ್ಞಾತಃ ಸ್ವರ್ಗೇ ಲೋಕೇ ಕಾಮಧುಕ್ ಭವತಿ" (ಪತಾಂಜಲ ಮಹಾಭಾಷ್ಯ ೬.೧.೮.೧)

ಲಾಗಿ ಇಂದ್ರನಿಂದ ಕೊಲ್ಲಿಸಿಕೊಳ್ಳುವ ಮಗ (ವೃತ್ರಾಸುರ)ನು ಜನಿಸಿದ ; ಎಂದು.[1] ಪಾಣಿನಿಯ ಶಿಕ್ಷೆಯಲ್ಲಿ ಪಾಠಕಾಧಮನನ್ನು ಹೀಗೆ ಸೂಚಿಸಲಾಗಿದೆ–

ಗೀತೀ ಶೀಘ್ರೀ ಶಿರಃಕಂ ತಥಾಲಿಖಿತಪಾಠಕಃ ।
ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ॥
[ಪಾ. ಶಿ. ೩೨]

ಒಟ್ಟಿನಲ್ಲಿ– ಹಿಂದೆ ಹೇಳಿದಂತೆ ಪಾಠಕಾಧಮತ್ವಾದಿಲಕ್ಷಣಗಳಿಂದ ಕೂಡಿದ ಅಜ್ಞತ್ವ, ಮೂರ್ಖತ್ವ ಮುಂತಾದ ದುರ್ಲಕ್ಷಣಗಳುಳ್ಳವನೇ ಶೂದ್ರ. ಅವನೇ ಶಾಸ್ತ್ರದಲ್ಲಿ ವೇದಾಧ್ಯಯನಕ್ಕೆ ಅನಧಿಕಾರಿ ಎಂಬುದು ಸನಾತನವೈದಿಕಸಂಪ್ರದಾಯದ ಅಭಿಮತವೆಂದು ತಿಳಿಯಬೇಕು.[2]

"ಅಪಶೂದ್ರಾಧಿಕರಣವನ್ನು ಕುರಿತು" (ಕನ್ನಡ)

*

## ಬ್ರಹ್ಮವಿದ್ಯಾಧಿಕಾರನಿರ್ಣಯದಲ್ಲಿ ವೀರಶೈವವೈಶಿಷ್ಟ್ಯ

ಬ್ರಹ್ಮವಿದ್ಯಾಧಿಕಾರನಿರ್ಣಯದ ವಿಷಯದಲ್ಲಿ ಅಪಶೂದ್ರಾಧಿಕರಣಕ್ಕೆ ಭಾಷ್ಯಗಳನ್ನು ಬರೆದ ಶಂಕರ-ರಾಮಾನುಜರೇ ಮುಂತಾದ ಆಚಾರ್ಯರು ಜಾತಿಯಿಂದ ಶೂದ್ರರಾದವರಿಗೆ ಉಪನಯನಸಂಸ್ಕಾರವಿಲ್ಲದ್ದರಿಂದ "ಅವರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲ" ಎಂದು ತೀರ್ಮಾನಿಸಿದರು. ಅವರು ಜನ್ಮದಿಂದ ಜಾತಿಯನ್ನು ಒಪ್ಪುವರಾದ್ದರಿಂದ ಅವರು ಹೇಳಿದುದು ಒಂದು ದೃಷ್ಟಿಯಿಂದ ಉಚಿತವೇ ! ಪ್ರಾಕೃತವರ್ಣ ಮತ್ತು ಆಶ್ರಮಧರ್ಮಗಳನ್ನು ಒಪ್ಪುವ ಅವರು ದ್ವಿಜರಲ್ಲದವರಿಗೆ ಉಪನಯನ ಸಂಸ್ಕಾರ ಮಾಡುವುದನ್ನು ವಿರೋಧಿಸುತ್ತಾರೆ. ಆದರೆ ಅಪ್ರಾಕೃತವರ್ಣಾಶ್ರಮಗಳನ್ನು ಅನುಷ್ಠಾನ ಮಾಡುವವರೂ 'ಶಕ್ತಿಪಾತ' ನಿಮಿತ್ತದಿಂದ ಗುರುಕೃಪೆಯಿಂದ ದೊರೆತ ಶಿವದೀಕ್ಷೆಯನ್ನು ಪಡೆದವರೂ ಆದ ವೀರಶೈವರಿಗೆ ಇದು ರುಚಿಸುವುದಿಲ್ಲ. ಏಕೆಂದರೆ ನೀಲಕಂಠಶಿವಾಚಾರ್ಯರು ವೀರಶೈವ ಸ್ವರೂಪವನ್ನು ಕುರಿತು "ಯಾರು ಜಗತ್ತಿನ ಹಿತಚಿಂತನೆಯನ್ನು ಯಾವಾಗಲೂ ಮಾಡುತ್ತಿರುವರೋ ಅವರೇ ವೀರಶೈವರು[3] ಎಂದು ಹೇಳಿರುವುದರಿಂದ ಈ ಪಕ್ಷಪಾತವನ್ನು ಅವರು ಒಪ್ಪುವುದಿಲ್ಲ. ಈ ಪ್ರಕರಣದಲ್ಲಿ ಶ್ರೀ ಉಮಚಗಿ ಶಂಕರಶಾಸ್ತ್ರಿ ಎಂಬ ಮಹಾಶಯರು "ಅಪಶೂದ್ರಾಧಿಕರಣವನ್ನು ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ ಚೆನ್ನಾಗಿ ವಿವರಿಸಿ ತಮ್ಮ ಬ್ರಹ್ಮಸೂತ್ರವೃತ್ತಿಯಲ್ಲಿ ಹೀಗೆ ಹೇಳಿದ್ದಾರೆ–

---

[1] ದುಷ್ಟಃ ಶಬ್ದೋ ಮಂತ್ರತಃ ಸ್ವರತೋ ವರ್ಣತೋ ವಾ
ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।
ಸ ವಾಗ್ವಜ್ರೋ ಯಜಮಾನಂ ಹಿನಸ್ತಿ
ಯಥೇಂದ್ರಶತ್ರುಃ ಸ್ವರತೋಽಪರಾಧಾತ್ ॥
[ಪಾಣಿನಿ ಶಿಕ್ಷಾ. ೫೨]

[2] ಅಪಶೂದ್ರಾಧಿಕರಣವನ್ನು ಕುರಿತು– (ಕನ್ನಡಲೇಖನ)
ಪ್ರಬುದ್ಧಕರ್ಣಾಟಕ ಸಂ. ೪೯, ಸಂ ೩.೧೯೬೩, ಪ್ಲವಂಗ ಸಂ, ಆಶ್ವಯುಜ ೧೯೬೭.
ಅಪಶೂದ್ರಾಧಿಕರಣಮಧಿಕೃತ್ಯ–
(ಸಂಸ್ಕೃತ ಲೇಖನ) – ಶ್ರೀಮನ್ಮಹಾರಾಜ ಸಂಸ್ಕೃತ ಕಾಲೇಜಿನ ವಾರ್ಷಿಕ ಸಂಚಿಕೆ– ಚಂದ್ರಿಕಾ ೧೯೬೭ ಪುಟ. ೧೪.

[3] ಕ್ರಿಯಾಸಾರ ಪು. ೧೫೬

"ಭೃಗುಸಂಹಿತೆಯಲ್ಲಿ–

'ಯಾವಾಗಲೂ ಶಿವಭಕ್ತರ ಸಹವಾಸದಲ್ಲಿರುವ ಚಂಡಾಲನು ಅವನು ಜಾತಿತಃ ಚಂಡಾಲನಾದರೂ ಚಂಡಾಲನಲ್ಲ. ಶಿವಭಕ್ತರ ನೆರೆಯಲ್ಲಿರುವವನ ಶೂದ್ರತ್ವವು ಉಳಿಯುವುದಿಲ್ಲ. ಶಿವಸಂಸ್ಕಾರ ವನ್ನು ಪಡೆದವರಲ್ಲಿ ಜಾತಿಭೇದ ಮಾಡಬಾರದು. '[1] ಎಂದೂ,

ಗರುಡಪುರಾಣದಲ್ಲಿ–

' ಶಿವದೀಕ್ಷೆಯ ಪ್ರಭಾವದಿಂದ ಹಿಂದೆ ಯಾವುದೇ ಜಾತಿ-ಕುಲದವನಾಗಿದ್ದರೂ ಗುರು ಮುಖದಿಂದ ಶಿವದೀಕ್ಷೆಯನ್ನು ಪಡೆದ ಮೇಲೆ ಅವನಿಗೆ ಶ್ರೀ ರುದ್ರನ ನಮಕ-ಚಮಕ ಮತ್ತು ಪಂಚ ಬ್ರಹ್ಮಮಂತ್ರಾದಿಗಳಲ್ಲಿ ಅಧಿಕಾರ ಬರುತ್ತದೆ. '[2] ಎಂದೂ,

ಶಿವಪುರಾಣದಲ್ಲಿ–

'ಕೆಸರಿನಲ್ಲಿ ಕಮಲ, ಮರದಲ್ಲಿ ಬೆಂಕಿ, ಕಲ್ಲಿನಲ್ಲಿ ಚಿನ್ನ ಅಡಗಿರುವಂತೆ ಚಂಡಾಲರಲ್ಲಿಯೂ ಭಕ್ತರಿರುತ್ತಾರೆ. ಸ್ತ್ರೀ, ಪುರುಷ, ಷಂಡ, ಚಂಡಾಲ ಹಾಗೂ ದ್ವಿಜವಂಶದಲ್ಲಿ ಹುಟ್ಟಿದವನು ಇವ ರಾರಲ್ಲಿಯೂ ಜಾತಿಭೇದ ಮಾಡಬಾರದು. ಏಕೆಂದರೆ ಲಿಂಗಪೂಜೆ ಮಾಡುವುದರಿಂದ ಇವರೆಲ್ಲರೂ ರುದ್ರಗಣರೆನಿಸುತ್ತಾರೆ. 'ಶಿವದೀಕ್ಷೆಯಿಂದ ಪರಿಶುದ್ಧನಾದಮೇಲೆ ಹಿಂದಿನ ಜಾತಿಯನ್ನು ನೆನೆಯ ಬಾರದು. ವಿಧ್ಯುಕ್ತವಾಗಿ ಪ್ರತಿಷ್ಠೆ ಮಾಡಿದ ಶಿವಲಿಂಗದಲ್ಲಿ 'ಹಿಂದೆ ಇದು ಕಲ್ಲು' ಎಂಬ ಭಾವನೆ ಮೂಡುವುದೆ ?' ಎಂದೂ,[3]

ಲಿಂಗಪುರಾಣದಲ್ಲಿ–

'ಮರ, ಕಲ್ಲು, ಲೋಹ, ಮಣ್ಣು, ರತ್ನ ಮುಂತಾದುವುಗಳಲ್ಲಿ ನಿರ್ಮಿಸಿದ ಲಿಂಗವು ವಿಧ್ಯುಕ್ತವಾಗಿ ಪ್ರತಿಷ್ಠೆಯಾದ ಮೇಲೆ ಹೇಗೆ ಪೂಜಿಸಲ್ಪಡುತ್ತದೆಯೋ ಅದರಂತೆ ಚಂಡಾಲವಂಶಜ ನಾದರೂ ಭಕ್ತನಾದಮೇಲೆ ಹಿಂದಿನ ಜಾತಿದೋಷವನ್ನು ಎಣಿಸಬಾರದು.' [4] ಎಂದೂ

---

[1] "ಸದಾ ಸನ್ನಿಹಿತಶ್ಚೈವ ಚಂಡಾಲೋಽಪ್ಯೈವ ಸರ್ವದಾ ।
ಗತಂ ಶೂದ್ರಸ್ಯ ಶೂದ್ರತ್ವಮನ್ಯಥಾ ಬ್ರಾಹ್ಮಣಸ್ಯ ತು ॥
"ಶಿವ ಸಂಸ್ಕಾರ ಸಂಪನ್ನೇ ಜಾತಿಭೇದೋನವಿದ್ಯತೇ"

[2] "ನಮಕೇ ಚಮಕೇ ಪಂಚಬ್ರಹ್ಮಮಂತ್ರೇ ಚ ವೈದಿಕೇ ।
ತೇಷಾಮಪ್ಯಧಿಕಾರೋಽಸ್ತಿ ಶಿವದೀಕ್ಷಾ ಪ್ರಭಾವತಃ ॥

[3] ಯಥಾ ಪಂಕೇ ಸರೋಜಂ ಸ್ಯಾತ್ ಯಥಾ ಕಾಷ್ಠೇ ಹುತಾಶನಃ ।
ಯಥಾ ಸುವರ್ಣಂ ಪಾಷಾಣೇ ಭಕ್ತಶ್ಚಂಡಾಲವಂಶಜಃ ॥
ಸ್ತ್ರೀ ವಾಥ ಪುರುಷಷ್ಷಂಡಶ್ಚಂಡಾಲೋ ದ್ವಿಜವಂಶಜಃ ।
ನ ಜಾತಿಭೇದೋ ಲಿಂಗಾರ್ಚಾಸ್ಸರ್ವೇ ರುದ್ರಗಣಾಃ ಸ್ಮೃತಾಃ ॥
ಶಿವದೀಕ್ಷಾಭಿಜಾತಸ್ಯ ಪೂರ್ವಜಾತಿಂ ನ ಚಿಂತಯೇತ್ ।
ಸುಪ್ರತಿಷ್ಠಿತಲಿಂಗೇ ತು ನ ಯಥಾ ಪೂರ್ವಭಾವನಾ ॥"

[4] ದಾರ್ವಶ್ಮಲೋಹಮೃದ್ರತ್ನಕ್ಲೃಪ್ತಲಿಂಗಂ ಪ್ರತಿಷ್ಠಿತಮ್ ।
ಯಥಾ ಪೂಜ್ಯಂ ತಥೈವ ಸ್ಯಾತ್ ಭಕ್ತಶ್ಚಂಡಾಲವಂಶಜಃ ॥

ಶಿವರಹಸ್ಯದಲ್ಲಿ–

'ಶ್ವಪಚನಾಗಿದ್ದವನೂ ಸಹ ಶಿವಕೃಪೆಗೆ ಪಾತ್ರನಾಗಿ ಲಿಂಗಪೂಜಕನಾದ ಪಕ್ಷದಲ್ಲಿ ಅವನು ಸರ್ವವೇದಜ್ಞರಲ್ಲಿ ಸರ್ವಜ್ಞನಂತೆಯೂ, ಸರ್ವಯಜ್ಞಗಳಲ್ಲಿ ದೀಕ್ಷಿತನಂತೆಯೂ ಮಹಾಪಾತಕ ಕೋಟಿಗಳನ್ನು ನಾಶಮಾಡುವ ಸಾಮರ್ಥ್ಯವನ್ನು ಪಡೆಯುತ್ತಾನೆ. [1] ಎಂದೂ,

ಮಹಾಭಾರತದಲ್ಲಿಯೂ ಕೂಡ–

'ಎಲ್ಲ ಮಾನವರೂ ಹುಟ್ಟುವಾಗ ಶೂದ್ರರೇ ಆಗಿರುತ್ತಾರೆ. ಅವರು ಉಪನಯನ ಸಂಸ್ಕಾರವನ್ನು ಪಡೆದು ದ್ವಿಜರೆನಿಸುವರು. ವೇದಾಧ್ಯಯನಾದಿಗಳನ್ನು ಮಾಡುವುದರಿಂದ ವಿಪ್ರರು, ಬ್ರಹ್ಮವನ್ನರಿತು ಬ್ರಾಹ್ಮಣರೆನಿಸುವರು.' [2] ಎಂದೂ,

ಸ್ಕಾಂದದಲ್ಲಿ–

' ಯಾರು ರುದ್ರಪಿಂಡಸಂಜಾತರೋ, ಯಾರು ಕ್ರಮವಾಗಿ ವೇದಾಧ್ಯಯನ ಮಾಡಿದವರೋ, ಮತ್ತೆ ಯಾರು ಬ್ರಹ್ಮಪ್ರತಿಪಾದಕವಾದ ಶ್ರೀ ರುದ್ರಪಾರಾಯಣಮಾಡುವರೋ ಅವರೇ ಬ್ರಾಹ್ಮಣರು' [4] ಎಂದೂ,

ಇವೇ ಮುಂತಾದ ಅನೇಕಪ್ರಮಾಣಗಳಿಂದ ಶೂದ್ರರಿಗೂ ಸಂಸ್ಕಾರಕ್ಕೆ ಅಧಿಕಾರವಿರುವುದರಿಂದಲೂ ಅವರು ಸಂಸ್ಕಾರಿಗಳಾದ್ದರಿಂದಲೂ ಅವರೂ ಕೂಡ ವೇದಾಧ್ಯಯನ ಮತ್ತು ವೇದಾರ್ಥ ವಿಚಾರವನ್ನು ಮಾಡಬಹುದು. ಆದ್ದರಿಂದ ಸಂಸ್ಕಾರವಿಲ್ಲದ್ದರಿಂದ ಅವರಿಗೆ ವೇದಾಧಿಕಾರವಿಲ್ಲ ; ಎಂಬ ಮಾತು ಒಪ್ಪತಕ್ಕದ್ದಲ್ಲ. ಕಾರಣ ಮುಂಡಕೋಪನಿಷತ್ತಿನಲ್ಲಿ– ಬ್ರಹ್ಮವಿದ್ಯಾಧಿಕಾರವನ್ನು ಕುರಿತು– 'ಯಾರು ಶಿರೋವ್ರತವನ್ನು ವಿಧ್ಯುಕ್ತವಾಗಿ ಗುರುಮುಖದಿಂದ ಶಿವದೀಕ್ಷಾಕಾಲದಲ್ಲಿ ಪಡೆದಿರುತ್ತಾರೆಯೋ ಅಂಥವರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು.' [4] ಎಂಬುದೇ ಆಗಿದೆ

ಆಚಾರ್ಯಶ್ರೀ**ಶಂಕರರು** ಯತಿಪ್ರಕರಣದಲ್ಲಿ ಸಂನ್ಯಾಸವನ್ನು ವಿಧಿಸಿ, ಉಪಸಂಹಾರದಲ್ಲಿ ಸಂನ್ಯಾಸಿಗಳಿಗೆ **ಶಿರೋವ್ರತ**ವನ್ನು ಹೇಳಿದ್ದಾರೆ. ಆದರೆ– **ನೀಲಕಂಠಶಿವಾಚಾರ್ಯರು** ಸಂನ್ಯಾಸಿಗಳೇ ಬ್ರಹ್ಮವಿದ್ಯಾಧಿಕಾರಿಗಳು ಎಂಬ ಮತವನ್ನು ಸಕಾರಣವಾಗಿ ನಿರಾಕರಿಸಿ, **ಕ್ರಿಯಾಸಾರದಲ್ಲಿ** ಹೀಗೆಂದಿದ್ದಾರೆ–

---

[1] ಸರ್ವವೇದೇಷು ಸರ್ವಜ್ಞಸ್ಸರ್ವಯಜ್ಞೇಷು ದೀಕ್ಷಿತಃ ।
ಮಹಾಪಾತಕಕೋಟಿಘ್ನಃ ಶ್ವಪಚೋ ಲಿಂಗಪೂಜಕಃ ॥

[2] ಜನ್ಮನಾಜಾಯತೇ ಶೂದ್ರಃ ಕರ್ಮಣಾ ಜಾಯತೇ ದ್ವಿಜಃ ।
ವೇದಶಾಸ್ತ್ರಾರ್ಥವಿದ್ವಿಪ್ರೋ ಬ್ರಹ್ಮ ಜಾನಾತಿ ಬ್ರಾಹ್ಮಣಃ ॥

[3] ಯೇರುದ್ರಪಿಂಡಸಂಜಾತಾ ಯೇ ವೇದಕ್ರಮಪಾಠಕಾಃ ।
ಯೇ ವಿದುರ್ಬ್ರಹ್ಮವಾಚ್ಯಶ್ರೀರುದ್ರಂ [ತೇ] ಬ್ರಾಹ್ಮಣಾಃ ಸ್ಮೃತಾಃ ॥

[4] **तेषामेवैतां ब्रह्मविद्यां वदेत शिरोव्रतं विधिवद्यैस्तु चीर्णम्**

(ಮು.೩.೨.೧೦)

"ಅತ್ಯಾಶ್ರಮಿತ್ವ- ಎಂದರೆ ಅದು ಮೋಕ್ಷಮಾರ್ಗಕ್ಕೆ ಸಾಧನ. ಅತ್ಯಾಶ್ರಮಿತ್ವವು ಗೃಹಸ್ಥನೂ ಮಹಾತ್ಮನೂ ಆದ ವಾಮದೇವನಲ್ಲಿತ್ತು; ಅಷ್ಟೇ ಅಲ್ಲದೆ ಗಾರ್ಗಿ ಎಂಬ ಹೆಂಗಸಿನಲ್ಲಿಯೂ ಇತ್ತು. ಏಕೆಂದರೆ- ಅವಳು ಬ್ರಹ್ಮಚಾರಿಣಿ ಎಂದರೆ ಬ್ರಹ್ಮವನ್ನು ಬಲ್ಲವಳಾಗಿದ್ದಳು." [1]

ಇದರಿಂದ ಬ್ರಹ್ಮವಿದ್ಯಾಧಿಕಾರವು ಕೇವಲ ಸನ್ಯಾಸಿಗಳಿಗೆ ಮಾತ್ರವೇ ಅಲ್ಲ; ಅದು **ವಾಮದೇವ, ವಶಿಷ್ಠ, ಜನಕ, ಜಾನಶ್ರುತಿ** ಮುಂತಾದ ಗೃಹಸ್ಥರಿಗೂ ಉಂಟು; ಇನ್ನು ಅದು ಬ್ರಾಹ್ಮಣರೇ ಮುಂತಾದ ಕೇವಲ ದ್ವಿಜರಿಗೆ ಮೀಸಲೂ ಅಲ್ಲ; ಮೇಲಾಗಿ **ಜಾಬಾಲ, ಐಲೂಷ, ವಿದುರ** ಮುಂತಾದ ಭಗವದ್ಭಕ್ತರಿಗೂ ಉಂಟು; ಪುರುಷರಷ್ಟೇ ಅಲ್ಲ. **ಗಾರ್ಗಿ, ಮೈತ್ರೇಯಿ** ಮುಂತಾದ ಬ್ರಹ್ಮಚಾರಿಣಿಯರಾದ ಸ್ತ್ರೀಯರಿಗೂ ಉಂಟು; ಏಕೆಂದರೆ- ಬ್ರಹ್ಮ ಜಾನಾತಿ ಎಂಬ ಅರ್ಥದಲ್ಲಿ ಅವರೂ ಸಹ ಹಿಂದೆ ಉಪನಯನ ಹೊಂದಿ ಮೌಂಜಿ ಮತ್ತು ಯಜ್ಞೋಪವೀತ ಧರಿಸಿದ್ದರು ಮಾತ್ರವಲ್ಲದೆ ಅವರು ವೇದಾಧ್ಯಯನ ಮಾಡಿ ಗುರುಸನ್ನಿಧಿಯಲ್ಲಿ ಬ್ರಹ್ಮವಿದ್ಯೆಯನ್ನು ಪಡೆದಿದ್ದರು; ಎಂದು ಹೇಳಲಾಗಿದೆ.' [2]

"ಶಕ್ತಿಪಾತ" ಲಕ್ಷಣಗಳನ್ನು ಪರೀಕ್ಷಿಸಿದ ಸದ್ಗುರುವಿನ ಕೃಪೆಗೆ ಪಾತ್ರರಾಗಿ ಲಿಂಗಧಾರಣಾತ್ಮಕಶಿವದೀಕ್ಷೆಯನ್ನು ಪಡೆದ ಎಲ್ಲರಿಗೂ ಬ್ರಹ್ಮವಿದ್ಯಾಧಿಕಾರವುಂಟು. ಸೂತ್ರದಲ್ಲಿ ಬರುವ "ಸಂಸ್ಕಾರಪರಾಮರ್ಶಾತ್...." ಎಂಬ ಸೂತ್ರಕ್ಕೆ ಉಮಾಚಿಗಿ **ಶಂಕರಶಾಸ್ತ್ರಿಗಳು** "ಸಂಸ್ಕಾರೋ ನಾಮ ಶಿವದೀಕ್ಷಾ" ಎಂದೂ ಶಿವದೀಕ್ಷೆಯೇ ಸಂಸ್ಕಾರವೆಂದೂ ಸಿದ್ಧಮಾಡಿದ್ದಾರೆ. ವಾಯವೀಯ ಸಂಹಿತೆಯಲ್ಲಿ ಬರುವ **ಕೃಷ್ಣೋಪಮನ್ಯುಸಂವಾದದಲ್ಲಿ** "ಇದಾನೀಂ ಶ್ರೋತುಮಿಚ್ಛಾಮಿ ಶಿವ-ಸಂಸ್ಕಾರಮುತ್ತಮಂ" [3] ಎಂಬ ಪ್ರಶ್ನೆಗೆ ಉತ್ತರವಾಗಿ- ಓಹೋ ! ಎಲ್ಲ ಪಾಪವನ್ನೂ ಕಳೆಯುವ, ಶಿವೋಕ್ತವೂ, ಪುಣ್ಯಕರವೂ ಆದ ಸಂಸ್ಕಾರವನ್ನು ಹೇಳುತ್ತೇನೆ- 'ಯಾವುದು ಜ್ಞಾನವನ್ನು ನೀಡಿ, ಪಾಶವನ್ನು ಕತ್ತರಿಸುವುದೊ ಅಂತಹ ಷಡಧ್ವಶುದ್ಧಿ ಪೂರ್ವಕವಾದ ಶಿವದೀಕ್ಷೆಯೇ ಸಂಸ್ಕಾರ.' ಎಂದು ಹೇಳಿವೆ; ಮುಂತಾಗಿ ಕ್ರಿಯಾಸಾರವು ಉದ್ಧರಿಸಿರುವ ಶ್ಲೋಕಗಳಿಂದ ಶಿವದೀಕ್ಷೆಯನ್ನು "ಸಂಸ್ಕಾರ" ಎಂದು ಕರೆಯಲಾಗಿದೆ. ಈ ಬಗೆಯ ಸಂಸ್ಕಾರಕ್ಕೆ ಅಧಿಕಾರಿ ಯಾರು ಎಂಬುದಕ್ಕೆ-

---

[1] ಅತ್ಯಾಶ್ರಮಿತ್ವಂ ಕಿಂ ನಾಮ ಮೋಕ್ಷಮಾರ್ಗೋಪಯೋಗಿತಾ ।
ಸಾ ಹಿ ದೃಷ್ಟಾ ಗೃಹಸ್ಥೇ ಚ ವಾಮದೇವೇ ಮಹಾತ್ಮನಿ ॥
ಗಾರ್ಗ್ಯಾಮಪಿ ಸ್ತ್ರಿಯಾಂ ಚೈವ ಸಾ ಯತೋ ಬ್ರಹ್ಮಚಾರಿಣೀ ॥

[2] "ಪುರಾ ಕಲ್ಪೇ ತು ನಾರೀಣಾಂ ಮೌಂಜೀಬಂಧನಮಿಷ್ಯತೇ"- ಸ್ಮೃತಿ.

[3] "ಇದಾನೀಂ ಶ್ರೋತುಮಿಚ್ಛಾಮಿ ಶಿವಸಂಸ್ಕಾರಮುತ್ತಮಮ್- ಇತಿ ಪ್ರಶ್ನೇ ।
ಹಂತ ತೇ ಕಥಯಿಷ್ಯಾಮಿ ಸರ್ವಪಾಪವಿನಾಶನಮ್ ।
ಸಂಸ್ಕಾರಂ ಪರಮಂ ಪುಣ್ಯಂ ಶಿವೇನ ಪರಿಭಾಷಿತಮ್ ॥
ಸಮ್ಯಕ್ ಕೃತಾಧಿಕಾರಸ್ಸ್ಯಾತ್ ಪೂಜಾದಿಷು ನರೋ ಯತಃ ।
ಸಂಸ್ಕಾರಃ ಕಥ್ಯತೇ ಯೇನ ಷಡಧ್ವಪರಿಶೋಧನಮ್ ॥
ದೀಯತೇ ಯೇನ ವೈ ಜ್ಞಾನಂ ಕ್ಷೀಯತೇ ಪಾಶಬಂಧನಮ್ ।
ತಸ್ಮಾತ್ ಸಂಸ್ಕಾರ ಏವಾಯಂ ದೀಕ್ಷೇತ್ಯಪಿ ಚ ಕಥ್ಯತೇ ॥

-ವಾಯವೀಯಸಂಹಿತೆ

"ಶಿವಕೃಪಾರೂಪವಾದ ಶಕ್ತಿಪಾತವು ಯಾರಲ್ಲಿ ಆಗಿದೆಯೋ ಅಂತಹ ಶಿಷ್ಯನು ಗುರುಕೃಪೆಗೆ ಪಾತ್ರನಾಗುತ್ತಾನೆ. ಶಿವಧರ್ಮಾಧಿಕಾರಕ್ಕೆ ಇದೇ ಮುಖ್ಯ." [1] ಎಂದು ಹಲವಾರು ಪ್ರಮಾಣಗಳಿಂದ ನಿರ್ಣಯಿಸಲಾಗಿದೆ. ಯಾರ ಮೇಲೆ ಪರಶಿವನ ಕೃಪೆಯಾಗುವುದೋ ಅವರೆಲ್ಲರೂ ಶಿವದೀಕ್ಷೆ ಪಡೆಯಲು ಅರ್ಹರು. ಶಕ್ತಿಪಾತವೆಂದರೆ-

"ಯಾರ ಮೇಲೆ ಶಿವಕೃಪೆಯಾಗುವುದೋ ಅವರೆಲ್ಲ ಈ ಭವರೋಗದಿಂದ ವಿಮುಕ್ತರಾಗುತ್ತಾರೆ. ಶಕ್ತಿಪಾತವಾದವರಲ್ಲಿ ಕಾಣುವ ಗುರುತುಗಳು ಹೀಗಿವೆ- 'ಮುಕ್ತಿಯಲ್ಲಿ ಆಸಕ್ತಿ, ಭವ (ಸಂಸಾರ)ದ ಬಗ್ಗೆ ಜಿಹಾಸೆ, ಶಿವಭಕ್ತರಲ್ಲಿ ಮತ್ತು ಅವರಿಗೆ ಪೂಜ್ಯನಾದ ಶಿವನಲ್ಲಿ ಶ್ರದ್ಧೆ ಮುಂತಾದ ಲಕ್ಷಣಗಳುಎಡೆಬಿಡದೆ ಕೂಡಿಬಂದಿದೆಯೋ ಅವರ ಮೇಲೆ ಶಕ್ತಿಪಾತ (ಶಿವಕೃಪೆ) ವಾಗಿದೆ ;' ಎಂದು ಮಹಾತ್ಮರುನಿರ್ಧರಿಸುತ್ತಾರೆ. ಇದನ್ನು ಜ್ಞಾನಿಯಾದ ಗುರು ಹೊರಗೆ ಕಾಣುವ ಲಕ್ಷಣಗಳಿಂದ ಊಹಿಸಿ ತಿಳಿಯುತ್ತಾನೆ." [2] ಇನ್ನು ಅನಧಿಕಾರಿ ಯಾರು ? ಎಂಬುದನ್ನು ಅಲ್ಲಿ ಹೀಗೆ ಹೇಳಿದೆ-

"ಎಲ್ಲಿ ಶಕ್ತಿಪಾತವಾಗಿಲ್ಲವೋ ಅಲ್ಲಿ ಪವಿತ್ರತೆ ಇಲ್ಲ. ಅಂತಹವನಿಗೆ ವಿದ್ಯೆ, ಶಿವಾಚಾರ, ಮುಕ್ತಿ ಮುಂತಾದ ಯಾವ ಸಿದ್ಧಿಯೂ ಇಲ್ಲ. ಆದ್ದರಿಂದ ಹಿಂದೆ ಹೇಳಿದ ಶಕ್ತಿಪಾತಚಿಹ್ನೆಗಳನ್ನು ಸಾವಧಾನವಾಗಿ ಪರಿಶೀಲಿಸಬೇಕು. ಗುರುವು ಜ್ಞಾನ ಮತ್ತು ಕ್ರಿಯೆ ಎರಡೂ ದೃಷ್ಟಿಯಿಂದ ಶಿಷ್ಯನನ್ನು ಪರೀಕ್ಷಿಸಿ ದೀಕ್ಷೆ ಕೊಡಬೇಕು.[3]" ಶಕ್ತಿಪಾತ ಚಿಹ್ನೆಗಳು ಯಾವುವು ಎಂದರೆ-

"ಪ್ರಬೋಧಾನಂದದಿಂದ ಉದಿಸುವ ಸ್ಫೂರ್ತಿಯೇ ಶಕ್ತಿ. ಅದೇ ಪರಮ ಶಕ್ತಿ. ಅದು ಪ್ರಬೋಧಾನಂದರೂಪವಾದದ್ದು. ಆನಂದ ಮತ್ತು ಬೋಧಜ್ಞಾನವಾದ ಮೇಲೆ ಅವನ ಅಂತಃಕರಣದಲ್ಲಿ ಕೆಲವು ವಿಕಾರಗಳು ಉಂಟಾಗುತ್ತವೆ. ಭಕ್ತಿಯ ಉದ್ರೇಕ ಸ್ಥಿತಿಯಲ್ಲಿ ಕಂಪ (ಮೈನಡುಕ)

---

[1] ಶಕ್ತಿಪಾತಾನುಸಾರೇಣ ಶಿಷ್ಯೋಽನುಗ್ರಹಮರ್ಹತಿ ।
ಶಿವಧರ್ಮಾಧಿಕಾರಸ್ಯ ತನ್ಮೂಲತ್ವಾತ್ಸಮಾಸತಃ ॥

[2] ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ ॥
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ ।
ಏಭಿರ್ಲಕ್ಷ್ಯೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ॥
ಅನುಮೇಯಃ ಸದೀಕ್ಷ್ಯೈಶ್ಚ ಶಕ್ತಿಪಾತಾನುಸಾರತಃ ।

– ಪಾರಮೇಶ್ವರ ಮೃಗೇಂದ್ರ.

"ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದ್ಗುರುಃ"– (ಸಿ.ಶಿ.ಪ.೬.
–(ವೇದಾಂತಸಾರ ವೀರಶೈವ ಚಿಂತಾಮಣಿ– ಪ.೬.ಶ್ಲೋ.೬–೮)

[3] ಯತ್ರ ಶಕ್ತಿರ್ನ ಪತಿತಾ ತತ್ರ ಶುದ್ಧಿರ್ನ ಜಾಯತೇ ।
ನ ವಿದ್ಯಾ ನ ಶಿವಾಚಾರೋ ನ ಮುಕ್ತಿರ್ನ ಚ ಸಿದ್ಧಯಃ ॥
ತಸ್ಮಾಲ್ಲಿಂಗಾನಿ ಸಂವೀಕ್ಷ್ಯ ಶಕ್ತಿಪಾತಸ್ಯ ಭೂರಿಶಃ ।
ಜ್ಞಾನೇನ ಕ್ರಿಯಯಾ ವಾಥ ಗುರುಃ ಶಿಷ್ಯಂ ವಿಶೋಧಯೇತ್ ॥

ರೋಮಾಂಚ (ನಿಮಿರುವಿಕೆ) ನೇತ್ರಪ್ರಾಂತಗಳಲ್ಲಿ ಆನಂದಬಾಷ್ಪಗಳು ಸ್ಫುರಿಸುವುದು ಮುಂತಾದ ಅನುಭಾವಗಳು ತಲೆದೋರುತ್ತವೆ. [1]

ಈ ಲಕ್ಷಣವನ್ನು ಬಸವಣ್ಣನವರ ಈ ವಚನದಲ್ಲಿ ಕಾಣಬಹುದು–

"ಅಡಿಗಡಿಗೆ ಲಿಂಗವನಡರಿನೋಡಿ ನೋಡಿ ಕಂಗಳು,
ಕಡೆಗೋಡಿವರಿಯುವೆನಗಯ್ಯಾ ಎನ್ನಶ್ರುಜಲಂಗಳು,
ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ
ತನು ಪುಳಕಿತವಾದ ಬೆಮರುಬಿಂದುಗಳೆಲ್ಲಾ !
ಕೂಡಲಸಂಗನ ದರ್ಶನಸ್ಪರ್ಶನದಿಂದ–
ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ" || ೪೯೫ ||

"ಎದೆ ಬಿರಿವನ್ನಕ್ಕ, ಮನದಣಿವನ್ನಕ್ಕ,
ನಾಲಿಗೆ ನಲಿನಲಿದಾಡುವನ್ನಕ್ಕ
ನಿಮ್ಮ ನಾಮಾಮೃತವ ತಂದೆರಾಡಿಸು ಕಂಡಯ್ಯ ಎನಗೆನ್ನ ತಂದೆ ;
ಬಿರಿ ಮುಗುಳುದದಿ ಎನ್ನ ಹೃದಯ
ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ– ಕೂಡಲಸಂಗಮದೇವ || ೪೮೮ ||

ಮುಂತಾದ ಪ್ರಮಾಣಗಳನ್ನು ಇಲ್ಲಿ ಗಮನಿಸಬೇಕು.

ಇನ್ನು– "ಹೆಚ್ಚು ಹೇಳುವುದರಿಂದ ಏನು ಪ್ರಯೋಜನ. ಒಟ್ಟಿನಲ್ಲಿ– ನನ್ನ ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವ ಬಗ್ಗೆ ಭಕ್ತರೆಲ್ಲರೂ ಅಧಿಕಾರಿಗಳೇ. ಆ ಮಂತ್ರವನ್ನು ಜಪಿಸುವವನು ಎಲ್ಲರಿಗಿಂತ ಶ್ರೇಷ್ಠ."[1]

ಮುಂತಾದ ಪ್ರಮಾಣಗಳಿಂದ ಮಂತ್ರದೀಕ್ಷಾಧಿಕಾರವೂ ಸಹ ಎಲ್ಲ ಭಕ್ತರಿಗೂ ಉಂಟು ಎನ್ನಲಾಗಿದೆ.

"ಸ್ವಾಮಿ, ತಾವು ಮೋಕ್ಷಮಾರ್ಗವನ್ನು ಚೆನ್ನಾಗಿ ವಿವರಿಸಿದಿರಿ. ಆದರೆ ಆ ಮೋಕ್ಷಕ್ಕೆ ಅಧಿಕಾರಿ ಯಾರು? ಆ ಬಗ್ಗೆ ನನಗೆ ಸಂಶಯವಿದೆ." ಎಂಬ ಶ್ರೀರಾಮ ಪ್ರಶ್ನೆಗೆ ಪರಶಿವನು– 'ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀ ಮುಂದಾದವರೆಲ್ಲರೂ ಮೋಕ್ಷಕ್ಕೆ ಅಧಿಕಾರಿಗಳೇ'[3] ಎಂದು ಘೋಷಿಸಿದ್ದಾನೆ.

---

[1] ಲಕ್ಷಣಂ ಶಕ್ತಿಪಾತಸ್ಯ ಪ್ರಬೋಧಾನಂದಸಂಭವಃ ।
ಸಾ ಯಸ್ಮಾತ್ ಪರಮಾ ಶಕ್ತಿಃ ಪ್ರಬೋಧಾನಂದರೂಪಿಣೀ ॥
ಆನಂದಬೋಧಯೋರ್ಲಿಂಗಮಂತಃಕರಣವಿಕ್ರಿಯಾ ।
ಯಥಾ ಸ್ಯಾತ್ ಕಂಪರೋಮಾಂಚಸ್ವರನೇತ್ರಾಂಗವಿಕ್ರಿಯಾ ॥

[2] ಕಿಮತ್ರ ಬಹುನೋಕ್ತೇನ ಭಕ್ತಾಸ್ಸರ್ವೇಽಧಿಕಾರಿಣಃ ।
ಮಮ ಪಂಚಾಕ್ಷರೇ ಮಂತ್ರೇ ತಸ್ಮಾತ್ ಶ್ರೇಷ್ಠತರೋ ಹಿ ಸಃ ॥

[3] ಬ್ರಹ್ಮ-ಕ್ಷತ್ರಿಯ-ವಿಟ್-ಶೂದ್ರಾಃ ಸ್ತ್ರಿಯಶ್ಚಾತ್ರಾಧಿಕಾರಿಣಃ ॥

– ಶಿವಗೀತೆ.

ವೀರಶೈವಧರ್ಮಶಿರೋಮಣಿಯಲ್ಲಿ–

'ಯಾರು ನನ್ನ ಕೃಪೆಗೆ ಪಾತ್ರರಾಗಿರುವರೋ, ಯಾರು ವೀರಶೈವದೀಕ್ಷೆಯನ್ನು ಪಡೆದು ಚರಮಶರೀರಿಯಾಗಿರುವರೋ, ಅವರಿಗೇ ಭಕ್ತಿ ಉದಿಸುತ್ತದೆ. ನನ್ನ ಲಿಂಗವನ್ನು ಧರಿಸಲು ಅವರೇ ಅರ್ಹರು.[1] ಎಂಬಲ್ಲಿ ಶಿವಸಂಸ್ಕಾರಕ್ಕೆ ಎಲ್ಲ ಭಕ್ತರೂ ಅಧಿಕಾರಿಗಳು ಎನ್ನಲಾಗಿದೆ. ಭಕ್ತಿಮಾತ್ರ ದಿಂದಲೇ ಪವಿತ್ರರಾದವರೆಲ್ಲರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳೇ![2] ಶಿವಸಂಸ್ಕಾರಕ್ಕೆ ಎಲ್ಲರಿಗೂ ಅರ್ಹತೆ ಉಂಟು ಎಂಬ ವಿಷಯದಲ್ಲಿ– "ಸಕಲರು ಎಂಬ ಜೀವರಲ್ಲಿ ಪರಿಪಕ್ವಮಲರಾದವರನ್ನು ಪರಶಿವನು ಕೃಪೆಮಾಡಿ ತಾನೇ ಗುರುವಾಗಿ ಶಿವದೀಕ್ಷೆ ಕೊಡುವನು. ಗುರುವು ತನ್ನಲ್ಲಿ ಶರಣಾಗಿ ಬಂದ ಶಿಷ್ಯ ನನ್ನು ಒಂದು ವರ್ಷ ಪರೀಕ್ಷಿಸಬೇಕು. ಅವರಲ್ಲಿ ಬ್ರಾಹ್ಮಣನನ್ನು ಒಂದು ವರ್ಷ, ಕ್ಷತ್ರಿಯನನ್ನು ಎರಡು ವರ್ಷ, ವೈಶ್ಯನನ್ನು ಮೂರು ವರ್ಷಗಳವರೆಗೆ ಪರೀಕ್ಷಿಸಬೇಕು. ಪ್ರಾಣ, ಹಣ ಮುಂತಾದವು ಗಳನ್ನು ಗುರುವಿಗೆ ಅರ್ಪಿಸುವ ವಿಷಯದಲ್ಲಿ ತನ್ನ ಅಪ್ಪಣೆ ಪಾಲಿಸುವ ಬಗ್ಗೆ ಸಮಾನಮಾನಾದಿಗಳಲ್ಲಿ ಎಳೆದು, ಹೊಡೆದು ಹಿಂಸಿಸಿದರೂ ಯಾರು ವಿಷಾದಿಸುವುದಿಲ್ಲವೋ ಅಂತಹವರೇ ಪರಿಶುದ್ಧರು ; ಶಿವ ಸಂಸ್ಕಾರಕ್ಕೆ ಅರ್ಹರು. ಅಹಿಂಸೆ, ದಯೆಯುಳ್ಳವರಾಗಿ ಯಾವಾಗಲೂ ಕಾರ್ಯತತ್ಪರರೂ, ನಿರಭಿ ಮಾನಿಗಳೂ, ಬುದ್ಧಿಶಾಲಿಗಳೂ, ಸ್ಪರ್ಧೆಯಲ್ಲಿ ಶೂರರೂ, ಹಿತವಾಗಿ ಮಾತನಾಡುವವರೂ, ಋಜು ಬುದ್ಧಿಯುಳ್ಳವರೂ, ಮೃದುಭಾಷಿಗಳೂ, ತೃಪ್ತರೂ, ವಿನಯಶೀಲರೂ, ಸ್ಥಿರಮನಸ್ಸುಳ್ಳವರೂ, ಶೌಚಾಚಾರಶೀಲರೂ, ಶಿವಭಕ್ತರೂ, ದ್ವಿಜರೂ,-ಬಹಳ ಹೇಳುವುದೇನು ? ಒಟ್ಟಿನಲ್ಲಿ ಶಿವನನ್ನು ಆಶ್ರಯಿಸಿದವರೆಲ್ಲರೂ ಯಾರೇ ಆಗಲಿ ಅವರೆಲ್ಲರೂ ಶಿವದೀಕ್ಷಾಸಂಸ್ಕಾರಕ್ಕೆ ಯೋಗ್ಯರೇ."[3]

---

[1] ಯಸ್ತು ಮತ್ಕರುಣಾಪಾತ್ರಂ ಚರಮಂ ಜನ್ಮ ಯಸ್ಯ ವೈ ।
ತಸ್ಯೈವ ಜಾಯತೇ ಭಕ್ತಿಃ ಮಮಲಿಂಗಸ್ಯ ಧಾರಣೇ ॥

– ವೀ. ಧರ್ಮಶಿರೋಮಣಿ

[2] ಭಕ್ತಿಮಾತ್ರಪವಿತ್ರಾ ಹಿ ಸರ್ವ ಏವಾಧಿಕಾರಿಣಃ ।

[3] ಪರಿಪಕ್ವಮಲಾನ್ ಶಂಭುಃ ಸಕಲಾನಾಂ ಚ ಮಧ್ಯತಃ ।
ಕೃಪಯಾ ಪರಯಾ ವೀಕ್ಷ್ಯ ದೀಕ್ಷಯೇದ್ದೇಶಿಕೋತ್ತಮಃ ॥
ಗುರುಶ್ಚ ಸ್ವಾಶ್ರಿತಂ ಶಿಷ್ಯಂ ವರ್ಷಮೇಕಂ ಪರೀಕ್ಷಯೇತ್ ।
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ದ್ವಿವರ್ಷಂ ಚ ತ್ರಿವರ್ಷಕಮ್ ॥
ಪ್ರಾಣದ್ರವ್ಯಪ್ರದಾನಾದ್ಯೈರಾದೇಶೈಶ್ಚ ಸಮಾಗಮೈಃ ।
ಆಕೃಷ್ಟಾಸ್ತಾಡಿತಾ ವಾಪಿ ಯೇ ವಿಷಾದಂ ನ ಯಾಂತ್ಯಪಿ ॥
ತೇ ಯೋಗ್ಯಾಃ ಸಂಯುತಾಃ ಶುದ್ಧಾಃ ಶಿವಸಂಸ್ಕಾರಕರ್ಮಣಿ ।
ಅಹಿಂಸಕಾ ದಯಾವಂತಃ ನಿತ್ಯಮುದ್ಯುಕ್ತಚೇತಸಃ ॥
ಅಮಾನಿನೋ ಬುದ್ಧಿಮಂತಃ ತ್ಯಕ್ತಸ್ಪರ್ಧಾಃ ಪ್ರಿಯಂವದಾಃ ।
ಋಜವೋ ಮೃದವಃ ಸ್ವಸ್ಥಾಃ ವಿನೀತಾಃ ಸ್ಥಿರಚೇತಸಃ ।
ಶೌಚಾಚಾರಸಮೋಪೇತಾಃ ಶಿವಭಕ್ತಾ ದ್ವಿಜಾತಯಃ ॥
ಕಿಮತ್ರ ಬಹುನೋಕ್ತೇನ ಯೋಽಪಿ ಸೋಽಪಿ ಶಿವಾಶ್ರಿತಃ ।
ಸಂಸ್ಕಾರ್ಯೋ ಗುರ್ವಧೀನಶ್ಚೇತ್ ಸಂಸ್ಕಾರಾತ್ ಪ್ರತಿಭಾದ್ಯ ತೇ ॥

"ಸಂಪದ್ಯುಕ್ತವಾದ ಲಿಂಗಧಾರಣಮಹಾವೈಭವದಿಂದ ಎಲ್ಲರೂ ರುದ್ರರೇ ಆಗುವರು. ಅವರಲ್ಲಿ ತಾರತಮ್ಯವಿಲ್ಲ. ಈ ವೀರಶೈವಮತದಲ್ಲಿ ಎಲ್ಲರೂ ತಾಯಿ-ಮಕ್ಕಳಂತೆಯೂ, ಅಣ್ಣ ತಮ್ಮಂದಿರಂತೆಯೂ ಇರುತ್ತಾರೆ." [1] ಎಂಬ ಪ್ರಾಜ್ಞರ ಅಭಿಮತವಿದೆ.

"ರಜತ-ತಾಮ್ರಗಳು ಹೇಗೆ ರಸಯೋಗದಿಂದ ಚಿನ್ನವಾಗುತ್ತವೆಯೋ, ಹಾಗೆ ಶಿವಜ್ಞಾನರಸದಿಂದ ಶೂದ್ರಾದಿಗಳೆಲ್ಲರೂ ಶಿವಸ್ವರೂಪರೇ ಆಗುತ್ತಾರೆ. ಯಾರಿಗೆ ಗುರುಕೃಪೆಯಿಂದ ಶಂಭುವಿನಲ್ಲಿ ಭಕ್ತಿ ಉದಿಸುತ್ತದೆಯೋ ಅವನ ಪೂರ್ವಜಾತ್ಯಾದಿಗಳನ್ನು ನೆನೆಯಬಾರದು ; ಏಕೆಂದರೆ ಅವು ಪ್ರಾಕೃತ. ಅಪ್ರಾಕೃತನಾದ ಭಕ್ತನು ಗುರುವಿನಿಂದ ಹಸ್ತಮಸ್ತಕಸಂಯೋಗ ಪಡೆದು ಅವನು ಪುನರ್ಜಾತನಾಗಿರುವುದರಿಂದ ಅವನ ಹಿಂದಿನ ಜಾತಿಜನನಗಳನ್ನು ಎಣಿಸಬಾರದು. ಹೇಗೆ ಕಲ್ಲಿನ ಲಿಂಗವು ವಿಧ್ಯುಕ್ತವಾಗಿ ಪ್ರತಿಷ್ಠಿತವಾದ ಮೇಲೆ ಪೂಜ್ಯವಾಗುತ್ತದೆಯೋ ಅದರಂತೆ ನೀಚಜಾತಿಯಲ್ಲಿ ಹುಟ್ಟಿದ್ದರೂ ಕೂಡ ಅವನು ಶಿವಭಕ್ತನಾದರೆ ಪೂಜ್ಯನಾಗುತ್ತಾನೆ." [2]

ಮತ್ತೆ "ಎಲೈ ! ದ್ವಿಜಶ್ರೇಷ್ಠನೇ ! ಶ್ವಪಚನಾದರೂ ಶಿವಭಕ್ತನಾದರೆ ಅವನು ದ್ವಿಜನಿಗಿಂತ ಶ್ರೇಷ್ಠ. ಶಿವಭಕ್ತಿಯಿಲ್ಲದವನು ಬ್ರಾಹ್ಮಣನಾದರೂ ಅವನು ಶ್ವಪಚನಿಗಿಂತ ಕಡೆ. ಶಿವಸಂಸ್ಕಾರವಿಲ್ಲದವನು ದ್ವಿಜನಾದರೂ ಅವನು ಶ್ವಪಚಾಧಮ. ಚಿನ್ನ, ಬೆಳ್ಳಿ, ತಾಮ್ರ ಮತ್ತು ಕಬ್ಬಿಣ ಎಂಬ ನಾಲ್ಕೂ ರಸವೇಧದಿಂದ ಹೇಗೆ ಸುವರ್ಣವೇ ಆಗುತ್ತವೆಯೋ ಅದರಂತೆ ಶೂದ್ರಾದಿಗಳೆಲ್ಲರೂ ಮಹತ್ವವುಳ್ಳ ಶಿವ ಎಂಬ ವಿದ್ವದ್ರಸದಿಂದ ಪರಬ್ರಹ್ಮತ್ವವನ್ನೇ ಹೊಂದುತ್ತಾರೆ. ಶಿವಸಂಸ್ಕಾರವನ್ನು ಪಡೆದ ಮೇಲೆ ಇವನು ಶೂದ್ರ, ಇವನು ದ್ವಿಜ, ಈತನು ಕ್ಷತ್ರಿಯ, ಇವನು ವೈಶ್ಯ, ಇವಳು

---

[1] ಶ್ರೀಲಿಂಗಧಾರಣಮಹಾವಿಭವೇನ ಸರ್ವೇ
ರುದ್ರಾ ಬಭೂವುರತ ಏವ ನ ತಾರತಮ್ಯಮ್ ।
ಏತನ್ಮತೇ ಸಜನನೀಕಸುತಾ ಇವ ಸ್ಯುಃ
ವೀರಾಃ ಪರಸ್ಪರಸಹೋದರಭಾವಭಾಜಃ ॥

[2] "ಯಥಾ ಹಿ ರಜತಂ ತಾಮ್ರಂ ರಸಯೋಗಾತ್ಸುವರ್ಣತಾಮ್ ।
ತಥಾ ಶಿವಜ್ಞಾನರಸಾತ್ ಶೂದ್ರಾದಿಶ್ಶಿವತಾಂ ವ್ರಜೇತ್ ॥

ಯಸ್ಯೈವ ಶಾಂಭವೀಭಕ್ತಿರ್ಭವೇತ್ ಗುರುಕೃಪಾಬಲಾತ್ ।
ಪೂರ್ವಜಾತ್ಯಾದಿಕಂ ತಸ್ಯ ನ ಸ್ಮರೇತ್ ಪ್ರಾಕೃತಂ ಹಿ ತತ್ ॥

ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಕೃಪಾಂಬುಜಾತ್ ।
ಪುನರ್ಜಾತಸ್ಯಾತ್ಮಜನ್ಮಜಾತ್ಯಾದಿಂ ನ ಚ ಕಲ್ಪಯೇತ್ ॥

ಪಾಷಾಣಾದಿಕೃತಂ ಲಿಂಗಂ ಯದ್ವತ್ ಪೂಜ್ಯಂ ಪ್ರತಿಷ್ಠಿತಮ್ ।
ನೀಚವಂಶೋದ್ಭವಶ್ಚಾಪಿ ಭಕ್ತಶ್ಚೇತ್ ಈಶ್ವರೇ ತಥಾ" ॥

ಹೆಂಗಸು ಎಂಬ ವರ್ಣ-ಲಿಂಗಾದಿಭೇದಗಳನ್ನು ಎಣಿಸಬಾರದು. ಹಾಗೆ ಭೇದಭಾವ ಮಾಡಿದವನು ರೌರವನರಕವನ್ನು ಹೊಂದುತ್ತಾನೆ." [1]

ಎಂಬ ಪ್ರಮಾಣಗಳಿಂದ ಶಿವದೀಕ್ಷೆಯಿಂದ ಸುಸಂಸ್ಕೃತಹೃದಯರಾದವರೆಲ್ಲರಿಗೂ ಬ್ರಹ್ಮ ವಿದ್ಯಾಧಿಕಾರವುಂಟು ಎಂದು ಸಮರ್ಥಿಸಲಾಗಿದೆ.

೬

## ಆಗಮಸಂಸ್ಕೃತಿಕಮಲಾಕರ ಮತ್ತು ಶೈವಸಂತಾನಪಾದಪ

ಉಪನಿಷದುದ್ಯಾನವನ್ನು ಪ್ರವೇಶಿಸಿದ ಭಾರತೀಯಸಂಸ್ಕೃತಿವಿಚಾರಧಾರೆ ವೇದ-ಉಪನಿಷತ್ತಿನ ಸಾರವನ್ನೊಳಗೊಂಡು ಆಗಮಸಂಸ್ಕೃತಿಕಮಲಾಕರವನ್ನು ಸೇರುತ್ತದೆ. ಭಾರತೀಯ ಸಂಸ್ಕೃತಿಯು ನಿಗಮಾಗಮಸಾರವೇ ಆದರೂ ವೈದಿಕಸಂಸ್ಕೃತಿಗಿಂತ ಆಗಮಿಕಸಂಸ್ಕೃತಿಯು ಪ್ರಾಚೀನ ಎಂಬುದು ಐತಿಹಾಸಿಕರ ಮತ. ಏಕೆಂದರೆ– ವೈದಿಕಾರ್ಯರ ಭಾರತಾಗಮನಕ್ಕಿಂತ ಮೊದಲೇ ಭಾರತಮೂಲನಿವಾಸಿಗಳ ದ್ರಾವಿಡ ಸಂಸ್ಕೃತಿಯು ಉತ್ಕೃಷ್ಟವೆನಿಸಿತ್ತು. ಸಿಂಧೂಕಣಿವೆಯ ಅಗೆತದಲ್ಲಿ ದೊರೆತಿರುವ ಅವಶೇಷಗಳಿಂದ ಇದು ಊಹಿಸಲ್ಪಟ್ಟಿದೆ. ಸಹಸ್ರಾರುವರ್ಷಗಳವರೆಗೆ ಆರ್ಯ-ದ್ರವಿಡ ಸಂಸ್ಕೃತಿಗಳ ಪರಸ್ಪರಸಂಘರ್ಷದ ಫಲವಾಗಿ ಕಾಲಾಂತರದಲ್ಲಿ ಭಾರತೀಯ ಸಂಸ್ಕೃತಿಯ ಉದಯವಾಯಿತು ; ಎಂದು ಐತಿಹಾಸಿಕರು ಹೇಳುತ್ತಾರೆ. ಅದೇ ಸೈಂಧವಸಂಸ್ಕೃತಿಯೇ ಆಗಮಸಂಸ್ಕೃತಿ ಮೂಲವೆಂದು ಅವರ ಆಶಯ. ಬಗೆಬಗೆಯ ಆಗಮಸಂಸ್ಕೃತಿಕಮಲಗಳಿಗೆ ಆಕರವಾದ್ದರಿಂದ ಸೈಂಧವ ಸಂಸ್ಕೃತಿಯನ್ನು **ಕಮಲಾಕರ** ಎಂದು ರೂಪಕಮಾಡಿ ಹೇಳಲಾಗಿದೆ.

ಆಗಮ ಸಂಸ್ಕೃತಿಯು ವೈದಿಕ ಸಂಸ್ಕೃತಿಯೊಂದಿಗೆ ಸೇರಿ ಭಾರತೀಯ ಸಂಸ್ಕೃತಿಯ ರೂಪು ತಳೆಯಿತು. ಅಲ್ಲಿ ಬೇರೂರಿರುವ ಶೈವಕಲ್ಪವೃಕ್ಷವು ಚಿಗುರೊಡೆದು ಪೂತು ಐಹಿಕ-ಆಮುಷ್ಮಿಕ ಫಲಭರಿತವಾಗಿ ಎಲ್ಲರನ್ನೂ ಉದ್ಧರಿಸುತ್ತಿದೆ.

ವೈದಿಕ-ಉಚ್ಚಸಂಸ್ಕೃತಿಯನ್ನು ಬೆಳಗಿಸಲೆಂದೇ ಆಗಮಸಂಪ್ರದಾಯವು ಹೊರಟಿದೆ ; ಎಂಬುದು ವಿದ್ವಾಂಸರ ಮತ. ನಿಗಮಾಗಮೋಕ್ತವಾದ ಸಂಸ್ಕಾರಗಳಿಂದ ಜನತೆ ಸುಸಂಸ್ಕೃತವಾಯಿತು. ಈಗ ಮೊದಲು ಸಂಸ್ಕಾರ-ಸಂಸ್ಕೃತಿಗಳ ಸ್ವರೂಪವನ್ನು ನೋಡೋಣ–

---

[1] "ಶ್ವಪಚೋಽಪಿ ದ್ವಿಜಶ್ರೇಷ್ಠ ಶಿವಭಕ್ತ್ಯಾ ದ್ವಿಜಾಧಿಕಃ ।
ಶಿವಭಕ್ತಿವಿಹೀನಸ್ತು ಬ್ರಾಹ್ಮಣಃ ಶ್ವಪಚಾಧಮಃ ॥
ಶಿವಸಂಸ್ಕಾರಹೀನಸ್ತು ದ್ವಿಜೋಽಪಿ ಶ್ವಪಚಾಧಮಃ ।"
"ಕಾಂಚನಂ ರಜತಂ ತಾಮ್ರಂ ಲೋಹಂಚೇತಿ ಚತುಷ್ಟಯಂ ।
ಯದ್ವದೇತಿ ಸುವರ್ಣತ್ವಂ ರಸವೇಧಪ್ರಭಾವತಃ ॥
ತದ್ವತ್ ಶೂದ್ರಾದಿ ಪಾತ್ರಂ ಹಿ ಶಿವಮಾತ್ರಾತ್ಮಕೇನ ತು ।
ವಿದ್ಧಸ್ರಸೇನ ಮಹತಾ ಪರಬ್ರಹ್ಮತ್ವಮೇತ್ಯಲಮ್ ॥
ಶಿವಸಂಸ್ಕಾರ ಸಂಪನ್ನೋ ಹ್ಯಯಂ ಶೂದ್ರೋ ಹ್ಯಯಂ ದ್ವಿಜಃ ।
ಲಿಂಗಭೇದಃ ಕೃತೋ ಯೇನ ರೌರವಂ ನರಕಂ ವ್ರಜೇತ್ ॥

### ಸಂಸ್ಕಾರ– ಸಂಸ್ಕೃತಿಶಬ್ದಾರ್ಥ

ಸಂ ಉಪಸರ್ಗ ಪೂರ್ವಕವಾದ (ಡು) ಕೃಞ್‌ಧಾತುವಿಗೆ ಭಾವಾರ್ಥದಲ್ಲಿ ಘಞ್, ಸುಟ್ ಪ್ರತ್ಯಯಗಳು ಬಂದು ವೃದ್ಧಿಸಂಧಿಯಾಗಿ 'ಸಂಸ್ಕಾರ' ಶಬ್ದವು ನಿಷ್ಪನ್ನವಾಗಿದೆ. "ಆತ್ಮ ಅಥವಾ ಶರೀರಗಳಲ್ಲಿರುವ ವಿಹಿತಕ್ರಿಯಾಜನ್ಯವಾದ ಒಂದು ಅತಿಶಯ ವಿಶೇಷಕ್ಕೆ ಸಂಸ್ಕಾರವೆಂದು ಹೆಸರು. 'ಸಂಸ್ಕೃತಿ' ಎಂದರೂ ಸಂಸ್ಕರಣವೇ. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬಂದರೆ ಸಂಸ್ಕರಣ, ಸ್ತ್ರೀ ಲಿಂಗದಲ್ಲಿ ಭಾವಾರ್ಥದಲ್ಲಿ 'ಕ್ತಿನ್' ಪ್ರತ್ಯಯವು ಬಂದು 'ಸಂಸ್ಕೃತಿ' ಎಂದಾಗುತ್ತದೆ.

ಮಾನವ ಮತ್ತು ಮೃಗ ಇವುಗಳಿಗಿರುವ ಅಂತರವನ್ನು ತೋರಿಸುವುದೇ ಸಂಸ್ಕೃತಿ. ಎಂದರೆ ಆತ್ಮವಿಕಾಸವೇ ಸಂಸ್ಕೃತಿ. ಈ ಸಂಸ್ಕೃತಿ (Culture) ಯು ಹೊರಗಿನ ವೇಷಭೂಷಣರೂಪವಾದ ನಾಗರಿಕತೆ (Civilization) ಗಿಂತ ಬೇರೆ. ಆತ್ಮನ ಜನ್ಮಾಂತರದ ವಾಸನಾವಿಶೇಷದಿಂದ ಅವನ ಅಂತಃಕರಣದಲ್ಲಿ ಅಂಕುರಿಸಿದ ಚಿತ್ತವೃತ್ತಿ ಮತ್ತು ಬುದ್ಧಿವ್ಯಾಪಾರಗಳನ್ನು ರೂಪಿಸಿ ಅಂತಃಸತ್ವರೂಪ ದಿಂದ ಬೆಳಗುವುದೇ ಸಂಸ್ಕೃತಿ. ಹಾಲಿನಲ್ಲಿನ ಕೆನೆಯಂತೆ ಇದು ನರನ ಜೀವನವ್ಯಾಪಾರಗಳಲ್ಲಿ ಹಾಸು ಹೊಕ್ಕಾಗಿ ಹರಡಿ ಪ್ರಗತಿಪಥವನ್ನು ಉಪದೇಶಿಸುತ್ತದೆ. "ಅಸತ್ತಿನಿಂದ ಸತ್ತಿನ ಕಡೆಗೆ" ಎಂದು ಹಿಂದೆ ಉದಹರಿಸಿದ ಶ್ರುತ್ಯರ್ಥವನ್ನು ಇದು ಉಪಬೃಂಹಣ ಮಾಡುತ್ತದೆ.

### ವೇದ-ಆಗಮ-ತಂತ್ರಶಬ್ದಾರ್ಥಗಳು

'ವಿದ– ಜ್ಞಾನೇ' ಎಂಬಲ್ಲಿನ 'ವಿದ್' ಧಾತುವಿನಿಂದ ಸಿದ್ಧವಾದ 'ವೇದ' ಎಂಬ ಶಬ್ದಕ್ಕೆ ಜ್ಞಾನ ಎಂದು ಅರ್ಥ. ಅದರಂತೆ ಗತ್ಯರ್ಥವನ್ನು ಕೊಡುವ 'ಗಮ್ಲೃ'ಧಾತು ನಿಷ್ಪನ್ನವಾದ 'ಆಗಮ' ಶಬ್ದಕ್ಕೂ ಕೂಡ "ಆಗಮನ" ಎಂದು ಅರ್ಥ ; ಎಂದರೆ 'ಪರಂಪರೆಯಿಂದ ಬಂದುದು ಆಗಮ' ಎಂದಾಗುತ್ತದೆ. "ಗತ್ಯರ್ಥಕವಾದವುಗಳೆಲ್ಲ ಜ್ಞಾನಾರ್ಥಕಗಳು" ಎಂಬ ಉಕ್ತಿಯಂತೆ "ಆಙ್" ಉಪಸರ್ಗ ಪೂರ್ವಕವಾದ 'ಗಮ್ಲೃ' ಧಾತುವಿನಿಂದ ಸಿದ್ಧವಾದ "ಆಗಮ" ಎಂಬ ಶಬ್ದಕ್ಕೆ "ಪರಿಪೂರ್ಣಜ್ಞಾನ" ಎಂಬ ಅರ್ಥವಿದೆ. ಆದರಿಂದ ಆಗಮವು ವೇದದ ಉದ್ದೇಶವನ್ನೇ ಸಾಧಿಸುತ್ತದೆ; ಎಂದಾಯಿತು. ಏಕೆಂದರೆ ವೇದೋಕ್ತವಾದ ಮಂತ್ರಗಳಿಗೆ ಋಷಿ, ಛಂದಸ್ಸು, ದೇವತೆ, ಪಲ್ಲವ ಮುಂತಾದವುಗಳನ್ನು ಸೂಚಿಸುವುದರ ಮೂಲಕ ಮಂತ್ರಗಳನ್ನು ಅನುಷ್ಠಾನಮಾಡಲು ಆಗಮಗಳು ಉಪಯುಕ್ತವಾಗುತ್ತವೆ. ವೇದವು ಸಹ 'ಆಗಮ' ಎಂದೇ ಅಲ್ಲಲ್ಲಿ ಪ್ರಯೋಗಗಳಿವೆ. 'ನಿಗಮಾ ಗಮಗಳು', 'ವೇದಾಗಮ' ಶಬ್ದಗಳು ಪರ್ಯಾಯ ಪದಗಳು.

"ತಂತ್ರ" ಶಬ್ದವೂ ಕೂಡ 'ಆಗಮ' ಪದಕ್ಕೆ ಪರ್ಯಾಯಪದ. ಸೂಕ್ಷ್ಮ ತಂತ್ರವಲ್ಲಿ 'ಶ್ರುತಿ ತಂತ್ರ' ಎಂದು ಹೇಳಲಾಗಿದೆ. 'ತನ್ಯತೇ ವಿಸ್ತಾರ್ಯತೇ, ಜ್ಞಾನಂ ಅನೇನ' ಎಂದರೆ ತಂತ್ರದಿಂದ ಮಾನವನ ಜ್ಞಾನವು ವಿಕಾಸವಾಗುತ್ತದೆ ; ಅದರಿಂದ ಮಾನವನ ಉದ್ಧಾರ ಎಂದು ಸ್ಪಷ್ಟವಾಗುತ್ತದೆ. [1] "ಮಂತ್ರ– ತಂತ್ರಗಳಿಂದ ಕೂಡಿದ ವಿಪುಲವಾದ ಅರ್ಥಗಳನ್ನು ಬಿತ್ತರಿಸಿ, ಮಾನವನನ್ನು ಕಷ್ಟಗಳ

---

[1] ತನೋತಿ ವಿಪುಲಾನರ್ಥಾನ್ ಮಂತ್ರತಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಕಡಲಿನಿಂದ ದಾಟಿಸುವುದಕ್ಕೆ 'ತಂತ್ರ'ವೆಂದು ಹೆಸರು. ಮಂತ್ರತಂತ್ರಗಳಿಂದ ಕೂಡಿದ ಅರ್ಥವನ್ನು ನಿರೂಪಿಸುವುದರ ಮೂಲಕ ಮಾನವನನ್ನು ಉದ್ಧರಿಸುತ್ತದೆ; ಎಂಬ ಅನ್ವರ್ಥಕವಾದ ಅರ್ಥವನ್ನು ಒಳಗೊಂಡಿದೆ ತಂತ್ರಶಬ್ದ.

**ವೇದಾಗಮಗಳಿಗೆ ಸಮಪ್ರಮಾಣ್ಯ**

"ಆಗಮವೂ ಆಪ್ತವಚನ" ಎಂಬ ಪೌಷ್ಕರಾಗಮದ ಉಕ್ತಿಯಂತೆ ಆಗಮಗಳಿಗೂ ಕೂಡ ವೇದದಂತೆ 'ಆಪ್ತವಚನ' ಎಂಬುದು ಉಚಿತವೇ. ಮನುಸ್ಮೃತಿಯ ವ್ಯಾಖ್ಯಾನಕಾರನಾದ ಕುಲ್ಲೂಕ ಭಟ್ಟನು "ಶ್ರುತಿಯು ವೈದಿಕ ಮತ್ತು ತಾಂತ್ರಿಕ" ಎಂದು ಎರಡುವಿಧ ಎಂದಿದ್ದಾನೆ. ಇದರಿಂದ ವೇದಾಗಮಗಳೆರಡೂ 'ಶ್ರುತಿ' ಎಂದೇ ಹೇಳಲ್ಪಟ್ಟವೆ. ಶ್ರೀಪತಿಪಂಡಿತಾರಾಧ್ಯರು ತಮ್ಮ ಸೂತ್ರ ಭಾಷ್ಯದ ಶಾಸ್ತ್ರಯೋನಿತ್ವಾಧಿಕರಣದಲ್ಲಿ–

"ಬ್ರಹ್ಮಪಥದಲ್ಲಿರುವ ಈ ಹದಿನೆಂಟು ವಿದ್ಯೆಗಳ [1] ಆದಿಕರ್ತನು ಸಾಕ್ಷಾತ್ ಶೂಲಪಾಣಿ ಶಿವನೇ. ಪರಮಾತ್ಮನಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶಾಶಕ್ತಿಯೇ ಎಲ್ಲ ತತ್ತ್ವಗಳನ್ನು ಬೆಳಗುವ ನಿಗಮಾಗಮ ರೂಪು ತಳೆದಿದೆ." [2]

ಇದರಂತೆ ಸರ್ವತ್ರ ಪ್ರಸಿದ್ಧ್ಯಧಿಕರಣದಲ್ಲಿಯೂ ಕೂಡ– ಏಕಕರ್ತೃತ್ವ ಮತ್ತು ವೇದ ಮೂಲತ್ವವಿರುವುದರಿಂದ ಕಾಮಿಕಾದಿಶಿವಾಗಮಗಳಿಗೆ ವೇದಪ್ರಾಮಾಣ್ಯವಿರುವುದರಿಂದ ವೇದಾಗಮ ಗಳೆರಡೂ ಪ್ರತಿಪಾದಿಸಿರುವ ಶೈವಮತವು ವೈದಿಕವೇ. ಸಿದ್ಧಾಂತಶಿಖಾಮಣಿಯಲ್ಲಿ– ಎಲೈ ! ಮಹಾ ಮುನಿಯೆ ! ಸಾಂಖ್ಯಾದಿದರ್ಶನಗಳೆಲ್ಲದರಲ್ಲಿಯೂ ವೇದವೇ ಮುಖ್ಯವಾದದ್ದು. ವೇದವನ್ನು ಅನು ಸರಿಸಿರುವುದರಿಂದ ಇವೂ ಪ್ರಮಾಣವೆನಿಸಿವೆ. ಪಾಂಚರಾತ್ರ, ಸಾಂಖ್ಯ, ಯೋಗ ಇವುಗಳು ವೇದದ ಒಂದೊಂದು ಭಾಗವನ್ನು ಅನುಸರಿಸಿವೆ. ಶೈವವು ಮಾತ್ರ ವೇದಮಯವಾಗಿದೆ. ವೇದೈಕದೇಶ ವೆನಿಸಿರುವ ಸಾಂಖ್ಯಾದಿಗಳಿಗಿಂತ ವೇದಸಮ್ಮತವಾದ ಶೈವತಂತ್ರವು ವಿಶಿಷ್ಟವಾದದ್ದು.

---

[1] ವೇದಗಳು ನಾಲ್ಕು– ಋಕ್, ಯಜುಸ್, ಸಾಮ ಮತ್ತು ಅಥರ್ವ. ವೇದಾಂಗಗಳು ಆರು– ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ ಮತ್ತು ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ, ಆಯುರ್ವೇದ, ಧನುರ್ವೇದ, ಗಾಂಧರ್ವ ಮತ್ತು ಅರ್ಥಶಾಸ್ತ್ರ ಇವಿಷ್ಟೂ ಹದಿನೆಂಟು ವಿದ್ಯೆಗಳು.

[2] ಅಷ್ಟಾದಶಾನಾಮೇತಾಸಾಂ ವಿದ್ಯಾನಾಂ ಬ್ರಹ್ಮವರ್ತ್ಮನಾಮ್ ।
ಆದಿಕರ್ತಾ ಶಿವಃ ಸಾಕ್ಷಾತ್ ಶೂಲಪಾಣಿರಿತಿ ಸ್ಮೃತಿಃ ॥

ವಿಮರ್ಶರೂಪಿಣೀ ಶಕ್ತಿಶ್ಶಿವಸ್ಯ ಪರಮಾತ್ಮನಃ !
ನಿಗಮಾಗಮರೂಪಾಸ್ಯಾತ್ ಸರ್ವತತ್ತ್ವಪ್ರಕಾಶನೀ ॥

[ಶ್ರೀಕರಭಾಷ್ಯ.ಸಂಪು.೧ ಪು.೭೦]

"ಸಿದ್ಧಾಂತ" ಎಂಬ ಶೈವತಂತ್ರವು ಶಿವೋಕ್ತವೂ ಎಲ್ಲ ವೇದಾರ್ಥವನ್ನು ಒಳಗೊಂಡಿರುವುದೂ ಆಗಿರುವುದರಿಂದ ಇದು ವೇದದಷ್ಟೇ ಪ್ರಮಾಣ ; ಎಂದು ಹೇಳಿದೆ. "ವೇದ ಮೂಲವಾದ ಶೈವಾಗಮಗಳಿಗೆ ಪ್ರಾಮಾಣ್ಯವನ್ನು ಪ್ರತಿಪಾದಿಸಿ, ವೇದೋಪನಿಷತ್ತುಗಳಲ್ಲಿ ಹೇಳಿರುವ ಮಂತ್ರಾನುಷ್ಠಾನಕ್ಕೆ ಅಂಗವಾಗಿರುವ ಅಂಗನ್ಯಾಸ ಮೊದಲಾದುವನ್ನು ನಿರ್ದೇಶಿಸಿರುವುದರಿಂದಲೂ ಕೂಡ ಆಗಮಗಳು ಪ್ರಾಮಾಣಿಕವಾಗಿವೆ. [1]

"ಮೇಲಾಗಿ ಮುಂಡಕ, ಮಾಂಡೂಕ್ಯ, ಛಾಂದೋಗ್ಯ, ಬೃಹದಾರಣ್ಯಕ, ಕಠವಲ್ಲಿ ಮೊದಲಾದ ಎಲ್ಲ ಉಪನಿಷತ್ತುಗಳಲ್ಲಿ ಸಿದ್ಧವಾದ ಜೀವ-ಬ್ರಹ್ಮೈಕ್ಯವನ್ನು ಸ್ಥಾಪಿಸುವುದರಿಂದ, ಷಡಕ್ಷರ, ತ್ರ್ಯಯಂಬಕ, ಗಾಯತ್ರೀ ಮುಂತಾದ ಎಲ್ಲ ಮಂತ್ರಗಳ ಕರಾಂಗನ್ಯಾಸಾದಿ-ಧ್ಯಾನ ವಿಧಾಯಕವಾದ್ದರಿಂದಲೂ, ಗೌತಮ-ಭರದ್ವಾಜ-ಶೌನಕಾದಿಯಾದ ಆಚಾರವಿಷಯಕಕರ್ಷಣಾದಿ ಪ್ರತಿಷ್ಠಾಂತ-ಉತ್ಸವಾದಿವಿಧಾಯಕವಾದ್ದರಿಂದಲೂ, ಐಶ್ವರ್ಯಕ್ಕಾಗಿ ಹಿಗ್ಗಬಾರದು ; (ಭೂತ್ಯೈನ ಪ್ರಮದಿತವ್ಯಂ) "ಅಗ್ನಿರಿತಿ ಭಸ್ಮ" ಮುಂತಾದ ಯಜುರಾಥರ್ವಣಬೃಹಜ್ಜಾಬಾಲ-ಕಾಲಾಗ್ನಿರುದ್ರ-ಉಪನಿಷದಾದಿ-ಪ್ರತಿಪಾದಿತ ವಿಭೂತಿ-ರುದ್ರಾಕ್ಷಧಾರಣ-ವಿಧಾಯಕವಾದುದರಿಂದಲೂ, ಯಜುರಾರಣ್ಯಕದಲ್ಲಿರುವ ಸದ್ಯೋಜಾತಾದಿಮಂತ್ರಪ್ರತಿಪಾದಕವಾದುದರಿಂದಲೂ, 'ಅಧ್ವನಾಮಧ್ವಪತೇ ಶ್ರೇಷ್ಠಸ್ಯಾಧ್ವನಃ ಪಾರಮಸಿ' ಎಂದು ಸಿದ್ಧವರ್ಣ-ಪದ-ಮಂತ್ರ-ಕಲಾ-ಭುವನ-ತತ್ವಾತ್ಮಕ ಷಡಧ್ವಪ್ರತಿಪಾದಕವಾದ್ದರಿಂದಲೂ, 'ಯಾ ತೇ ರುದ್ರ' 'ಯಶ್ಛಂದಸಾಮೃಷಭೋ' "ಸೋಮಾರುದ್ರಾ" ಮುಂತಾದ ಶ್ರುತಿಸಿದ್ಧಲಿಂಗಧಾರಣಾದಿವಿಧಾಯಕವಾದ್ದರಿಂದಲೂ, 'ಅರ್ಚತ ಪ್ರಾರ್ಚತ' 'ತಮುಷ್ಟುಹಿ' ಮಂತ್ರಬೋಧಿತಪೂಜಾವಿಧಾಯಕವಾದ್ದರಿಂದಲೂ, ಶ್ರುತ್ಯಾಗಮಗಳಿಗೆ ಸಮಾನವಾದ ಅರ್ಥವಿರುವುದರಿಂದಲೂ ಆಗಮಗಳಿಗೆ ಸಾಕ್ಷಾತ್ ವೈದಿಕತ್ವವು ಸಿದ್ಧವಾಗುತ್ತದೆ. [2]

ಶ್ರೀಕಂಠಭಾಷ್ಯದಲ್ಲಿಯೂ ಕೂಡ–

"ನಮಗಂತೂ ವೇದಾಗಮಗಳಿಗೆ ಭೇದವೇ ಕಾಣುವುದಿಲ್ಲ" ಬ್ರಹ್ಮಪ್ರಣವ– ಪಂಚಾಕ್ಷರೀ–ಪ್ರಸಾದಾದಿ ಮಂತ್ರಗಳಿಗೆ ಪಶು-ಪತಿ-ಪಾಶಾದಿವಸ್ತುವ್ಯವಹಾರಗಳಿಗೆ, ಭಸ್ಮೋದ್ಧೂಲನ-ತ್ರಿಪುಂಡ್ರ ಧಾರಣ-ಲಿಂಗಾರ್ಚನ-ರುದ್ರಾಕ್ಷಧಾರಣಾದಿಪರಧರ್ಮಗಳಿಗೆ ಮತ್ತು ಬೇರೆ ಎಲ್ಲ ವ್ಯವಹಾರಗಳಿಗೆ ಎರಡೂ ವೇದಾಗಮಗಳಿಗೆ ಸಮಪ್ರಮಾಣವಾಗಿರುವುದರಿಂದ ವೇದಾಗಮಗಳೆರಡೂ ಪ್ರಮಾಣ ಭೂತಗಳೇ !" [3]

---

[1] ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಮ್ ॥
ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯಚ ಮಹಾಮುನೇ ।
ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಮತಮ್ ॥
ವೇದೈಕದೇಶವರ್ತಿಭ್ಯಃ ಸಾಂಖ್ಯಾದಿಭ್ಯೋ ಮಹಾಮುನೇ ।
ಸರ್ವವೇದಾನುಸಾರಿತ್ವಾತ್ ಶೈವತಂತ್ರಂ ವಿಶಿಷ್ಯತೇ ॥
ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಮ್ ।
ಸರ್ವವೇದಾರ್ಥರೂಪತ್ವಾತ್ ಪ್ರಮಾಣಂ ವೇದವತ್ತದಾ ॥

(– ಸಿ.ಶಿ.ಮಣಿ.೪.ಪ.೫.)

[2] ಶ್ರೀಕರಭಾಷ್ಯ ೩.೧.ಪಾ.೨.ಪು.೧೮೩-೧೮೪.

[3] ಶ್ರೀಕಂಠಭಾಷ್ಯ ೨.೨.೩೭ ಪು.೧೫೬.

ತಿರುಮೂಲರ್ (ಕ್ರಿ. ಶ. ೬೦೦) ಮಹಾಶಯನು ಕೂಡ 'ತಿರುಮಂದಿರಂ' ಎಂಬ ದ್ರಾವಿಡ ಪ್ರಬಂಧದಲ್ಲಿ ವೇದಾಗಮಗಳಿಗೆ ಸಮಪ್ರಾಮಾಣ್ಯವನ್ನು ಪ್ರತಿಪಾದಿಸಿ, ವೀರಾಗಮ ಪ್ರತಿಪಾದಿತವಾದ ವೀರಮಾಹೇಶ್ವರಮತದಲ್ಲಿ ಹೇಳಿರುವ "ಷಟ್‌ಸ್ಥಲಸಿದ್ಧಾಂತ"ವನ್ನು ಸೂಚಿಸಿದ್ದಾನೆ. ಡಾ|| ರಮಣ ಶಾಸ್ತ್ರಿಗಳು "ಶೈವಮತವನ್ನು ಆಗಮಾಂತ" ಎಂದಿದ್ದಾರೆ. ಸರ್‌ಜಾನ್ ಉಡ್‌ರಾಫ್ ಮಹಾಶಯನು "ಶಕ್ತಿ-ಶಾಕ್ತ" ಎಂಬ ತನ್ನ ಗ್ರಂಥದಲ್ಲಿ 'ವೇದವಿಷಯಕವಾದ ಕೆಲವು ದುರಭಿಪ್ರಾಯಗಳು ಆಗಮಗಳಿಂದ ನಿರ್ಮೂಲವಾದವು.' ಎಂದನು. ಭಾರತಮಹಾರಾಷ್ಟ್ರದ ಮಾಜಿ ಅಧ್ಯಕ್ಷರಾಗಿದ್ದ ದಿ|| ಡಾ|| ಎಸ್. ರಾಧಾಕೃಷ್ಣನ್ ಮಹನೀಯನು "ವಿವೇಕಿಗಳಾದ ನಮ್ಮ ಪೂರ್ವಜರು ವೇದಾಗಮಗಳನ್ನು ಬೆಸೆದಿದ್ದಾರೆ." ಎಂದು ಅರ್ಥಪೂರ್ಣವಾಗಿ ಹೇಳಿದ್ದಾರೆ.[1]

**ಆಗಮ ವಿಭಾಗಗಳು–**

ಶಿವನು "ಆಗಮಗಳು ಅನೇಕ" ಎಂದು ಪ್ರಾರಂಭಿಸಿ, "ಶೈವ, ಪಾಶುಪತ, ಸೋಮ, ಲಾಕುಳ ಎಂದು ಅನೇಕ ವಿಭಾಗಗಳಿವೆ," ಎಂದಿದ್ದಾನೆ. ಅವುಗಳಲ್ಲಿ ಶೈವವು ನಾಲ್ಕು ಬಗೆ. ಅದಾಗಿ: ಕ್ರಮವಾಗಿ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂದು. ವಾಮವು ಶಕ್ತಿಪ್ರಧಾನ ; ಭೈರವಾತ್ಮಕವಾದದ್ದು ದಕ್ಷಿಣ; ಮಿಶ್ರವು ಸಪ್ತಮಾತೃಪರ; ವೇದಸಮ್ಮತವಾದದ್ದು ಸಿದ್ಧಾಂತ. "ಸಿದ್ಧಾಂತ" ಎಂಬ ಶಿವಾಗಮವು ವೇದಧರ್ಮವನ್ನು ಹೇಳುವುದರಿಂದಲೂ ವೇದಬಾಹ್ಯವಾದವುಗಳನ್ನು ವಿರೋಧಿಸುವುದರಿಂದಲೂ ಇದು ವೇದಸಮ್ಮತ." ಎಂದಿದ್ದಾನೆ. ಇವೇ ಮುಂತಾಗಿ ಎಲ್ಲ ನಾಸ್ತಿಕ ಮತ್ತು ಆಸ್ತಿಕ ಆಗಮಗಳನ್ನು ಉಲ್ಲೇಖಿಸಲಾಗಿದೆ. ಇದರಂತೆ ಸೌರ, ಗಾಣಾಪತ್ಯ ಮುಂತಾದ ತಂತ್ರಗಳೂ ಇವೆ. ಒಟ್ಟಿನಲ್ಲಿ ಪಾಂಚರಾತ್ರಾಗಮಗಳು ೧೦೮, ಶಾಕ್ತಾಗಮಗಳು ೬೪, ಉಪತಂತ್ರಗಳು ೩೨೭, ಶೈವ ತಂತ್ರಗಳು ೨೮, ಉಪತಂತ್ರಗಳು ೧೨೭, ವೈಷ್ಣವ ತಂತ್ರಗಳು ೭೫, ಉಪತಂತ್ರಗಳು ೨೦೫ ಎಂದು ಹೇಳಲಾಗಿದೆ.[2]

**ಆಗಮಗಳ ಕಾಲ–**

ಆಗಮ ಸಂಸ್ಕೃತಿಕಾಲನಿರ್ಣಯ ಮಾಡುವಾಗಲೂ ಸಿಂಧೂಕಣಿವೆ ಹರಪ್ಪಾ-ಮೊಹೆಂಜೋದಾರೊ ಭೂಮಿಯ ಅಗೆತದಲ್ಲಿ ದೊರೆತ ಪ್ರಾಗೈತಿಹಾಸಿಕ ಸಂಸ್ಕೃತಿಯನ್ನು ಸೂಚಿಸುವ ವಸ್ತುಗಳನ್ನು

---

[1] ಇಂಡಿಯನ್ ಫಿಲಾಸಫಿ ; ದಿವಂಗತ ಡಾ|| ರಾಧಾಕೃಷ್ಣನ್. ಭಾಗ– ೨.

[2] ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪಾತಂ ಸೋಮಂ ಲಾಕುಳಂ ಚೇತಿ ಭೇದತಃ ॥
ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಮ್ ।
ವಾಮಂ ಚ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತ ಸಂಜ್ಞಿಕಮ್ ॥
ಶಕ್ತಿಪ್ರಧಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಮ್ ।
ಸಪ್ತಮಾತೃಪರಂ ಮಿಶ್ರಂ ಸಿದ್ಧಾಂತಂ ವೇದಸಮ್ಮತಮ್ ॥
ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ ।
ವೇದಬಾಹ್ಯವಿರೋಧಿತ್ವಾತ್ ವೇದಸಮ್ಮತ ಉಚ್ಯತೇ ॥

–ಸಿ.ಶಿ.ಪ.೫

ಪರಿಶೀಲಿಸಬೇಕಾಗುತ್ತದೆ. ಇದರಿಂದ ಶೈವಾಗಮ ಪರಂಪರೆಯು ಇಂದಿಗೆ ಸುಮಾರು ಐದುಸಾವಿರ ವರ್ಷಗಳಷ್ಟು ಹಿಂದಿನದೆಂದು ತಿಳಿದುಬರುತ್ತದೆ. ಆಗಮಗಳ ಭಾಷೆ, ಶೈಲಿ ಮುಂತಾದುವನ್ನು ಮತ್ತು ಅವುಗಳಲ್ಲಿರುವ ಆಚಾರ- ವಿಚಾರಗಳನ್ನು ಪರಿಶೀಲಿಸಿದಲ್ಲಿ 'ಆಗಮಗಳು ಈಚಿನವು' ಎಂದು ಸ್ಪಷ್ಟವಾಗುತ್ತದೆಯಾದರೂ ಆಗಮಿಕ ಸಂಸ್ಕೃತಿಯು ಪ್ರಾಚೀನ. ಏಕೆಂದರೆ ಪಾಂಚರಾತ್ರಾಗಮೋಕ್ತವಾದ ಪೂಜಾಪದ್ಧತಿಯು ಕ್ರಿ. ಪೂ. ಎರಡನೆಯ ಶತಮಾನದ್ದೆಂದು ತಿಳಿದು ಬಂದಿರುವ **ಮಹಾಭಾರತ** ಶಾಂತಿಪರ್ವದಲ್ಲಿ ೩೫೭ನೆಯ ಅಧ್ಯಾಯದಲ್ಲಿ ಉಕ್ತವಾಗಿದೆ. ಕ್ರಿ. ಪೂ. ೫೦೦ ವರ್ಷಗಳಷ್ಟು ಹಿಂದಿನದೆಂದು ತಿಳಿದುಬಂದಿರುವ ಭಗವದ್ಗೀತೆಯಲ್ಲಿ ಪಾಂಚರಾತ್ರಾಗಮೋಕ್ತವಾದ ವಾಸುದೇವಮಹತ್ವವು ಹೇಳಿದೆ. ಪಾಂಚರಾತ್ರರಿಗೆ **"ಸಾತ್ವತ"** ಎಂಬ ಸಂಜ್ಞೆಯು ಐತರೇಯ ಮತ್ತು ಶತಪಥ ಬ್ರಾಹ್ಮಣಗಳಲ್ಲಿ ಉಕ್ತವಾಗಿದೆ. ಮೇಲಾಗಿ ಭಗವದ್ಗೀತೆಯಲ್ಲಿ ಶಿವಾಗಮಗಳಲ್ಲಿ ಹೇಳಿರುವ ಅನೇಕ ವಿಷಯಗಳು ಯಥಾಶ್ರುತವಾಗಿ ಉಕ್ತವಾಗಿವೆ. ಇವೇ ಮುಂತಾದ ಕಾರಣಗಳಿಂದ ಪಾಂಚರಾತ್ರಾಗಮಗಳು ಕ್ರಿ. ಪೂ. ಹದಿನಾಲ್ಕು ಶತಕಗಳಿಗಿಂತಲೂ ಹಿಂದಿನವು ಎಂದು ಕಂಡುಬಂದಿದೆ.[1] ಡಾ|| ಎಸ್. ಸಿ. ನಂದೀಮಠ ಅವರು "ಪಾಂಚರಾತ್ರಾಗಮಗಳಲ್ಲಿ ಶೈವಾಗಮಗಳ ಪ್ರಸ್ತಾಪವಿದೆ. ಆದರೆ ವೈಷ್ಣವಾಗಮಗಳ ಉಲ್ಲೇಖವು ಶೈವಾಗಮಗಳಲ್ಲಿ ಇಲ್ಲ. ಆದ್ದರಿಂದ ಶೈವಾಗಮಗಳು ವೈಷ್ಣವಾಗಮಗಳಿಗಿಂತ ಪ್ರಾಚೀನ."[2] ಎಂದಿದ್ದಾರೆ. ಆದ್ದರಿಂದಲೇ "ಶೈವಾಗಮಗಳು ಕನಿಷ್ಠ ೨೦೦೦ಎರಡು ಸಾವಿರ ವರ್ಷಗಳಿಗಿಂತ ಹಿಂದಿನವು ; ಎಂಬುದು ವಿದ್ವಾಂಸರ ಅಭಿಪ್ರಾಯ.[3] ಕ್ರಿ. ಶ. ೫ನೆಯ ಶತಮಾನದ ಕಂಚಿಶಾಸನಗಳಲ್ಲಿ ೨೮ ಶಿವಾಗಮಗಳ ಉಲ್ಲೇಖವಿದೆ.[4]

**ಕಂಚಿಯ ಶಿಲಾಶಾಸನಗಳಲ್ಲಿ ಶಿವಲಿಂಗಧಾರಣ ಮಾಡಿದ್ದ ರಾಜರ ಪ್ರಸ್ತಾಪ**

ಕ್ರಿ. ಶ. ದ ತರುವಾಯ ಮೊದಲ ಶತಮಾನದಲ್ಲಿಯೇ ಮಹಾಮಾಹೇಶ್ವರಜಂಗಮ ಪುಂಗವರಾದ ಶೈವಾಚಾರ್ಯರ ಮಠವು ಶ್ರೀಶೈಲ ಮಹಾಕ್ಷೇತ್ರದಲ್ಲಿತ್ತು ; ಎಂದು ವಿದ್ವಾಂಸರು ಹೇಳುತ್ತಾರೆ.[5] ಕ್ರಿ. ಶ. ೧೫೦ರಲ್ಲಿ ಶಿವಭಕ್ತಾಗ್ರೇಸರರಾದ **"ಭಾರಶಿವ"** ವಂಶದ ರಾಜರು ಶಿವಲಿಂಗವನ್ನು ಧರಿಸುತ್ತಿದ್ದರು ; ಏಕೆಂದರೆ ಆಗಿನ ಶಿಲಾಶಾಸನಗಳಲ್ಲಿ **"ಅಂಸಭಾರಸನ್ನಿವೇಶಿತಶಿವಲಿಂಗೋದ್ವಹನಶಿವಪರಿತುಷ್ಟಸಮುತ್ಪಾದಿತರಾಜವಂಶ್ಯಾನಾಂ"**[6] ಮುಂತಾದ ಉಲ್ಲೇಖಗಳಿವೆ.

---

[1] ಸಂಸ್ಕೃತವಾಙ್ಮಯ ಚರಿತ್ರಮು- ಮಲ್ಲಾದಿ ಸೂರ್ಯನಾರಾಯಣಶಾಸ್ತ್ರಿವಿರಚಿತ ಪು.೭೧.

[2] ಶಿವಾನುಭವ, ತ್ರೈಮಾಸಿಕ- ಸಂ.೬.ಸಂ.೧. ಎಪ್ರಿಲ್ ೧೯೫೧ ವಿಜಾಪುರ.

[3] ವಚನಶಾಸ್ತ್ರ ರಹಸ್ಯ (ಪು.೨೮-೨೯- ಶ್ರೀರಂಗನಾಥ ದಿವಾಕರರಾಯ ವಿರಚಿತ)

[4] ದಿ|| ಎಸ್. ರಾಧಾಕೃಷ್ಣನ್ ವಿರಚಿತ "ಇಂಡಿಯನ್ ಫಿಲಾಸಫಿ ಭಾ. II.

[5] ಡಾ|| ಚಿಲಕೂರಿ ನಾರಾಯಣರಾವ್ ಸಂಪಾದಿತ ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತ್ರಮು- ಉಪೋದ್ಘಾತ ಪು.೫೪೪

[6] "ವೀರಶೈವ ಉಗಮ ಮತ್ತು ಪ್ರಗತಿ" ಪು. ೪೧. ನಿವೃತ್ತ ಮೈಸೂರು ಮುಖ್ಯನ್ಯಾಯಮೂರ್ತಿ, ವಿದ್ಯಾವಾಚಸ್ಪತಿ ಶ್ರೀ ಟಿ. ಎನ್. ಮಲ್ಲಪ್ಪ ವಿರಚಿತ.

ಎರಡನೆಯದಾಗಿ ಕ್ರಿ. ಶ. ಐದು ಮತ್ತು ಆರನೆಯ ಶತಮಾನಗಳಲ್ಲಿ ಕಂಚಿ ರಾಜ್ಯವನ್ನಾಳುತ್ತಿದ್ದ ಪಲ್ಲವರಾಜನ್ಯರು ಮಹಾಶಿವಭಕ್ತರೂ, ಲಿಂಗಧಾರಿಗಳೂ ಆಗಿದ್ದರೆಂಬ ಬಗೆಗೆ ಶಾಸನಗಳು ಉಲ್ಲೇಖಿಸಿವೆ. ಪರಮ ಶಿವಭಕ್ತರಾದ ಇವರಲ್ಲಿ **ಅತ್ಯಂತಕಾಮ, ಗುಣಭರ, ರಾಜಸಿಂಹ** ಮುಂತಾದವರು ವಿಧ್ಯುಕ್ತವಾಗಿ ಶಿವದೀಕ್ಷೆ ಪಡೆದು ತಮ್ಮ ಉತ್ತಮಾಂಗದಲ್ಲಿ ಶಿವಲಿಂಗಧಾರಣ ಮಾಡಿಕೊಂಡಿದ್ದರು ; ಎಂಬುದು ಅಂದಿನ ಶಾಸನಗಳ ಅವಲೋಕನದಿಂದ ತಿಳಿದುಬರುತ್ತದೆ.

"ಶ್ರೀಮತೋಽತ್ಯಂತಕಾಮಸ್ಯ ದ್ವಿಷದ್ದರ್ಪಾಪಹಾರಿಣಃ ।
ಶ್ರೀನಿಧೇಃ ಕಾಮರಾಗಸ್ಯ ಹರಾರಾಧನಸಂಗಿನಃ ॥ ೮ ॥ [1]

ಎಂದರೆ ಅತ್ಯಂತಕಾಮರಾಜನು ಶತ್ರುಗಳ ದರ್ಪವನ್ನು ಅಪಹರಿಸುವವನೂ ಶ್ರೀನಿಧಿಯೂ ಆಗಿದ್ದನು. ಆತ **"ಹರಾರಾಧನಸಂಗಿ"** ಎಂದು ಉಕ್ತನಾಗಿದ್ದಾನೆ.

"ಅಭಿಷೇಕಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ ।
ಆಸ್ತೇ ವಿಶಾಲಸುಮುಖಃ ಶಿರಸ್ಸರಸಿ ಶಂಕರಃ" ॥ ೯ ॥

ಎಂದರೆ ಆ ರಾಜನು ತನ್ನ ಶಿರಸ್ಸಿನಲ್ಲಿ ಶಿವಲಿಂಗವನ್ನು ಧರಿಸಿದ್ದನು. ರಾಜನ ಶಿರಸ್ಸೆಂಬ ಸರೋವರದಲ್ಲಿ **"ಶಂಕರ"** (ಶಂಕರ-ಶಿವ ಮತ್ತು ಶಂಖ) ಎಂದರೆ ಶಂಖದಂತೆ ಇರುವ ಶಿವ (ಲಿಂಗರೂಪದಿಂದ) ನಿರುವನು ; ಎಂದು ಶ್ಲೇಷಮರ್ಯಾದೆಯಿಂದ ವರ್ಣಿಸಲಾಗಿದೆ. ಡಾ॥ ಹುಲ್ಷ್ ಅವರು "Siva Abides on the head of "Atyantakama" Means the Same as "he bears Siva on this head" (Verse 3)Viz "He is a dvotee of Siva" ಎಂದು ಉಲ್ಲೇಖಿಸಿದ್ದಾರೆ.

ವಿದಿತ ಬಹುನಯಃ ಶೈವಸಿದ್ಧಾಂತಮಾರ್ಗಃ............ ।
ಶ್ರೀಮಾನತ್ಯಂತಕಾಮಃ............ ॥

ಅದೇ ಸಂಪುಟದಲ್ಲಿ ೩೩, ೩೪ ನೆಯ ಶಾಸನಗಳಿಂದ **ಗುಣಭರ** ಮಹಾರಾಜನೂ ಕೂಡ ಲಿಂಗಧಾರಿಯಾಗಿದ್ದನೆಂದು ತಿಳಿದುಬರುತ್ತದೆ.

ನಂ. 33. ಗುಣಭರನಾಮನಿ ರಾಜನ್ಯನೇನ ಲಿಂಗೇನ ಲಿಂಗಿನಿ ಜ್ಞಾನಮ್ ।
ಪ್ರಥತಾಂ ಚಿರಾಯ ಲೋಕೇ ವಿಪಕ್ಷವೃತ್ತೇಃ ಪರಾವೃತ್ತಮ್ ॥

ಈ ಶ್ಲೋಕವು **"ಪರ್ವತೋ ವಹ್ನಿಮಾನ್ ಧೂಮಾತ್"** ಎಂಬ ತರ್ಕಶಾಸ್ತ್ರಮರ್ಯಾದೆಯನ್ನು ಅನುಸರಿಸಿ ಬರೆಯಲ್ಪಟ್ಟಿದೆ. ಧೂಮವೆಂಬ ಲಿಂಗ (ಹೇತು– ಕಾರಣ) ದಿಂದ ವಹ್ನಿ ಎಂಬ ಲಿಂಗಿ (ಪರ್ವತ)ಯಲ್ಲಿ ಆಗುವ ಜ್ಞಾನವು "ವಿಪಕ್ಷವೃತ್ತಿ" ಎಂದರೆ ಪರ್ವತೇತರಸ್ಥಾನವೃತ್ತಿತ್ವದಿಂದ ನಿವೃತ್ತವಾಗುವಂತೆ ಲಿಂಗಧಾರಿಯಾಗಿರುವ ಗುಣಭರರಾಜನಲ್ಲಿ ಶಿವಲಿಂಗಸಂಬಂಧದಿಂದ ಉಂಟಾಗಿರುವ ಶಿವಜ್ಞಾನವು ಶಿವೇತರದೇವತಾಸಂಬಂಧದಿಂದ ದೂರವಾಗಿ ಲೋಕದಲ್ಲಿ ಬಹುಕಾಲ ಪ್ರಖ್ಯಾತವಾಗಿರಲಿ." ಎಂದು ಸೂಚಿಸಲಾಗಿದೆ.

ನಂ. 34 ನಿರ್ಮಾಪಿತಾಮಿತಿಮುದಾ ಪುರುಷೋತ್ತಮೇನ
ಶೈಲೀಂ ಹರಸ್ಯ ತನುಮಪ್ರತಿಮಾಮನೇನ ।
ಕೃತ್ವಾ ಶಿವಂ ಶಿರಸಿ ಧಾರಯತಾತ್ಮಸಂಸ್ಥ-
ಮುಚ್ಚೈಃ ಶಿರಸ್ತ್ವಮಚಲಸ್ಯ ಕೃತಂ ಕೃತಾರ್ಥಮ್ ॥ ಎಂದರೆ–

---

[1] South Indian Inscriptions. VOL. I No. 18 (1890)

"ಶಿವಲಿಂಗವನ್ನು ಶಿರಸ್ಸಿನಲ್ಲಿ ಧರಿಸಿರುವ ಗುಣಭರ ರಾಜಶ್ರೇಷ್ಠನು ಶಿವಲಿಂಗಮೂರ್ತಿಯನ್ನು ಪರ್ವತಾಗ್ರದಲ್ಲಿ ಸಂತೋಷದಿಂದ ಸ್ಥಾಪಿಸಿ, ಆ ಉನ್ನತ-ಪರ್ವತಶಿಖರವನ್ನು ಕೃತಾರ್ಥವನ್ನಾಗಿ ಮಾಡಿದನು." ಎಂದು ಅರ್ಥ. ಈ ಪದ್ಯದಲ್ಲಿನ "ಶಿವಂ ಶಿರಸಿ ಧಾರಯತಾ" "ಲಿಂಗಿನಿ" ಎಂಬ ಪದಗಳು ಈತ "ಶಿರೋಲಿಂಗಧಾರಿ" ಎಂಬುದನ್ನು ಸ್ಪಷ್ಟಪಡಿಸುತ್ತವೆ. ಇದರಂತೆ "ಶಿವಚೂಡಾಮಣಿಃ" (ನಂ. ೩೪) "ವೃಷಭಲಾಂಛನಃ" "ಆಗಮಪ್ರಮಾಣಃ" "ಆಗಮಾನುಸಾರೀ" ಮುಂತಾದ ವಿಶೇಷಣಗಳು ಅವರು ಪರಮಶಿವಭಕ್ತರಾಗಿದ್ದರೆಂಬುದನ್ನು ಸಾರುತ್ತವೆ.

ಮದರಾಸು ರಾಜ್ಯದ ಚಂಗಲಪೇಟೆ ಜಿಲ್ಲೆಯ ವಾಯಲೂರ ಗ್ರಾಮದಲ್ಲಿ ದೊರೆತಿರುವ ಮತ್ತೊಂದು ಶಾಸನದಲ್ಲಿ (೧೯೦೪) ರಾಜಸಿಂಹರಾಜನ ವಂಶೀಯರಾದ ರಾಜರ ೫೪ ಹೆಸರುಗಳಿವೆ. ಈ ಶಾಸನದ ಕಡೆಯಲ್ಲಿರುವ ಪದ್ಯವಿದು–

ಶ್ರೀ ಪಲ್ಲವಾನ್ವಯ ಕುಲಾಚಲರಾಜಸಿಂಹೋ
 ಯಃ ಕ್ಷತ್ರಸಿಂಹ ಇತಿ ವಿಶ್ರುತ ಪುಣ್ಯಕೀರ್ತಿಃ ।
ಜೀಯಾನ್ಮಹೇಶ್ವರಶಿಖಾಮಣಿದೀಪ್ತಮೌಲಿಃ
 ಯುದ್ಧಾರ್ಜುನಸ್ಸ ಸ ಖಲು ಲೋಕನರೇಂದ್ರಕೀರ್ತಿಃ ॥

ಇಲ್ಲಿರುವ "ಮಹೇಶ್ವರ ಶಿಖಾಮಣಿ ದೀಪ್ತಮೌಲಿಃ" ಎಂಬ ಪದವು ರಾಜಸಿಂಹರಾಜನು "ಶಿರೋಲಿಂಗಧಾರಿ" ಎಂಬುದನ್ನು ಸೂಚಿಸುತ್ತದೆ.

ಮುಂದೆ ಕ್ರಿ. ಶ. ಎಂಟನೆಯ ಶತಮಾನದಲ್ಲಿದ್ದ ಆನಂದಗಿರಿಯು ತನ್ನ ಶಂಕರ ವಿಜಯದಲ್ಲಿ–

ಭುಜದ್ವಯೇ ಲಿಂಗಧಾರಕಾ ಶೈವಾಃ ಫಾಲೇ ತ್ರಿಶೂಲಧಾರಿಣೋ ರೌದ್ರಾಃ
ಭುಜದ್ವಯೇ ಡಮರುಧಾರಿಣ ಉಗ್ರಾಃ ಫಾಲೇ ಲಿಂಗಚಿಹ್ನಧಾರಿಣೋ ಭಾಟ್ಟಾ ॥
ಹೃದಿ ತ್ರಿಶೂಲಂ ಶಿರಸಿ ಪಾಷಾಣಲಿಂಗಂ ಚ ಧಾರಿಣೋ ಜಂಗಮಾಃ ।
ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ ॥

ಎಂದು ಶಿವಲಿಂಗಧಾರಿಗಳನ್ನು ಉಲ್ಲೇಖಿಸಿದ್ದಾನೆ. ಗೋಕರ್ಣಕ್ಷೇತ್ರದಲ್ಲಿ ಬ್ರಹ್ಮ-ಶಿವಸೂತ್ರಗಳ ಮೇಲೆ ಭಾಷ್ಯಗಳನ್ನು ಬರೆದಿದ್ದ ಮಹಾಪಾಶುಪತಾಚಾರ್ಯರಾದ **ನೀಲಕಂಠಶಿವಾಚಾರ್ಯರು** **ಹರದತ್ತನೇ** ಮುಂತಾದ ಶಿಷ್ಯರೊಡನೆ ಆಚಾರ್ಯಶಂಕರರೊಡನೆ ವಾಕ್ಯಾರ್ಥವನ್ನು ಮಾಡಿ ನಿರ್ಜಿತರಾದರೆಂದು ಮಾಧವಾಚಾರ್ಯವಿರಚಿತ-**ಶಂಕರದಿಗ್ವಿಜಯದಲ್ಲಿ** ಉಕ್ತವಾಗಿದೆ. ಈ ಶಿರೋಲಿಂಗಧಾರೀಜಂಗಮಪುಂಗವನು ವೀರಶೈವನೆಂಬುದು ಸುಸ್ಪಷ್ಟ.

ಇವೇ ಮುಂತಾದ ಉಲ್ಲೇಖಗಳಿಂದ ಚಾರಿತ್ರಿಕದೃಷ್ಟಿಯಿಂದಲೂ ಕೂಡ ಆಗಮಧರ್ಮವು ಅತಿಪ್ರಾಚೀನವೆಂದು ತಿಳಿದುಬರುತ್ತದೆ. ಮೇಲಾಗಿ ಕಾಳಿದಾಸಕವಿ (ಕ್ರಿ.ಶ.ಸು.೫೦೦) ಶಾಕುಂತಲದಲ್ಲಿ ಕಣ್ವಾಶ್ರಮದಲ್ಲಿದ್ದ ವಟುಗಳು ವೈಖಾನಸಸಂಪ್ರದಾಯದವರೆಂದು ನಿರ್ದೇಶಿಸಿದೆ. ತಿರುಮೂಲರ್ (ಕ್ರಿ.ಶ.೬೦೦) ರಚಿಸಿರುವ **"ತಿರುಮಂತಿರದಲ್ಲಿ** ರಾಜಾನಕ ರಾಮಕಂಠ (ಕ್ರಿ.ಶ.೯೦೦)ನ **"ಮತಂಗವೃತ್ತಿ"**ಯಲ್ಲಿ, ಉಮಾಪತಿ ಶಿವಾಚಾರ್ಯನ **"ಪೌಷ್ಕರಭಾಷ್ಯ"**ದಲ್ಲಿ, ಅಘೋರ ಶಿವಾಚಾರ್ಯ (ಕ್ರಿ.ಶ.೧೦೦೦) ಕೃತಿಗಳಲ್ಲಿ ಈಶಾನದ (ಕ್ರಿ.ಶ.೧೧೦೦) **"ಈಶಾನಶಿವಗುರುಪದ್ಧತಿ"** ಯಲ್ಲಿ ಮಾಧವಾಚಾರ್ಯ (ಕ್ರಿ.ಶ.೧೪೦೦) ನ ಸರ್ವದರ್ಶನ ಸಂಗ್ರಹದಲ್ಲಿಯೂ ಸಹ ಆಗಮಗಳನ್ನು ಕುರಿತ ವಿಷಯಗಳು ಅನೇಕ ಇವೆ.

ಕಡೆಯದಾಗಿ ಭಿಟಾ, ಗುಡಿಮಲ್ಲಂ ಮುಂತಾದೆಡೆಗಳಲ್ಲಿ ಇರುವ ಶಿವಲಿಂಗಗಳು ಕ್ರಿ. ಪೂ. ಒಂದನೇ ಶತಮಾನಕ್ಕಿಂತಲೂ ಹಿಂದಿನವೆಂದು ಹೇಳಲ್ಪಟ್ಟಿವೆ. ಈ ಆಗಮಸಂಸ್ಕೃತಿಯು ಕೇವಲ ಭಾರತದಲ್ಲಿ ಮಾತ್ರವೇ ಹರಡಿಲ್ಲ ; ಅದು ಅನ್ನಾಂ (ಇಂಡೋಚೈನಾ) ಮಿಸೋನಾ (ಭದ್ರೇಶ್ವರ) ಮೆಕ್ಸಿಕೊ, ಜಾವಾ, ಕಾಂಬೋಡಿಯಾ, ಚಂಪಾ, ಇಂಡೋನೇಷಿಯಾ, ಚೀನಾ, ಜಪಾನ್ ಮುಂತಾದ ಪೂರ್ವದೇಶಗಳಲ್ಲಿಯೂ ಕೂಡ ಕ್ರಿ. ಶ. ೫೦೦ ಕ್ಕಿಂತಲೂ ಹಿಂದೆಯೇ ಇತ್ತು. ಅಲ್ಲಿರುವ ಆಗಮೋಕ್ತವಾದ ಶಿವಾಲಯಗಳು ಇಂದಿಗೂ ಈ ಸಂಸ್ಕೃತಿಯ ಗತವೈಭವವನ್ನು ಸಾರುತ್ತವೆ.[1] ನಾವು ಮೊದಲೇ ಹೇಳಿರುವಂತೆ ಮೊಹೆಂಜೊದಾರೋ ಕಣಿವೆಯ ಸಂಶೋಧನೆಯ ತರುವಾಯ ಅಲ್ಲಿ ದೊರೆತಿರುವ ಹತ್ತು ಬಗೆಯ ಶಿವಲಿಂಗಗಳಿಂದ ಆಗಮಸಂಸ್ಕೃತಿಯು ವೇದಪೂರ್ವ ಕಾಲದ್ದೆಂದು ಊಹಿಸಲಾಗಿದೆ. ಇವೇ ಮುಂತಾದ ವಿಚಾರಗಳು ನಾನು ಸಂಸ್ಕೃತ ಮತ್ತು ಕನ್ನಡಗಳಲ್ಲಿ ಪ್ರಕಟಿಸಿರುವ "ಆಗಮ-ಸಂಸ್ಕೃತಿ" ಎಂಬ ಪ್ರಬಂಧದಲ್ಲಿ ಸಮರ್ಥಿಸಲ್ಪಟ್ಟಿವೆ.[2]

**ಶೈವಾಗಮ ಪರಂಪರೆ–**

ಆಗಮ-ಗ್ರಂಥರಚನೆಯು ಈಚಿನದಾದರೂ ಆಗಮ ಸಂಸ್ಕೃತಿ-ಸಂಪ್ರದಾಯಗಳು ಪ್ರಾಚೀನ. "ಆಗಮ" ಎಂಬ ಶಬ್ದವೇ ಆಗಮಗಳು ಪರಂಪರೆಯಿಂದ ಬಂದವುಗಳು; ಎಂಬುದನ್ನು ಸೂಚಿಸುತ್ತದೆ. ಭಗವದ್ಗೀತೆಯಲ್ಲಿ ಉಕ್ತವಾಗಿರುವ ಆಧ್ಯಾತ್ಮ ವಿದ್ಯೆಯು ಹೇಗೆ 'ಭಗವಂತನಿಂದ ವಿವಸ್ವತನಿಗೆ, ಅವನಿಂದ ಮನುವಿಗೆ, ಮನು ಇಕ್ಷ್ವಾಕುವಿಗೆ' ಎಂಬಂತೆ ಹೇಗೆ ಪರಂಪರೆಯಿಂದ ಬಂದಿತೋ ಅದರಂತೆ ಆಗಮಗಳು ಕೂಡ ಪರಂಪರೆಯಿಂದ ಬೋಧಿಸಲ್ಪಟ್ಟವೆ. ಶೈವಾಗಮಗಳು ಕಾಮಿಕ ಮೊದಲು ವಾತುಲದವರೆಗೆ ಒಟ್ಟು ಇಪ್ಪತ್ತೆಂಟು. ಅವು ಕ್ರಮವಾಗಿ–

"ಕಾಮಿಕ–ಯೋಗಜ–ಚಿಂತ್ಯ–ಕಾರಣ–ಅಜಿತ–ದೀಪ್ತ–ಸೂಕ್ಷ್ಮ–ಸಹಸ್ರ–ಸುಪ್ರಭ–ಅಂಶುಮತ್–ವಿಜಯ–ನಿಶ್ವಾಸ–ಸ್ವಾಯಂಭುವ–ಅನಲ–ವೀರ–ರೌರವ–ಮುಕುಟ–ವಿಮಲ–ಚಂದ್ರಜ್ಞಾನ–ಬಿಂಬ–ಲಲಿತ–ಪ್ರೋದ್ಗೀತ–ಸಿದ್ಧ–ಸಂತಾನ–ಸರ್ವೋಕ್ತ–ಪಾರಮೇಶ್ವರ–ಕಿರಣ–ವಾತೂಲ" ಎಂದು.

ಅಚ್ಚಾಗಿರುವ ಮೃಗೇಂದ್ರಾಗಮ ಭೂಮಿಕೆಯಲ್ಲಿ–

> ಕಾಮಿಕಂ ಯೋಗಜಂ ವಾಥ ತಥಾ ಚಿಂತ್ಯಂ ಚ ಕಾರಣಂ ।
> ಅಜಿತಂ ದೀಪ್ತಸೂಕ್ಷ್ಮೇ ಚ ಸಹಸ್ರಶ್ಚ ತಥಾಂಶುಮತ್ ॥
> ಸುಪ್ರಭೇದ ಸ್ತಥಾಹ್ಯೇತೇ ಶೈವಾಸ್ಸಂಪರಿಕೀರ್ತಿತಾಃ ।

ಇನ್ನು ಕಾಮಿಕಕ್ಕೆ ಮೂರು ಉಪಭೇದಗಳಿವೆ–

> ನಾರಸಿಂಹಂ ಚ ವಕ್ತ್ರಾರಂ ಭೈರವೋತ್ತರಮೇವ ಚ ।
> ನಾರಸಿಂಹಾಖ್ಯಮೇವೈತತ್ತನ್ಮೃಗೇಂದ್ರಮಿತಿ ಕಥ್ಯತೇ ॥

ಎಂದು ಹೇಳಿದೆ. ಮೇಲಿನವುಗಳಲ್ಲಿ ಮೊದಲಿನ ಹತ್ತು ಶೈವಾಗಮಗಳೆಂದೂ ಉಳಿದ ಹದಿನೆಂಟು "ರುದ್ರಾಗಮ"ಗಳೆಂದೂ ಹೇಳಲ್ಪಟ್ಟಿವೆ. ಅವುಗಳಲ್ಲಿ ಶೈವಾಗಮಗಳು ಮೂರು ಸಲವೂ, ರುದ್ರಾ

---

[1] ಕಾಂಬೋಡಿಯಾ ಶಾಸನಗಳು (ಷಟ್‌ಸ್ಥಲಜ್ಞಾನಸಾರಾಮೃತ ಡಾ|| ಆರ್. ಸಿ. ಹಿರೇಮಠ ಸಂಪಾದಿತ, ಪು. ೪೯. ಧಾರವಾಡ.

[2] ಆಗಮ-ಸಂಸ್ಕೃತಿ, ವಾರಾಣಸೀ ಸಂ. ವಿಶ್ವವಿದ್ಯಾಲಯದ 'ಸಾರಸ್ವತೀಸುಷಮಾ' ತ್ರೈಮಾಸಿಕ, ಸಂವತ್ ೨೦೧೭ (ಅಂಕ ೧.೨.೩.೪)

'ಋಷಿಕಲ್ಪನ್ಯಾಸ' ಭಾರತೀ ಪರಿಷತ್– ಪ್ರಯಾಗ ೧೯೭೦ ಪು. ೯೨.೯೬.

ಗಮಗಳು ಎರಡು ಸಲವೂ ರೂಪುಗೊಂಡಿವೆ. ಇವುಗಳಲ್ಲಿ ಕಾಮಿಕವು ಮೊದಲು ಪ್ರಣವನಿಗೆ ಅವನಿಂದ ತ್ರಿಕಾಲನಿಗೆ, ತ್ರಿಕಾಲನಿಂದ ಹರನಿಗೆ ಎಂದು ಮೂರುಸಲ ಉಕ್ತವಾಗಿದೆ. ಇದರಂತೆ ಉಳಿದ ಶೈವಾಗಮಗಳೂ ಸಹ, ರುದ್ರಾಗಮಗಳಲ್ಲಿ ವಿಜಯಾಗಮವು ಮೊದಲು ರುದ್ರನಿಗೆ, ಅವನಿಂದ ಪರಮೇಶನಿಗೆ ಬೋಧಿಸಲ್ಪಟ್ಟಿದೆ.

ಹೀಗೆ ಶಾಕ್ತ ಮತ್ತು ಪಾಂಚರಾತ್ರಾದಿ-ಆಗಮಗಳಲ್ಲಿಯೂ ಆವೃತ್ತಿಯು ಕಂಡುಬರುತ್ತದೆ. ಆದ್ದರಿಂದಲೇ ಸುಪ್ರಭೇದದಲ್ಲಿ ವಿಸ್ತಾರವಾದ ಬೇರೆ ಗ್ರಂಥದಿಂದ ಸಂಗ್ರಹಿಸಿದ "ಆಕುಂಚಿತವೃತ್ತಿ" ಎಂದು ಹೇಳಿದೆ. ಅಲ್ಲಲ್ಲಿರುವ "ಸಾರಾತ್ಸಾರತರ" ಮುಂತಾದ ಉಲ್ಲೇಖಗಳು ಈ ಆಶಯವನ್ನು ಸಮರ್ಥಿಸುತ್ತವೆ.

## ಆಗಮೋಕ್ತವಿಷಯಗಳು

ಆಗಮಗಳಲ್ಲಿ **ಕ್ರಿಯಾ, ಚರ್ಯಾ, ಯೋಗ** ಮತ್ತು **ಜ್ಞಾನ** (ವಿದ್ಯಾ) ಎಂಬ ನಾಲ್ಕು ಪಾದಗಳಿವೆ. ಇಂದು ದೊರೆಯುವ ಆಗಮಗಳಲ್ಲಿ ಕೆಲಕೆಲವು ಪಾದಗಳು ದೊರೆಯುವುದಿಲ್ಲ. ಅಲ್ಲಿ ಹೇಳಿರುವ ವಿಷಯಗಳನ್ನು ಹೀಗೆ ಸಂಗ್ರಹಿಸಬಹುದು.

**ಕ್ರಿಯಾಪಾದ** :– ಈ ಪಾದದಲ್ಲಿ ದೇವಾಲಯಗಳ ಸ್ಥಾಪನೆ, ಮೂರ್ತಿರಚನೆ, ಅವುಗಳ ಪ್ರಾಣಪ್ರತಿಷ್ಠೆ ಮುಂತಾದ ವಿಷಯಗಳು ನಿರೂಪಿತವಾಗಿವೆ. ಸುಪ್ರಭೇದ ಮತ್ತು ಕಾಮಿಕಾದಿಗಳಲ್ಲಿ ದೇವಾಲಯಗಳನ್ನು ಕಟ್ಟುವ ವಿಚಾರವು ಮುಂದೆ ಕಾಣುವಂತೆ ವಿಸ್ತಾರವಾಗಿದೆ.

ಪ್ರಕೃತಿಸೌಂದರ್ಯದಿಂದ ಕೂಡಿರುವ ಪ್ರದೇಶದಲ್ಲಿ ದೇವಾಲಯಗಳನ್ನು ಕಟ್ಟಬೇಕು. ಅಲ್ಲಿ ಮೊದಲು ನೆಲವನ್ನು ಉತ್ತು, ಭತ್ತ ಮೊದಲಾದ ಧಾನ್ಯಗಳನ್ನು ಬಿತ್ತಬೇಕು. ಬೆಳೆಬಂದ ಮೇಲೆ ಅದನ್ನು ಪಶುಪಕ್ಷಿಗಳಿಗೆ ಮೇಯಬಿಡಬೇಕು. ಆಮೇಲೆ ಅಲ್ಲಿ ಆಲಯ ನಿರ್ಮಾಣವನ್ನು ಆರಂಭಿಸಬೇಕು. ಶುಭದಿನದಲ್ಲಿ ವಿಧ್ಯುಕ್ತವಾಗಿ ಬಲಿಹರಣಾದಿಗಳನ್ನು ಮಾಡಬೇಕು.

ಕೆಲವರು ದೇವಾಲಯ ನಿರ್ಮಾಣ ಮತ್ತು ಮೂರ್ತಿಪೂಜಾದಿಗಳು ಅಜ್ಞಜನರ ಮನೋರಂಜನೆಗಾಗಿ ಎಂದು ಹೇಳುವರು. ಆದರೆ ದೇವಾಲಯರಚನೆಯು ಶಿಲ್ಪಶಾಸ್ತ್ರವನ್ನು ಪ್ರೋತ್ಸಾಹಿಸಿತು. ಶಿಲ್ಪಶಾಸ್ತ್ರದ ಉಗಮಕ್ಕೆ ಆಗಮಗಳೇ ಮೂಲ. ಪ್ರಾಯಶಃ ವೈದಿಕಸಾಹಿತ್ಯದಲ್ಲಿ ಇದಕ್ಕೆ ಅಷ್ಟು ಅವಕಾಶವಿಲ್ಲ. ಮೂರ್ತಿಪೂಜೆಯ ಆಕರ ಆಗಮಗಳೇ. ಆಗಮೋಕ್ತವಾದ ಶಿಲ್ಪಶಾಸ್ತ್ರವೈಭವವು ಇಂದಿಗೂ **ಎಲ್ಲೋರ, ಅಜಂತ, ಎಲಿಫೆಂಟಾ, ಬಾದಾಮಿ, ಬೇಲೂರು, ಹಳೇಬೀಡು, ಸೋಮನಾಥಪುರ, ಹಂಪೆ, ಲೇಪಾಕ್ಷಿ** ಮುಂತಾದ ವಿಶ್ವವಿಖ್ಯಾತವಾದ ದೇವಾಲಯಗಳು ಮತ್ತು ಗುಹಾಂತರ್ದೇವಾಲಯಗಳಲ್ಲಿ ಜೀವಂತವಾಗಿದೆ.

ದೇವಾಲಯ ನಿರ್ಮಾಣದ ಅಂಗವಾಗಿ ಗರ್ಭನ್ಯಾಸ, ಪೀಠ, ಕಂಠ, ಮಂಟಪ, ಪ್ರಾಕಾರ ಮುಂತಾದ ಸೂಕ್ಷ್ಮ ವಿಷಯಗಳೂ ಕೂಡ ಚೆನ್ನಾಗಿ ಕ್ರೋಢೀಕೃತವಾಗಿವೆ. ಸಂಶೋಧಕರು– ವಿಗ್ರಹಾರಾಧನೆಯು ವೈದಿಕ ಯುಗಕ್ಕೆ ಸೇರಿದುದಲ್ಲ ಎಂದು ಸಂದೇಹಪಡುತ್ತಾರೆ ; ಆದರೆ ಮೂರ್ತಿಪೂಜೆಯು **ಯಾಸ್ಕ**– ಪಾಣಿನಿ ಮೊದಲಾದವರಿಗಿಂತ ಹಿಂದಿನದು. ಏಕೆಂದರೆ ಶ್ರುತಿಗಳಲ್ಲಿ "ಯಾ ತೇ ರುದ್ರ ಶಿವಾ ತನೂಃ" "ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ "ಘೋರಾನ್ಯಾ, ಶಿವಾನ್ಯಾ" ಎಂಬ ಶ್ರುತಿವಚನಗಳಲ್ಲಿ "ಪರಶಿವನಿಗೆ ಇರುವ ಶರೀರವು ಮಂಗಳಕರ" "ಅಗ್ನಿಸ್ವರೂಪನಾದ ರುದ್ರನಿಗೆ

ಎರಡು ತನುಗಳಿವೆ. ಒಂದು ಘೋರ ಮತ್ತೊಂದು ಅಘೋರ(ಶಾಂತ)" ಎಂದು ಶಿವನ ಶರೀರವನ್ನು ನಿರ್ದೇಶಿಸಲಾಗಿದೆ. "ಪರಮೇಶ್ವರನ ಘೋರ ಮತ್ತು ಅಘೋರ ತನುಗಳನ್ನು ದೇವತೆಗಳು ಸ್ತುತಿಸುತ್ತಾರೆ." "ಶ್ರೀ ರುದ್ರನಮಕಾಧ್ಯಾಯದಿಂದ ಘೋರತನುವನ್ನೂ ಚಮಕಾಧ್ಯಾಯದಿಂದ ಅಘೋರ ತನುವನ್ನೂ ಅರ್ಚಿಸಬೇಕು." ಮುಂತಾದ ಉಕ್ತಿಗಳು ಭಗವಂತನ ಶರೀರವನ್ನು ವರ್ಣಿಸಿವೆ. ಮಾನಸಿಕ ಏಕಾಗ್ರತೆಯನ್ನು ಸಾಧಿಸುವುದಕ್ಕೆ ವಿಗ್ರಹಾರಾಧನೆಯ ಹೊರತು ಬೇರೆ ಸಾಧನವಿಲ್ಲವೆಂದು **ಸ್ವಾಮಿವಿವೇಕಾನಂದರು "ಹಿಂದೂಧರ್ಮಸಾರ"** ದಲ್ಲಿ ಹೇಳಿದ್ದಾರೆ. ವಿಗ್ರಹಗಳಲ್ಲಿ ಚಲ, ಅಚಲ ಎಂಬ ಪ್ರಭೇದಗಳಿವೆ. ಮೂರ್ತಿಗಳು ಸಕಲ ; ಲಿಂಗಗಳು ನಿಷ್ಕಲ ; ಎನಿಸಿವೆ.

**ಚರ್ಯಾಪಾದ :–** ಈ ಪಾದದಲ್ಲಿ ಮಾನವ ಪ್ರತಿಷ್ಠಿತವಾದ ಮೂರ್ತಿಗಳ ಪೂಜೆ, ಉತ್ಸವಾದಿ ಪ್ರಕಾರಗಳು ಪ್ರತಿಪಾದಿತವಾಗಿವೆ. ಸ್ನಾನ, ಅರ್ಚನೆ, ನೈವೇದ್ಯಾದಿಗಳ ವಿಧಾನಗಳು, ಅಗ್ನಿಕುಂಡ, ಸಮಿತ್ತುಗಳ ನಿರೂಪಣೆಗಳಿವೆ. ಆಗಮಿಕ ಕ್ರಿಯೆಗಳಲ್ಲಿ ಶೈವಾಗ್ನಿಹೋತ್ರಕ್ಕೆ ಪ್ರಾಧಾನ್ಯ ; ವೈದಿಕಾಗ್ನಿಗಲ್ಲ ; ಏಕೆಂದರೆ ವೈದಿಕಾಗ್ನಿಗಿಂತ ಶೈವಾಗ್ನಿಯು ಪ್ರಶಸ್ತ. ದೀಕ್ಷಿತನು ಶೈವಾಗ್ನಿಯನ್ನೇ ಉಪಯೋಗಿಸಬೇಕು. ಪಾರಮೇಶ್ವರ ತಂತ್ರದಲ್ಲಿ ವೀರಶೈವರು ಶಿವದೀಕ್ಷಾದಿಗಳಲ್ಲಿ ಕರ್ಮಾಂಗವಾಗಿ ಹವನಾದಿಗಳನ್ನು ಮಾಡಬೇಕೆಂದು ಹೇಳಿದೆ. [1]

**ಯೋಗಪಾದ–** ಪಾತಂಜಲ-ಯೋಗಶಾಸ್ತ್ರಕ್ಕೆ ಆಗಮಗಳೇ ಮೂಲವೆಂದು ವಿದ್ವಾಂಸರು ಊಹಿಸಿದ್ದಾರೆ. **ಈಶಾನಶಿವಗುರು, ನಿಜಗುಣಶಿವಯೋಗಿ** ಮುಂತಾದವರು ಆಗಮೋಕ್ತವಾದ ಯೋಗಪದ್ಧತಿಯನ್ನು ಅನುಸರಿಸಿ ಅಷ್ಟಾಂಗಯೋಗಸಾಧನೆಯನ್ನು ನಿರೂಪಿಸಿದ್ದಾರೆ.

**ಜ್ಞಾನಪಾದ–** ಪತಿ-ಪಶು-ಪಾಶಾತ್ಮಕವಾದ ತ್ರಿಕಸಿದ್ಧಾಂತವು ಈ ಪಾದದಲ್ಲಿ ಉಕ್ತವಾಗಿದೆ. ಭಾರತೀಯಸಂಸ್ಕೃತಿಭೂಮಿಕೆಯಲ್ಲಿ ಬೇರೂರಿರುವ ಪಾಶುಪತಸಿದ್ಧಾಂತವೆಂಬ ಶೈವಸಂತಾನ ಪಾದಪಕ್ಕೆ (ಕಲ್ಪವೃಕ್ಷಕ್ಕೆ ಬೀಜವು ಷಟ್‌ತ್ರಿಶಂತ್-ತತ್ತ್ವಪುಂಜ. ಈ ಪುಂಜವು ಮಾಹೇಶ್ವರನ (ನಟರಾಜರಾಜ) ಡಮರುಗದಿಂದ ವ್ಯಕ್ತವಾಯಿತು. ಇದಕ್ಕೆ ಪರಮೇಶ್ವರನ ಆಸ್ಥಾನದಲ್ಲಿ ಪ್ರಮಥಾಗ್ರಗಣ್ಯನೆನಿಸಿದ ಆಚಾರ್ಯ-ನಂದಿಕೇಶ್ವರನು ಮೊಟ್ಟಮೊದಲನೆಯದಾಗಿ ವ್ಯಾಖ್ಯಾನ ಬರೆದಿದ್ದಾನೆ. ಅವೇ **"ನಂದಿಕೇಶ್ವರಕಾರಿಕೆಗಳು"** ಎಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ಮುವತ್ತಾರು ತತ್ತ್ವಗಳು ಜಗತ್‌ಸೃಷ್ಟಿಗೆ ಬೀಜವೆಂದು ನಿರ್ದಿಷ್ಟವಾಗಿದೆ.

ಅದೇ ಶೈವಕಲ್ಪವೃಕ್ಷವು ಶಾಖೋಪಶಾಖೆಗಳಾಗಿ ಬೆಳೆದು ಜಗತ್ತನ್ನೇ ವ್ಯಾಪಿಸಿ ಬೆಳಗುತ್ತಿದೆ. ಅವುಗಳಲ್ಲಿ **ದ್ವೈತಶೈವ, ಸಿದ್ಧಾಂತಶೈವ, ಶೈವಾದ್ವೈತ, ಶೈವದ್ವೈತಾದ್ವೈತ** ಮತ್ತು **ಶೈವವಿಶೇಷಾದ್ವೈತ** ಮುಂತಾದವು ಮುಖ್ಯ. ಅವುಗಳನ್ನು ಕ್ರಮವಾಗಿ ಸಂಗ್ರಹವಾಗಿ ನಿರೂಪಿಸಲಾಗುತ್ತದೆ.

೭

## ಜಗತ್-ಸೃಷ್ಟಿಗೆ ಮೂಲ ಷಟ್-ತ್ರಿಶಂತ್-ತತ್ತ್ವಗಳು

ಶೈವದರ್ಶನಕ್ಕೆ ಆಧಾರ ಷಟ್‌ತ್ರಿಶಂತ್‌ತತ್ತ್ವಗಳು. ಶೈವಾಗಮೋಕ್ತವಾದ ಅವುಗಳು ಮೊತ್ತಮೊದಲು ಪರಮ ಮಾಹೇಶ್ವರ ನಂದಿಕೇಶ್ವರ ಶಿವಾಚಾರ್ಯನ ಕಾರಿಕೆಗಳಲ್ಲಿ ಕಂಡುಬರುತ್ತವೆ.

---

[1] ಪಾರಮೇಶ್ವರ ತಂತ್ರ, ಪ.೪.೫ ಪಟಲಗಳು.

ಶಬ್ದಶಾಸ್ತ್ರವು ಸುಪ್ರಸಿದ್ಧ. ಅದು ಸದಾಶಿವನ ಡಮರುಗದ ಧ್ವನಿಯಿಂದ ಅಭಿವ್ಯಕ್ತ ವಾಯಿತು. "ಅ-ಇ-ಉಣ್" ಇವೇ ಮುಂತಾದ ಹದಿನಾಲ್ಕು ಸೂತ್ರಗಳಲ್ಲಿ ಅದು ಅಡಗಿದೆ. ಪಾಣಿನಿ, ಪತಂಜಲಿ ಮುಂತಾದ ಮಹರ್ಷಿಗಳು ಈ ಸೂತ್ರಗಳು ಕೇವಲ ಶಬ್ದಶಾಸ್ತ್ರಕ್ಕೆ ಮಾತ್ರ ಮೂಲವೆಂದು ತಿಳಿದು, ಸೂತ್ರ-ಭಾಷ್ಯಾದಿಗಳ ಮೂಲಕ ಶಬ್ದಶಾಸ್ತ್ರವನ್ನು ರಚಿಸಿದರು. ಆದರೆ ಯಾವಾಗಲೂ ಸದಾಶಿವನ ಸನ್ನಿಧಿಯನ್ನು ಅಲಂಕರಿಸಿ, ಆ ಪರಶಿವನ ಮನೋಭಾವವನ್ನು ಗ್ರಹಿಸಿರುವವನೂ ಪ್ರಮಥಾಧಿಪತಿಯೂ ಆದ ಶ್ರೀ ನಂದಿಕೇಶ್ವರನು ಈ ಹದಿನಾಲ್ಕು ಶಿವಸೂತ್ರಗಳಿಗೆ ಮುಮುಕ್ಷುಗಳಿಗೆ ಮೋಕ್ಷಸಿದ್ಧಿಯೇ ಪರಮಪ್ರಯೋಜನವೆಂದು ಭಾವಿಸಿ ಸನಕ, ಸನಂದನ, ಸನತ್ಕುಮಾರ, ವ್ಯಾಘ್ರಪಾದ, ವಶಿಷ್ಠ ಮುಂತಾದ ಮಹರ್ಷಿಗಳ ಪ್ರಾರ್ಥನೆಯಂತೆ ಆ ಮಾಹೇಶ್ವರ ಸೂತ್ರಗಳಲ್ಲಿ ಅಡಗಿರುವ ಶಿವತತ್ತ್ವರಹಸ್ಯವನ್ನು ಇಪ್ಪತ್ತಾರು ಕಾರಿಕೆಗಳ ಮೂಲಕ ಉಪದೇಶಿಸಿದನು. ಈ ಕಾರಿಕೆಗಳು ಮುವತ್ತಾರು ತತ್ತ್ವಗಳನ್ನು ನಿರೂಪಿಸುವುದರ ಮೂಲಕ ಶಕ್ತಿವಿಶಿಷ್ಟ-ಪರಬ್ರಹ್ಮಸ್ವರೂಪವನ್ನು ಸ್ಪಷ್ಟವಾಗಿ ಪ್ರಕಟಿಸುತ್ತವೆ. ಇವು ಮುಮುಕ್ಷುಗಳ ಮನಸ್ಸನ್ನು ಮಹದಾನಂದಸಿಂಧುವಿನಲ್ಲಿ ಮುಳುಗಿಸುತ್ತವೆ.

ಪ್ರಕೃತ ಶಿವತತ್ತ್ವರಹಸ್ಯವನ್ನು ಅರಿಯಲೆಳಸುವವರಿಗಾಗಿ ನಂದಿಕೇಶ್ವರನ ಕಾರಿಕೆಗಳಿಗೆ ಬರೆದಿರುವ 'ತತ್ತ್ವಪ್ರಕಾಶಿನಿ' ಮತ್ತು ಅದರ ಆಶಯವನ್ನು ಅಭಿವ್ಯಂಜಿಸುವ ಟಿಪ್ಪಣಿಗಳೊಡನೆ ಸಂಕ್ಷೇಪವಾಗಿ ಇಲ್ಲಿ ಸೂಚಿಸಲಾಗುತ್ತದೆ.

ನಂದಿಕೇಶ್ವರಕಾರಿಕೆಗಳಲ್ಲಿ ಶೈವದರ್ಶನಕಿರಣಗಳು

ಅ ಇ ಉ (ಣ್), ಋ ಲೃ (ಕ್), ಏ ಓ (ಙ್), ಐ ಔ (ಚ್), ಹ ಯ ವ ರ (ಟ್), ಲ (ಣ್), ಞ ಮ ಙ ಣ ನ (ಮ್) ಝ ಭ (ಞ್), ಘ ಢ ಧ (ಷ್), ಜ ಬ ಗ ಡ ದ (ಶ್), ಖ ಫ ಛ ಠ ಥ ಚ ಟ ತ (ವ್), ಕ ಪ (ಯ್), ಶ ಷ ಸ (ರ್), ಹ (ಲ್).

ಇವು ಮಾಹೇಶ್ವರ ಸೂತ್ರಗಳು.

ನೃತ್ತಾವಸಾನೇ ನಟರಾಜರಾಜೋ
ನನಾದ ಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಸ್ಸನಕಾದಿಸಿದ್ಧಾನ್
ಏತದ್ವಿಮರ್ಶೇ ಶಿವಸೂತ್ರಜಾಲಮ್ ॥

ಈ ವಿಷಯವನ್ನು ಕುರಿತು ಪಾತಂಜಲಮಹಾಭಾಷ್ಯದ ವ್ಯಾಖ್ಯಾಕಾರನಾದ ನಾಗೋಜಿಭಟ್ಟನು (ಕ್ರಿ. ಶ. ೧೭೦೦) ತನ್ನ ಪ್ರದೀಪೋದ್ಯೋತದಲ್ಲಿ.–

"ವ್ಯಾಖ್ಯಾತಾ ಚೈಷಾ ಚತುರ್ದಶಸೂತ್ರೀ ಬ್ರಹ್ಮಪರತಯಾ ನಂದಿಕೇಶ್ವರೇಣ ; ತದರ್ಥಂ ಸಕಲವಾಕ್‌ಜ್ಞಾನಾರ್ಥಂ ಬ್ರಹ್ಮಬೋಧನಾರ್ಥಂ ಚ. ಅನೇನ ಯತ್ಫಲಂ ತದಕ್ಷರಸಮಾಮ್ನಾಯಜ್ಞಾನೇನ ಸೂಚಿತಂ". (ಮಹಾಭಾಷ್ಯ– ಪ್ರದೀಪೋದ್ಯೋತ ಅ. ೧. ಪಾ. ೧. ಆ. ೨. ಪು. ೮೦).

ನಂದಿಕೇಶ್ವರ ಕಾರಿಕೆಗಳು ಒಟ್ಟು ಇಪ್ಪತ್ತೇಳು. ಇವುಗಳಿಗೆ ಉಪಮನ್ಯು- ಶಿವಾಚಾರ್ಯರ "ತತ್ತ್ವವಿಮರ್ಶಿನಿ" ಎಂಬ ವ್ಯಾಖ್ಯೆ ಇದೆ. ಪತಂಜಲಿಯು "ಸೋऽಯಮಕ್ಷರಸಮಾಮ್ನಾಯೋ ಬ್ರಹ್ಮರಾಶಿಃ" ಎಂದಿದ್ದಾನೆ. "ಬ್ರಹ್ಮತತ್ತ್ವವೇ ಶಬ್ದರೂಪದಿಂದ ತೋರುತ್ತದೆ." ಎಂದು ಕೈಯಟನೂ ಸಮರ್ಥಿಸಿದ್ದಾನೆ.

ಸೃಷ್ಟಿಯು ಶಬ್ದ ಮತ್ತು ಅರ್ಥ ಎಂದು ಎರಡು ಬಗೆ. ಇವೆರಡೂ ಶಿವ-ಶಕ್ತಿಸ್ವರೂಪ. ಶಬ್ದವು ಶಕ್ತಿ ; ಅರ್ಥ ಶಿವ. ಬಾದರಾಯಣರು ತಮ್ಮ ಉತ್ತರಮೀಮಾಂಸೆಯ "ಜನ್ಮಾದ್ಯಧಿಕರಣ" ದಲ್ಲಿ ಪರಶಿವನಿಗೆ ಅರ್ಥಪ್ರಪಂಚಕರ್ತೃತ್ವವನ್ನೂ "ಶಾಸ್ತ್ರಯೋನಿತ್ವಾಧಿಕರಣ" ದಲ್ಲಿ ಶಬ್ದ ಪ್ರಪಂಚ ಕರ್ತೃತ್ವವನ್ನೂ ಪ್ರಸ್ತಾಪಿಸಿದ್ದಾರೆ.

ಮಾತು ಆಡುವವನ ಅಧೀನ ; ಮತ್ತು ಅವನ ಇಚ್ಛೆಗೆ ವಿಷಯ. ಇಚ್ಛೆ ಆತ್ಮನ ಅಧೀನ

ಚತ್ವಾರಿ ವಾಕ್ಪರಿಮಿತಾ ಪದಾನಿ
ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ।
ಗುಹಾತ್ರೀಣಿ ನಿಹಿತಾ ನೇಂಗಯಂತಿ
ತುರೀಯಾಂ ವಾಚಂ ಮನುಷ್ಯಾ ವದಂತಿ ॥

ಎಂಬ ಶ್ರುತಿಯು ಶಬ್ದಪ್ರವೃತ್ತಿಯ ವಿಕಾಸವನ್ನು ಹೇಳಿದೆ. ಅಂತರಾತ್ಮನ(ಜೀವ)ಇಚ್ಛಾ ಶಕ್ತಿಯ ಸ್ಫುರಣದಿಂದ, ಅನುಕೂಲಪವನನ ಚಲನವುಂಟಾಗಿ ನಾಭಿಯಮೂಲದಲ್ಲಿ ನಾದ ಉದಿಸುತ್ತದೆ. ಅದು ನಾಭಿ, ಹೃದಯ, ಕಂಠ ಮತ್ತು ಮುಖಗಳಲ್ಲಿ ಕ್ರಮವಾಗಿ ಪರಾ (ಸೂಕ್ಷ್ಮ), ಪಶ್ಯಂತೀ, ಮಧ್ಯಮಾ ಮತ್ತು ವೈಖರಿಗಳೆಂಬ ಹೆಸರು ತಳೆದು ಅಂಕುರಾಯಮಾಣ, ಅಂಕುರಿತ, ಪಲ್ಲವಿತ ಮತ್ತು ಫಲಿತ ಎಂಬ ಅವಸ್ಥೆಗಳನ್ನು ಹೊಂದಿ ಶಬ್ದರೂಪವನ್ನು ತಳೆಯುತ್ತದೆ.

ಶಬ್ದವು ಅಕ್ಷರಾತ್ಮಕ. ಪರಬ್ರಹ್ಮನಿಗೆ 'ಅಕ್ಷರ' ಎಂಬ ಹೆಸರಿದೆ. ಅಕ್ಷರವು ರೇಖಾತ್ಮಕ-ಸಂಕೇತವನ್ನು ತಳೆದು 'ಮಾತೃಕಾವರ್ಣ' ವೆನಿಸುತ್ತದೆ. 'ಶ್ರೀ ತಂತ್ರಸದ್ಭಾವ'ದಲ್ಲಿ 'ಅ' ಕಾರ ಮೊದಲು 'ಕ್ಷ',ಕಾರದ ವರೆಗಿನ ಐವತ್ತೆರಡು ಅಕ್ಷರಗಳನ್ನೂ 'ಮಾತೃಕಾ' ಎಂದು ಕರೆಯಲಾಗಿದೆ.

ಸರ್ವೇ ವರ್ಣಾತ್ಮಕಾ ಮಾತ್ರಾ ತೇ ಚ ಶಕ್ತ್ಯಾತ್ಮಕಾಃ ಪ್ರಿಯೇ ।
ಶಕ್ತಿಸ್ತು ಮಾತೃಕಾ ಜ್ಞೇಯಾಸಾ ಚ ಜ್ಞೇಯಾ ಶಿವಾತ್ಮಿಕಾ ॥
ಯಾ ಸಾ ತು ಮಾತೃಕಾ ದೇವಿ ಪರತೇಜಃ ಸಮನ್ವಿತಾ ।
ತಯಾ ವ್ಯಾಪ್ತಮಿದಂ ವಿಶ್ವ ಸಬ್ರಹ್ಮಭುವನಾಂತಕಮ್

[ಶಿವಸೂತ್ರ ವಿಮರ್ಶಿನೀ ಪು.೫೦]

ಅಕ್ಷರಗಳಲ್ಲಿಯೂ ಸಹ ಅಕಾರದಿಂದ ವಿಸರ್ಗದವರೆಗಿನ ಸ್ವರಗಳು ಶಕ್ತಿರೂಪ. ಕಕಾರ ದಿಂದ ಕ್ಷಕಾರದವರೆಗಿನ ಕ್, ಖ್, ಮುಂತಾದ ವ್ಯಂಜನಗಳು "ಶಿವಸ್ವರೂಪ." ಕ್, ಖ್, ಮುಂತಾದ ವ್ಯಂಜನಗಳು ಸ್ವರಗಳ ಸಂಬಂಧವಿಲ್ಲದೆ ಉಚ್ಚರಿಸಲು ಸಾಧ್ಯವಿಲ್ಲ. ಆದುದರಿಂದಲೇ ಶ್ರೀ ಶಂಕರಾಚಾರ್ಯರು—

"ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ" ಎಂದದ್ದು.

ಕಕಾರಾದಿಕ್ಷಕಾರಾಂತಾಃ ವರ್ಣಾಸ್ತೇ ಶಿವರೂಪಿಣಃ ।
ಅಕಾರಾದಿವಿಸರ್ಗಾಂತಾಸ್ಸ್ವರಾಃ ಷೋಡಶ ಶಕ್ತಯಃ ॥
– [ಮಾತೃಕಾ ಹೃದಯ]

## ಮಾಹೇಶ್ವರ ಸೂತ್ರಗಳ ಭಾವಾರ್ಥ

ಪ್ರಕೃತ ಮಾಹೇಶ್ವರಸೂತ್ರಗಳಿಗೆ ನಂದಿಕೇಶ್ವರನು ಶಿವಾದ್ವೈತಪರವಾಗಿ ಬರೆದ ವೃತ್ತಿ-ರೂಪಕಾರಿಕೆಗಳ ಭಾವಾರ್ಥವನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಲಾಗಿದೆ.

ಪಾಣಿನಿಯು ಮಾಹೇಶ್ವರಸೂತ್ರಗಳ ಕಡೆಯಲ್ಲಿರುವ "ಣ್, ಕ್" ಮುಂತಾದ ವ್ಯಂಜನಗಳನ್ನು 'ಇತ್' ಸಂಜ್ಞೆಗಳೆಂದು ಪರಿಗಣಿಸಿ "ಅಣ್, ಅಕ್" ಮುಂತಾದ ಪ್ರತ್ಯಾಹಾರಗಳನ್ನು ಮಾಡಿಕೊಂಡು ಶಬ್ದಶಾಸ್ತ್ರ (ವ್ಯಾಕರಣ) ಪ್ರವರ್ತಕನಾದ. ಅದರಂತೆ ನಂದಿಕೇಶ್ವರನು ಅದೇ ಮಾಹೇಶ್ವರ ಸೂತ್ರಗಳ ಕಡೆಯಲ್ಲಿರುವ 'ಣ್, ಕ್' ಎಂಬ ವ್ಯಂಜನಗಳನ್ನು ಧಾತ್ವರ್ಥವೆಂದು ಪರಿಗಣಿಸಿ ಬ್ರಹ್ಮಶಾಸ್ತ್ರ (ಅಧ್ಯಾತ್ಮ) ಪ್ರವರ್ತಕನೆನಿಸಿದ. "ಅಂತ್ಯವರ್ಣಸಮುದ್ಭೂತಾ ಧಾತವಃ ಪರಿಕೀರ್ತಿತಾಃ" ಎಂಬುದು ನಂದಿಕೇಶ್ವರನ ಭಾವ.

ಅತ್ರ ಸರ್ವತ್ರ ಸೂತ್ರೇಷು ಅಂತ್ಯವರ್ಣಚತುರ್ದಶಮ್ ।
ಧಾತ್ವರ್ಥಂ ಸಮುಪಾದಿಷ್ಟಂ ಪಾಣಿನ್ಯಾದೀಷ್ಟಸಿದ್ಧಯೇ ॥ ೨ ॥

ಎಂಬ ಕಾರಿಕೆ ಈ ಅರ್ಥವನ್ನು ಸಮರ್ಥಿಸಿದೆ.

ಅ ಇ ಉ ಣ್ ॥ ೧ ॥

ಮಾಹೇಶ್ವರ ಸೂತ್ರಗಳಲ್ಲಿ ಇದು ಮೊದಲನೆಯ ಸೂತ್ರ. ಎಲ್ಲ ವರ್ಣಗಳು ಮತ್ತು ಎಲ್ಲ ಭುವನಗಳಿಗೆ ಪರಶಿವನ ಸ್ವಾತ್ಮತತ್ತ್ವವೇ ಮೂಲ.

ಅಕಾರೋ ಬ್ರಹ್ಮರೂಪಃ ಸ್ಯಾನ್ನಿರ್ಗುಣಃ ಸರ್ವವಸ್ತುಷು ।
ಚಿತ್ಕಲಾಮಿಂ ಸಮಾಶ್ರಿತ್ಯ ಜಗದ್ರೂಪ ಉಣೀಶ್ವರಃ ॥ ೩ ॥

ಅ– ನಿರ್ಗುಣ [1] ಪರಮೇಶ್ವರನು, ಇಂ– ಚಿತ್ಕಲೆಯನ್ನು ಆಶ್ರಯಿಸಿ ; ಉ– ವ್ಯಾಪಕನೂ, ಸಗುಣನೂ, ಣ್– ಆದನು.

ಶಿವನು ಪರಾ, ಪಶ್ಯಂತೀ ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಬಗೆಯ ವಾಕ್ ಪ್ರವೃತ್ತಿಗಳಲ್ಲಿ ಚಿತ್ಕಲೆಯನ್ನು ಆಶ್ರಯಿಸಿದ್ದಾನೆ. ಸೃಷ್ಟಿಯ ಪ್ರಾರಂಭದಲ್ಲಿ "ಅ–ಇ–ಉ–ಋ–ಲೃ" ಎಂಬ ಐದು ವರ್ಣಗಳೇ ಇದ್ದದ್ದು. ಅವು ಉಳಿದ ನಲವತ್ತೊಂಭತ್ತು ವರ್ಣಗಳಿಗೆ ಮತ್ತು ಪಂಚಭೂತಗಳೇ ಮೊದಲಾದ ಐದು ವರ್ಗಗಳಿಗೆ ಕಾರಣವಾದವು. "ಅಸದ್ವಾ ಇದಮಗ್ರ ಆಸೀತ್" ಎಂಬ ಶ್ರುತಿಯಂತೆ ಸೃಷ್ಟಿಗೆ ಮೊದಲು 'ಅಸತ್' ಎನಿಸಿದ್ದ ಬ್ರಹ್ಮವು 'ಅಕ್ಷರ' ರೂಪದಿಂದ ಇತ್ತು.

---

[1] ನಿರ್ಗುಣ ಎಂದರೆ– ಹೇಯಗುಣರಹಿತ ; ಎಂದು ಅರ್ಥ. ಏಕೆಂದರೆ ಪರಶಿವನು ಸರ್ವಜ್ಞತ್ವಾದಿಸಕಲಕಲ್ಯಾಣಗುಣಗಳಿಗೆ ಆಶ್ರಯನಾಗಿದ್ದಾನೆ.

ಅಕ್ಷರಬ್ರಹ್ಮದ ದೆಶೆಯಿಂದ ಸಗುಣವು ಉದಿಸಿತು. ಗೀತೆಯಲ್ಲಿ "ಅಕ್ಷರಾಣಾಮಕಾರೋऽಸ್ಮಿ" ಎಂದುದು ಇದನ್ನೇ !

ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮೇಶ್ವರಃ ।
ಆದ್ಯಮಂತ್ಯೇನ ಸಂಯೋಗಾದಹಮಿತ್ಯೇವ ಜಾಯತೇ ॥ ೪ ॥

ಅಕಾರವು ಎಲ್ಲವರ್ಣಗಳಿಗೂ ಮೊದಲನೆಯದು. ಅದು ಪ್ರಕಾಶಮಯನಾದ ಪರಶಿವ ಸ್ವರೂಪ. ಈ 'ಅ' ಕಾರವು ಕಡೆಯ ಸೂತ್ರದಲ್ಲಿರುವ 'ಹ' ಕಾರದೊಡನೆ ಸೇರಿ "ಅಹಂ" ಎಂಬ ರೂಪು ತಳೆಯಿತು. ಎಂದರೆ ಅಕಾರ ಮೊದಲುಗೊಂಡು ಹಕಾರದವರೆಗಿನ ಎಲ್ಲವರ್ಣಗಳೂ "ಅಹಂ" ರೂಪನಾದ ಪರಶಿವನ ಸ್ವರೂಪವೇ. ಇದೇ ಅರ್ಥವನ್ನು ಭಗವತ್ಪಾದರೇಣುಕರು–

ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೇ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂ ಪದೇ ॥
(ಸಿ. ಶಿ. ೨೦)

ಎಂದು ಸಮರ್ಥಿಸಿದ್ದಾರೆ.

ಚರಾಚರಾತ್ಮಕಂ ಪೂರ್ವಂ ಜ್ಞಪ್ತಿರೂಪಮಿದಂ ಜಗತ್ ।
ಜ್ಞಪ್ತೇರ್ಬಭೂವ ಪಶ್ಯಂತೀ ಮಧ್ಯಮಾ ವಾಕ್ ತತಃ ಸ್ಮೃತಾ ॥ ೫ ॥
ವಕ್ತ್ರೇ ವಿಶುದ್ಧಚಕ್ರಾಖ್ಯೇ ವೈಖರೀ ಸಾ ಮತಾ ತತಃ ।
ಸೃಷ್ಟ್ಯಾವಿರ್ಭಾವಮಾಸಾದ್ಯ ಮಧ್ಯಮಾ ವಾಕ್ ಸಮಾ ಮತಾ ॥ ೬ ॥

ಸೃಷ್ಟಿಗೆ ಮೊದಲು ಚರಾಚರಾತ್ಮಕವೂ ಪರಾ-ವಾಕ್-ಸ್ವರೂಪವೂ ಆದ ಈ ವಿಶ್ವವು ಪರಶಿವನಲ್ಲಿ ಜ್ಞಪ್ತಿರೂಪದಿಂದ ಅಡಗಿತ್ತು. ಅದು ಶಿವನ ಸಂಕಲ್ಪದಿಂದ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಮುಂತಾಗಿ ವಿಕಾಸಹೊಂದಿ ಶಬ್ದಾತ್ಮಕವಾಗಿಯೂ ಷಟ್‌ತ್ರಿಂಶತ್-ತತ್ತ್ವಾತ್ಮಕ ವಿಶ್ವವಾಗಿಯೂ ಪರಿಣಮಿಸಿತು.

ಅಕಾರಂ ಸನ್ನಿಧೀಕೃತ್ಯ ಜಗತಾಂ ಕಾರಣತ್ವತಃ ।
ಇಕಾರಂ ಸರ್ವವರ್ಣಾನಾಂ ಶಕ್ತಿತ್ವಾತ್ಕಾರಣಂ ಮತಮ್ ॥ ೭ ॥

ಇಕಾರವಾಚ್ಯವಾದ ಶಕ್ತಿಯು ಅಕಾರವಾಚ್ಯನಾದ ಶಿವನೊಡನೆ ಅವಿನಾಭಾವ–ಸಂಬಂಧದಿಂದ ಕೂಡಿ ಚರಾಚರಪ್ರಪಂಚಕ್ಕೆ ಕಾರಣವಾಯಿತು.

ಜಗತ್-ಸೃಷ್ಟಿಗೆ ಕಾರಣವಾದ ಇಚ್ಛಾಶಕ್ತಿಯನ್ನು ಕಾಮಬೀಜವೆಂದು ಕರೆಯಲಾಗಿದೆ ; ಎಂಬುದು ಮುಂದಿನ ಸೂತ್ರದಿಂದ ವೇದ್ಯವಾಗಿದೆ.

ಜಗತ್ಸ್ರಷ್ಟುಂ ಪ್ರಭೋರಿಚ್ಛಾ ಯದಾ ಹ್ಯಾಸೀತ್ತದಾऽಭವತ್ ।
ಕಾಮಬೀಜಮಿತಿ ಪ್ರಾಹುರ್ಮುನಯೋ ವೇದಪಾರಗಾಃ ॥ ೮ ॥

ಅ– ಇ– ಉ ಈ ಮೂರು ವರ್ಣಗಳಲ್ಲಿ ಅಕಾರವು ಕೇವಲ ಜ್ಞಪ್ತಿಮಾತ್ರ ; ಎಂದರೆ– ಚೈತನ್ಯಸ್ವರೂಪ ಪರಶಿವವಾಚಕ. ಇಕಾರವು ಶಕ್ತಿವಾಚಕ. ಉಕಾರವು ವ್ಯಾಪಕತ್ವ-ಧರ್ಮವುಳ್ಳ ವಿಷ್ಣುವಾಚಕ. ಎಂದರೆ ಶಕ್ತಿವಿಶಿಷ್ಟ-ಪರಶಿವನು ಸಕಲಚರಾಚರಾತ್ಮಕ-ಪ್ರಪಂಚವನ್ನು ವ್ಯಾಪಿಸಿದ್ದಾನೆ ; ಎಂಬ ಭಾವವನ್ನು ಮುಂದಿನ ಕಾರಿಕೆ ಸೂಚಿಸುತ್ತದೆ.

ಅಕಾರೋ ಜ್ಞಪ್ತಿಮಾತ್ರಂ ಸ್ಯಾದಿಕಾರಶ್ಚಿತ್ಕಲಾ ಮತಾ ॥
ಉಕಾರೋ ವಿಷ್ಣುರಿತ್ಯಾಹುರ್ವ್ಯಾಪಕತ್ವಾನ್ಮಹೇಶ್ವರಃ ॥ ೯ ॥

ಪರಮೇಶ್ವರನು 'ಏಕಮೇವಾದ್ವಿತೀಯ'. ಅಂತಹ ಬ್ರಹ್ಮನು ಮಾಯಾರೂಪ ಚಿತ್ಕಲೆಯನ್ನು ಆಶ್ರಯಿಸಿ ಜಗದ್ರೂಪನಾದನು ; ಎಂದರೆ ಅವನ ಅದ್ವಿತೀಯತ್ವಕ್ಕೆ ಭಂಗಬರುವುದಿಲ್ಲವೆ ? ಎಂಬ ಆಶಂಕೆಗೆ ಸಮಾಧಾನ ಹೇಳಲು ಎರಡನೆಯ ಸೂತ್ರವು ಹೊರಟಿದೆ.

ಋ ಲೃಕ್ ॥ ೨ ॥

ಋ- ಪರಮೇಶ್ವರನು ಲೃ- ಮಾಯೆಯಲ್ಲಿ ಮನೋವೃತ್ತಿಯನ್ನು ಕ್- ಪ್ರಕಟಿಸಿದನು. ಎಂದರೆ ಸ್ವೇಚ್ಛೆಯಿಂದ ಆ ಮಾಯೆಯನ್ನು ಆಶ್ರಯಿಸಿ ಜಗತ್ತನ್ನು ಸೃಜಿಸಿದನು. "ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ" ಎಂಬ ಶ್ರುತಿ ಈ ಅರ್ಥವನ್ನು ಸೂಚಿಸಿದೆ. ಶ್ರೀತಂತ್ರದಲ್ಲಿ "ಋತ್ಲೃೋ ಹ್ಯಭೂನ್ಮನೋರೂಪಲ್ಲೃಕಾರಃ ಪರಮೇಶ್ವರಿ" ಎಂದು ಸಮರ್ಥಿಸಲಾಗಿದೆ. ಶಬ್ದಶಾಸ್ತ್ರದಲ್ಲಿ ಋ-ಲೃ ವರ್ಣಗಳಿಗೆ ಮಿಥಃ (ಪರಸ್ಪರ) ಸಾವರ್ಣ್ಯ ಎಂದರೆ ತಾದಾತ್ಮ್ಯವನ್ನು ಹೇಳಲಾಗಿದೆ. ಅದರಂತೆ ಶಿವ-ಶಕ್ತಿಗಳಿಗೆ ತಾದಾತ್ಮ್ಯವೇ ಇರುವುದರಿಂದ ಶಿವನ ಅದ್ವಿತೀಯಕ್ಕೆ ಹಾನಿ ಬರಲಿಲ್ಲ. ಇಲ್ಲಿ ಉಕ್ತವಾಗಿರುವ ಮಾಯೆ ಅದ್ವೈತಿಗಳ 'ಮಿಥ್ಯಾ' ರೂಪವಲ್ಲ. ಅದು ಪರಶಿವಶಕ್ತಿರೂಪ. ಈ ಅರ್ಥವನ್ನು ಮುಂದಿನ ಕಾರಿಕೆಯು ಸಮರ್ಥಿಸುತ್ತದೆ.

ಋ-ಲೃಕ್ ಸರ್ವೇಶ್ವರೋ ಮಾಯಾಂ ಮನೋವೃತ್ತಿರದರ್ಶಯತ್ ।
ತಾಮೇವ ವೃತ್ತಿಮಾಶ್ರಿತ್ಯ ಜಗದ್ರೂಪಮಜೀಜನತ್ ॥ ೧೦ ॥

ವೃತ್ತಿವೃತ್ತಿಮತೋರತ್ರ ಭೇದಲೇಶೋ ನ ವಿದ್ಯತೇ ।
ಚಂದ್ರಚಂದ್ರಿಕಯೋರ್ಯದ್ವತ್ ತಥಾ ವಾಗರ್ಥಯೋರಪಿ ॥ ೧೧ ॥

ಚಂದ್ರ-ಚಂದ್ರಿಕೆಗಳಿಗೆ, ಶಬ್ದ-ಅರ್ಥಗಳಿಗೆ ಹೇಗೆ ಅವಿನಾಭಾವವೋ ಅದರಂತೆ ವೃತ್ತಿ-ವೃತ್ತಿಮತ್ ಎಂದರೆ ಧರ್ಮಧರ್ಮಿಗಳಿಗೆ ಭೇದವಿಲ್ಲ.

ಸ್ವೇಚ್ಛಯಾ ಸ್ವಸ್ಯ ಚಿಚ್ಛಕ್ತೌ ವಿಶ್ವಮುನ್ಮೀಲಯತ್ಯಸೌ ।
ವರ್ಣಾನಾಂ ಮಧ್ಯಮಂ ಕ್ಲೀಬಮೃಲೃವರ್ಣದ್ವಯಂ ವಿದುಃ ॥ ೧೨ ॥

ಈ ಕಾರಿಕೆಯಲ್ಲಿ ಪರಶಿವನು ತನ್ನ ಚಿಚ್ಛಕ್ತಿಯಲ್ಲಿ ಬೆರೆತು ವಿಶ್ವವನ್ನು ಸೃಜಿಸಿದನೆಂದು ಶಕ್ತಿವಿಶಿಷ್ಟಾದ್ವೈತದ ಹೃದಯವನ್ನೇ ರೂಪಿಸಲಾಗಿದೆ.

ಹಿಂದಿನ ಕಾರಿಕೆಯಲ್ಲಿ "ತಾಮೇವ ವೃತ್ತಿಮಾಶ್ರಿತ್ಯ ಜಗದ್ರೂಪಮಜೀಜನತ್" ಎಂದು ಹೇಳಿರುವುದರಿಂದ ಜಗತ್ತು ಮತ್ತು ಶಿವರಿಗೆ ಜನ್ಯ-ಜನಕಭಾವವನ್ನು ಒಪ್ಪಿದಂತಾಯಿತು. ಇದರಿಂದ ಶಿವನ ಅದ್ವಿತೀಯತ್ವಕ್ಕೆ ಭಂಗಬರುವುದಿಲ್ಲವೆ ? ಎಂದರೆ- ಈ ಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರವು ಹೊರಟಿದೆ-

ಏ ಓ ಙ್ ॥ ೩ ॥

ಏ ಓ ಙ್ ಮಾಯೇಶ್ವರಾತ್ಮೈಕ್ಯಂ ವಿಜ್ಞಾನಂ ಸರ್ವವಸ್ತುಷು ।
ಸಾಕ್ಷಿತ್ವಾತ್ ಸರ್ವಭೂತಾನಾಂ ಸ ಏಕ ಇತಿ ನಿಶ್ಚಿತಮ್ ॥ ೧೩ ॥

"ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯಂತೆ ಶಿವನು ಜಗತ್ತನ್ನು ಸೃಜಿಸಿ ತಾನೆ ಜಗದ್ರೂಪನಾಗಿ ಪರಿಣಮಿಸುವುದರಿಂದ ಶಿವ-ಜಗತ್ತುಗಳಿಗೆ ಜನ್ಯಜನಕಭಾವವಿಲ್ಲ ; ಎಂದರೆ ಶಿವನ ಅದ್ವಿತೀಯತ್ವಕ್ಕೆ ಭಂಗ ಬರುವುದಿಲ್ಲವೆಂಬುದು "ಸ ಏಕ ಇತಿ ನಿಶ್ಚಿತಂ" ಎಂಬ ಉಕ್ತಿಯಲ್ಲಿ ಸ್ಪಷ್ಟವಾಗಿದೆ. ಆಕಾರ ಮತ್ತು ಉಕಾರಗಳ ಸಂಯೋಗದಿಂದ (ಗುಣ) ನಿಷ್ಪನ್ನವಾದ ಪ್ರಣವರೂಪ ಓಂಕಾರದಿಂದ ಸಗುಣ ಮತ್ತು ನಿರ್ಗುಣಗಳಿಗೆ ಏಕತ್ವವು ಸಿದ್ಧವಾಗುತ್ತದೆ. ಅ+ಇ=ಏ, ಅ+ಉ=ಓ ಎಂಬ ಸಂಯೋಗವು ಅಕ್ಷರಸಮನ್ವಯವನ್ನು ಬೋಧಿಸುತ್ತದೆ. ಯಾವುದು ಅ-ಅಕ್ಷರಾತ್ಮಕವೊ ಇ- ಮಾಯೆಯಿಂದ ಕೂಡಿದೆಯೋ ಅದು ಅ-ಉ=ಪ್ರಜ್ಞಾಸ್ವರೂಪ ; ಎಂದರೆ ಪ್ರಜ್ಞಾತ್ಮ. ಎಲ್ಲ ವಸ್ತುಗಳೂ ಒಂದು ಎಂಬುದರಿಂದ ಅದ್ವೈತವು ಸಿದ್ಧಿಸುತ್ತದೆ. ಇದರಿಂದ ಅನೇಕತ್ವವಾಗಲಿ, ಜನ್ಯ-ಜನಕಭಾವವಾಗಲಿ ಬರುವುದಿಲ್ಲ ; ಎಂದರೆ– ಪರಶಿವನು ಜಗತ್ತನ್ನು ಸೃಜಿಸಿ ಜಗದ್ರೂಪವಾಗಿಯೇ ಪರಿಣಮಿಸಿರುವುದರಿಂದ ಹಿಂದೆ ಸೂಚಿಸಿದಂತೆ ಅ-ಇ-ಉ-ಋ-ಲೃ ಎಂಬ ಐದು ವರ್ಣಗಳೇ 'ವಟಬೀಜ' ನ್ಯಾಯದಂತೆ ನಿಖಿಲಜಗತ್ತಿಗೂ ಕಾರಣಗಳೆಂಬುದು ಸ್ಪಷ್ಟವಾಯಿತು. ಮುಂದಿನ ಸೂತ್ರಗಳಲ್ಲಿ ಹೇಳಿರುವ ಉಳಿದ ಎಲ್ಲವರ್ಣಗಳೂ ಇವುಗಳಿಂದಲೇ ಜನಿಸಿವೆ.

ಸನಕ– ದಕ್ಷಿಣಾಮೂರ್ತಿಸಂವಾದದಲ್ಲಿ ಮಹಾವಾಕ್ಯವನ್ನು ವಿವರಿಸುವ ಸಂದರ್ಭದಲ್ಲಿ–

ಶೃಣು ತ್ವಂ ಸಾವಧಾನೇನ ಚತುರ್ಣಾಂ ಚ ಸಮಾನತಾಮ್ ।
ವೇದಾನಾಂ ಚ ಮಹಾಭಾಗ ಚತುಷ್ಟಯಮಿಹೋಚ್ಯತೇ ॥

ಬ್ರಹ್ಮಶಬ್ದೇನ ಯದ್ವಸ್ತು ತತ್ಪ್ರಜ್ಞಾನಮಿತೀರಿತಮ್ ।
ಪ್ರಜ್ಞಾನಂ ಬ್ರಹ್ಮ ಯಸ್ಮಾದ್ಧಿ ತಸ್ಮಾತ್ ಬ್ರಹ್ಮಾಹಮಸ್ಮ್ಯಹಮ್ ॥
ತದ್ಬ್ರಹ್ಮ ಸರ್ವಸಾಕ್ಷೀತಿ ತತ್ತ್ವಮಸ್ಯೇವ ತತ್ತ್ವತಃ ।
ಅನ್ಯತ್ವವಾರಣಾರ್ಥಾಯ ಯಮಾತ್ಮೇತ್ಯಪಿ ವರ್ಣ್ಯತೇ ॥

ಸ್ವಾತ್ಮಭೂತವಾದ ಪರಶಿವನು ಜಗತ್ತಿಗೆ ಕಾರಣನಾಗುವುದು ಹೇಗೆ? ಎಂಬ ಶಂಕೆಗೆ ಸಮಾಧಾನವನ್ನು ಮುಂದಿನ ಸೂತ್ರವು ಹೇಳುತ್ತದೆ.

## ಐ ಔ ಚ್ ॥ ೪ ॥

ಐ ಔ ಚ್ ಬ್ರಹ್ಮಸ್ವರೂಪಸ್ಸನ್ ಜಗತ್ ಸ್ವಾಂತರ್ಗತಂ ತತಃ ।
ಇಚ್ಛಯಾ ವಿಸ್ತೃತಂ ಕರ್ತುಮಾವಿರಾಸೀನ್ಮಹಾಮುನಿಃ ॥ ೧೪ ॥

ತನ್ನಲ್ಲಿ "ಮಯೂರಾಂಡರಸ" ನ್ಯಾಯದಂತೆ ಸೂಕ್ಷ್ಮರೂಪವಾಗಿ ಅಡಗಿರುವ ಜಗತ್ತನ್ನು ವಿಸ್ತರಿಸಲು ಸಂಕಲ್ಪಿಸಿದ ಪರಶಿವನು– ಜ್ಞಾನಶಕ್ತಿಯುತನಾದ ; ಎಂದರೆ– ಇಚ್ಛಾ-ಜ್ಞಾನ-ಕ್ರಿಯಾ-ಶಕ್ತಿಗಳಲ್ಲಿ ಬೆರೆತನು. ಅದರಿಂದ ಅಕಾರಕ್ಕೆ ಏ (ಅ+ಏ=ಐ) ಕಾರವು ಸೇರಿ ಐ (ವೃದ್ಧಿ) ಕಾರವಾಯಿತು. ಎಂದರೆ ಪರಶಿವನು ಹಿಂದೆ ಹೇಳಿದಂತೆ ಸಂಪ್ರಜ್ಞಾತನೆಂದು ಸಿದ್ಧವಾಯಿತು. ಇದರಂತೆ ಅಕಾರಕ್ಕೆ ಓ (ಅ+ಓ=ಔ) ಓಕಾರವು ಸೇರಿ ಔ ಆಯಿತು ; ಎಂದರೆ ಸಂಪ್ರಜ್ಞಾತಸ್ವರೂಪನಾದ ಪರಶಿವನು ಮಾಯಾಶಬಳಿತನಾದ. ಒಟ್ಟಿನಲ್ಲಿ "ಪ್ರಣವೇನ ಜಗದ್ವ್ಯಾಪ್ತಂ ಮಾಯಯಾಯಾಮುನ ತಿಷ್ಠತೇ" ಎಂಬ ಪ್ರಣವದ ವಿಕಾಸರೂಪವಾದ ಅ ಆ, ಇ ಈ, ಉ ಊ, ಋ ೠ, ಲೃ, ಏ ಐ, ಓ ಔ ಎಂಬ ಹದಿಮೂರು ವರ್ಣಗಳ ಸಮುದಾಯದಿಂದ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧ ವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ ಮತ್ತು ಪ್ರಕೃತಿ ಎಂಬ ಹದಿಮೂರು ತತ್ತ್ವಗಳು ಹುಟ್ಟಿದವು.

ಪ್ರಕೃತಿ– ಪುರುಷ ವಿವೇಕವನ್ನು ಮುಂದೆ ವಿಸ್ತರಿಸಲಾಗುತ್ತದೆ. ಇಲ್ಲಿ ಲೃ ವರ್ಣಕ್ಕೆ ದೀರ್ಘವನ್ನೂ ಸೇರಿಸಿದರೆ ಹದಿನಾಲ್ಕು ಸ್ವರಗಳಾಗುತ್ತವೆ. ಆಗ ಹದಿನಾಲ್ಕು ಭುವನಗಳು, ಚತುರ್ದಶ ಚಕ್ರಗಳು ಮುಂತಾಗಿ ನಿರ್ಧರಿಸಬೇಕು. ಶಿವ-ಗೌರೀ ಸಂವಾದವುಳ್ಳ "ಮಹಾಮಂತ್ರತತ್ತ್ವ-ಪ್ರಕಾಶಿನಿ" ಯಲ್ಲಿ–

ತವ ಮಂತ್ರೋಽಹಮೀಶಾನಿ ಮಮ ರೂಪಂ ತ್ವಮೇವ ಹಿ ।
ಚತುರ್ದಶಾತ್ಮಕಂ ಚಕ್ರಂ ಸ್ವರಚಕ್ರಮಿತೀರಿತಮ್ ॥

ತ್ರಯೋದಶಾತ್ಮಕಂ ತುರ್ಯಮಾವಯೋರ್ಮಂತ್ರಮಂಬಿಕೆ ।
ಉಚ್ಛೂನಕಾಲೇ ಬಿಂದ್ವಾತ್ಮಾ ತಸ್ಮಾದಕ್ಷರಸಂಭವಃ ॥

ಬಿಂದುಸ್ಫೋಟನಮಾತ್ರೇಣ ವರ್ಣಾನಾಂ ಚ ಸಮುದ್ಭವಃ ।
ತಸ್ಮಾದ್ವ್ಯೋಮಾದಿಕಂ ಭೂತಪಂಚಕಂ ಸಮಜಾಯತ ॥

ಬಿಂದುಃ ಶ್ರೀಚಕ್ರರಾಜಸ್ಯ ಪರಬ್ರಹ್ಮಾತ್ಮಕಸ್ತ್ವಿತಿ ।
ಚತುರ್ದಶಾತ್ಮಕಃ ಪಶ್ಚಾಚ್ಚಕ್ರಾಕಾರೇಣ ಸಂಭವಃ ।
ತಾನ್ಯೇವ ಭುವನಾನ್ಯತ್ರ ಚತುರ್ದಶ ಚತುರ್ದಶ ॥

**ಪಂಚಭೂತಗಳ ಉತ್ಪತ್ತಿ**

ಮುಂದಿನ ಸೂತ್ರವು ಶಕ್ತಿವಿಶಿಷ್ಟಪರಶಿವನಿಂದ ಆಕಾಶ-ವಾಯು-ವಹ್ನಿ-ಸಲಿಲಗಳೆಂಬ ನಾಲ್ಕು ತತ್ತ್ವಗಳ ಉತ್ಪತ್ತಿಯನ್ನು ಸೂಚಿಸುತ್ತದೆ.

ಹ ಯ ವ ರ ಟ್ ॥ ೫ ॥

ಭೂತಪಂಚಕಮೇತಸ್ಮಾದ್ಧಯವರಟ್ ಮಹೇಶ್ವರಾತ್ ।
ವ್ಯೋಮವಾಯ್ವಂಬುವಹ್ನ್ಯಾಖ್ಯಭೂತಾನ್ಯಾಸೀತ್ಸ ಏವ ಹಿ ॥ ೧೫ ॥

ಹಕಾರದಿಂದ ಆಕಾಶ, ಯಕಾರದಿಂದ ವಾಯು, ರೇಫದಿಂದ ಅಗ್ನಿ, ವಕಾರದಿಂದ ಜಲ ತತ್ತ್ವಗಳು ಹುಟ್ಟಿದವು ಎಂಬ ಕ್ರಮವನ್ನು ಮುಂದಿನ ಕಾರಿಕೆ ಹೇಳುತ್ತದೆ–

ಹಕಾರಾದ್ವ್ಯೋಮ ಸಂಜ್ಞಂ ಚ ಯಕಾರಾದ್ವಾಯುರುಚ್ಯತೇ ।
ರಕಾರಾದ್ವಹ್ನಿಸ್ತೋಯಂ ತು ವಕಾರಾದಿತಿ ಸೈವ ವಾಕ್ ॥ ೧೬ ॥

"ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಜಾತಃ" ಎಂಬ ಶ್ರುತಿಯ ಆಶಯವೇ ಇಲ್ಲಿ ಉಕ್ತವಾಗಿದೆ.

ಮೇಲಿನ ಸೂತ್ರದಲ್ಲಿ ಆಕಾಶಾದಿಪಂಚಭೂತಗಳಲ್ಲಿ ಆಕಾಶ-ವಾಯು-ವಹ್ನಿ-ಜಲ ಎಂಬ ನಾಲ್ಕು ತತ್ತ್ವಗಳನ್ನು ಹೇಳಿಯಾಯಿತು. ಮುಂದಿನ ಸೂತ್ರವು ಎಲ್ಲ ಭೂತಗಳಿಗೂ ಆಧಾರವಾಗಿರುವ ಪೃಥಿವಿಯ ಉತ್ಪತ್ತಿಯನ್ನು ಹೇಳುತ್ತದೆ–

ಲಣ್ ॥ ೬ ॥

ಆಧಾರಸ್ಸರ್ವಭೂತಾನಾಮನ್ನಾದೀನಾಂ ಚ ಕಾರಣಮ್ ।
ಅನ್ನಾದ್ರೇತಸ್ತತೋ ಜೀವಃ ಕಾರಣತ್ವಾಲ್ಲಣೀಶ್ವರಃ ॥ ೧೭ ॥

ಎಲ್ಲ ಪ್ರಾಣಿಗಳಿಗೆ, ಉದ್ಭಿಜವೆನಿಸಿದ ಗಿಡ-ಮರ-ಬಳ್ಳಿಗಳಿಗೆ, ಸ್ವೇದಜ, ಜರಾಯುಜ, ಅಂಡಜ ಮೊದಲಾದವುಗಳಿಗೆಲ್ಲ ಮುಖ್ಯವಾದ ಆಧಾರವಾಗಿರುವ ಪೃಥಿವಿಯು ಲಕಾರದಿಂದ ಜನಿಸಿತು. "ಅನ್ನಾದ್ರೇತಃ" ಎಂಬ ಶ್ರುತಿ ಇದನ್ನು ಸಮರ್ಥಿಸುತ್ತದೆ.

**ಪಂಚತನ್ಮಾತ್ರಗಳ ಉತ್ಪತ್ತಿ**

ಮುಂದಿನ ಸೂತ್ರವು ಈ ಐದು ಭೂತಗಳಿಗೆ ಅಸಾಧಾರಣಗುಣಗಳಾಗಿರುವ ತನ್ಮಾತ್ರ ಗಳು ಪರಶಿವನಿಂದ ಉದಿಸಿದವು ; ಎಂದು ಹೇಳುತ್ತದೆ-

**ಞ ಮ ಙ ಣ ನ ಮ್ ॥ ೭ ॥**

ಶಬ್ದಸ್ಪರ್ಶೌ ರೂಪರಸಗಂಧಾಶ್ಚ ಞಮಙಣನಮ್ ।
ವ್ಯೋಮಾದೀನಾಂ ಗುಣಾಹ್ಯೇತೇ ಜಾನೀಯಾತ್ಸರ್ವವಸ್ತುಷು ॥ ೧೮ ॥

ಈ ಸೂತ್ರದಲ್ಲಿರುವ ಞ ಕಾರದಿಂದ ಆಕಾಶದ ಗುಣ-ಶಬ್ದ, ಮಕಾರದಿಂದ ವಾಯುವಿನ ಗುಣ-ಸ್ಪರ್ಶ, ಙ್ ಕಾರದಿಂದ ಅಗ್ನಿಯ ಗುಣ-ರೂಪ, ಣ ಕಾರದಿಂದ ಸಲಿಲದ ಗುಣ ರಸ, ನ ಕಾರ ದಿಂದ ಪೃಥಿವಿಯ ಗುಣ-ಗಂಧ ಎಂಬ ಐದು ತನ್ಮಾತ್ರಗಳು ಉದಿಸಿದವು.

**ಕರ್ಮೇಂದ್ರಿಯಗಳ ಉತ್ಪತ್ತಿ**

**ಝ ಭ ಞ್ ॥ ೮ ॥**

ವಾಕ್ಪಾಣೀ ಚ ಝಭಞ್ಆಸೀದ್ವಿರಾಡ್ರೂಪಂ ಚಿದಾತ್ಮನಃ ।
ಸರ್ವಜಂತುಷು ವಿಜ್ಞೇಯಂ ಸ್ಥಾವರಾದೌ ನ ವಿದ್ಯತೇ ॥
ವರ್ಗಾಣಾಂ ತುರ್ಯವರ್ಣಾ ಯೇ ಕರ್ಮೇಂದ್ರಿಯಮಯಾ ಹಿ ತೇ ॥೧೯॥

ವಿರಾಡ್ರೂಪನಾದ ಚಿದಾತ್ಮನ ದೆಸೆಯಿಂದ ಸ್ಥಾವರಗಳ ಹೊರತು ಉಳಿದ ಎಲ್ಲ ಪ್ರಾಣಿಗಳ ಮುಖ್ಯಕರ್ಮೇಂದ್ರಿಯಗಳೆನಿಸಿರುವ ವಾಕ್-ಪಾಣಿತತ್ತ್ವಗಳು, ಚವರ್ಗ ಮತ್ತು ಪವರ್ಗಗಳ ನಾಲ್ಕನೆಯ ವರ್ಣಗಳಾದ ಝ-ಭ ಗಳಿಂದ ಕ್ರಮವಾಗಿ ಹುಟ್ಟಿದವು.

ಮುಂದಿನ ಸೂತ್ರವು ಕರ್ಮೇಂದ್ರಿಯಗಳಲ್ಲಿ ಉಳಿದವುಗಳ ಉತ್ಪತ್ತಿಯನ್ನು ಹೇಳುತ್ತದೆ-

**ಘ ಢ ಧ ಷ್ ॥ ೯ ॥**

ಘ ಢ ಧ ಷ್ ಸರ್ವಭೂತಾನಾಂ ಪಾದಪಾಯೂ ಉಪಸ್ಥಕಃ ।
ಕರ್ಮೇಂದ್ರಿಯಗಣಾಹ್ಯೇತೇ ಜಾತಾ ಹಿ ಪರಮಾರ್ಥತಃ ॥ ೨೦ ॥

ಇಲ್ಲಿ ಘ ಕಾರದಿಂದ ಪಾದತತ್ತ್ವ, ಢ ಕಾರದಿಂದ ಪಾಯುತತ್ತ್ವ, ಧ ಕಾರದಿಂದ ಉಪಸ್ಥ ತತ್ತ್ವ, ಎಂಬ ಕರ್ಮೇಂದ್ರಿಯಗಳು ಉದಿಸಿದವು.

### ಜ್ಞಾನೇಂದ್ರಿಯಗಳ ಉತ್ಪತ್ತಿ

ಮುಂದಿನ ಸೂತ್ರವು ಜ್ಞಾನೇಂದ್ರಿಯಗಳ ಉತ್ಪತ್ತಿಯನ್ನು ಹೇಳುತ್ತದೆ.

ಜ ಬ ಗ ಡ ದ ಶ್ ॥ ೧೦ ॥

ಶ್ರೋತ್ರಸ್ತ್ವ ನಯನ-ಘ್ರಾಣಜಿಹ್ವಾದೀಂದ್ರಿಯಪಂಚಕಮ್ ।
ಸರ್ವೇಷಾಮಪಿ ಜಂತೂನಾಮೀರಿತಂ ಜ ಬ ಗ ಡ ದಶ್ ॥ ೨೧ ॥

ವರ್ಗಾಣಾಂ ಮಧ್ಯವರ್ಣೋತ್ಥಾ ಜ್ಞಾನೇಂದ್ರಿಯಗಣಾ ಸ್ಮೃತಾಃ ॥

ಎಂಬಂತೆ ಐದೂ ವರ್ಗಗಳ ಮಧ್ಯಮವರ್ಣಗಳೆನಿಸಿರುವ ಜ-ಬ-ಗ-ಡ-ದ ಎಂಬ ಐದೂ ವರ್ಣಮೂರ್ತಿಯಾದ ಪರಶಿವನ ದೆಶೆಯಿಂದ ಕ್ರಮವಾಗಿ ಶ್ರೋತ್ರ, ತ್ವಕ್, ನಯನ, ಘ್ರಾಣ ಮತ್ತು ಜಿಹ್ವೆ ಎಂಬ ಜ್ಞಾನೇಂದ್ರಿಯಗಳು ಜನಿಸಿದವು

### ಪಂಚಪ್ರಾಣಾದಿಗಳು-

ಖ ಫ ಛ ಠ ಥ ಚ ಟ ತ ವ್ ॥ ೧೧ ॥

ಪ್ರಾಣಾದಿಪಂಚಕಂ ಚೈವ ಮನೋಬುದ್ಧಿರಹಂಕೃತಿಃ ।
ಬಭೂವ ಕಾರಣತ್ವೇನ ಖ ಫ ಛ ಠ ಥ ಚ ಟ ತ ವ್ ॥ ೨೨ ॥

ವರ್ಗಗಳ ಎರಡನೆಯ ಮಹಾಪ್ರಾಣಗಳೆನಿಸಿರುವ ಖ-ಫ-ಛ-ಠ-ಥ ವೆಂಬ ಐದು ವರ್ಣರೂಪಪರಶಿವನಿಂದ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನ ಎಂಬ ಪಂಚಪ್ರಾಣಗಳೂ, ಚ-ಟ-ತ ಎಂಬ ವರ್ಣತ್ರಯರೂಪಶಿವನಿಂದ ಕ್ರಮವಾಗಿ ಮನಸ್ಸು-ಬುದ್ಧಿ-ಅಹಂಕಾರವೆಂಬ ಮೂರು ತತ್ತ್ವಗಳೂ ಹುಟ್ಟಿದವು.

ವರ್ಗದ್ವಿತೀಯವರ್ಣೋತ್ಥಾಃ ಪ್ರಾಣಾದ್ಯಾಃ ಪಂಚ ವಾಯವಃ ।
ವರ್ಗಮಧ್ಯತ್ರಯಾ ಜ್ಞಾತಾ ಅಂತಃಕರಣವೃತ್ತಯಃ ॥ ೨೩ ॥

ವರ್ಗಗಳ ಎರಡನೆಯ ವರ್ಣಗಳಾದ ಮಹಾಪ್ರಾಣಾಕ್ಷರಗಳಿಂದ ಮೇಲೆ ಹೇಳಿದ ಪಂಚಪ್ರಾಣಗಳೂ, ಮಧ್ಯದ ಮೂರು ವರ್ಗಗಳ ಮೊದಲ ವರ್ಣಗಳಿಂದ ಅಂತಃಕರಣಗಳೂ ಜನಿಸಿದವು.

### ಪ್ರಕೃತಿ-ಪುರುಷ

ಎಲ್ಲವಿಧವಾದ ಭೂತಪಂಚಕ, ತನ್ಮಾತ್ರಾಪಂಚಕ, ಕರ್ಮೇಂದ್ರಿಯ ಪಂಚಕ ಮತ್ತು ಜ್ಞಾನೇಂದ್ರಿಯಪಂಚಕಗಳೆಂಬ ಇಪ್ಪತ್ತು ತತ್ತ್ವಗಳು ಹಾಗೂ ಮನಸ್ಸು ಬುದ್ಧಿ ಮತ್ತು ಅಹಂಕಾರ ಎಂಬ ಇಪ್ಪತ್ತಮೂರು ತತ್ತ್ವಗಳಿಗೆ ಮೂಲವೆನಿಸಿರುವ ಪ್ರಕೃತಿ-ಪುರುಷತತ್ತ್ವಗಳ ಉತ್ಪತ್ತಿಯನ್ನು ಮುಂದಿನ ಸೂತ್ರವು ನಿರ್ದೇಶಿಸುತ್ತದೆ.

ಕ ಪ ಯ್ ॥ ೧೨ ॥

ಪ್ರಕೃತಿಃ ಪುರುಷಶ್ಚೈವ ಸರ್ವಷಾಮೇವ ಸಮ್ಮತಾ ।
ಸಂಭೂತಾವಿತಿ ವಿಜ್ಞೇಯಂ ಕಪಯ್‌ಸ್ಯಾದಿತಿ ನಿಶ್ಚಿತಮ್ ॥ ೨೪ ॥

ವರ್ಗಗಳ ಮೊದಲನೆಯ ಕವರ್ಗದ ಮೊದಲನೆಯ ಕಕಾರದಿಂದ ಪ್ರಕೃತಿತತ್ತ್ವವೂ ಕಡೆಯ ಪವರ್ಗದ ಮೊದಲ ಪಕಾರದಿಂದ ಪುರುಷತತ್ತ್ವವೂ ಉದಯಿಸಿದವು. ಇಲ್ಲಿ ಎಲ್ಲ ಪ್ರಾಣಿಗಳಿಗೆ ಕಾರಣವಾಗಿರುವ ಆದಿ ಮತ್ತು ಅಂತ್ಯ ವರ್ಗಗಳ ಮೊದಲ ವರ್ಣಗಳೆರಡನ್ನು ಗ್ರಹಿಸಿರುವುದರಿಂದ ಪ್ರಕೃತಿ-ಪುರುಷರ ಸಂಪುಟೀಭಾವವು ವ್ಯಕ್ತವಾಗುತ್ತದೆ. ನಂದೀಕೇಶ್ವರನ ಈ ಇಪ್ಪತ್ತು ನಾಲ್ಕು ಕಾರಿಕೆಗಳಲ್ಲಿ ಶಿವಾಗಮಪ್ರಸಿದ್ಧವಾದ ಮೂವತ್ತಾರು ತತ್ತ್ವಗಳು ಸಂಗ್ರಹಿಸಲ್ಪಟ್ಟಿವೆ.

**ಗುಣತ್ರಯ**

**ಶ ಷ ಸ ರ್ ॥ ೧೩ ॥**

ಸತ್ವಂ ರಜಸ್ತಮ ಇತಿ ಗುಣಾನಾಂ ತ್ರಿತಯಂ ಪುರಾ ।
ಸಮಾಶ್ರಿತ್ಯ ಮಹಾದೇವಃ ಶಷಸರ್ ಕ್ರೀಡತಿ ಪ್ರಭುಃ ॥ ೨೫ ॥

ಶಕಾರಾದ್ರಾಜಸೋತ್ಪತ್ತಿಃ ಷಕಾರಾತ್ತಾಮಸೋದ್ಭವಃ ।
ಸಕಾರಾತ್ಸತ್ವಸಂಭೂತಿರಿತಿ ತ್ರಿಗುಣಸಂಭವಃ ॥ ೨೬ ॥

ಸೃಷ್ಟಿಗೆ ಮೊದಲು ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರು ಗುಣಗಳನ್ನು ಆಶ್ರಯಿಸಿ ಪ್ರಭುವಾದ ಪರಶಿವನು ಶ-ಷ-ಸ ಎಂಬ ವರ್ಣಗಳಿಂದ ಕ್ರಮವಾಗಿ ರಜಸ್ಸು, ತಮಸ್ಸು ಮತ್ತು ಸತ್ತ್ವ ಗುಣಗಳನ್ನು ಆಶ್ರಯಿಸಿ ಎಲ್ಲ ಭೂತಗಳಲ್ಲಿಯೂ ಕ್ರೀಡಿಸುತ್ತಿದ್ದಾನೆ.

**ಅಹಂ ಪರಬ್ರಹ್ಮ**

ಹೀಗೆ ಗುಣತ್ರಯವನ್ನು ಆಶ್ರಯಿಸಿ ಎಲ್ಲ ಭೂತಗಳಲ್ಲಿ ಕ್ರೀಡಿಸುತ್ತಿದ್ದರೂ ಸಹ ಪರಶಿವನು "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಎಂಬ ಶ್ರುತಿಯಂತೆ ಸರ್ವತತ್ತ್ವಜನಕನಾಗಿದ್ದರೂ ಕೂಡ ಅವನು ತತ್ತ್ವಾತೀತನಾಗಿರುವನೆಂಬುದನ್ನು ಕಡೆಯ ಸೂತ್ರವು ಸೂಚಿಸುತ್ತದೆ.

**ಹಲ್ ॥ ೧೪ ॥**

ತತ್ತ್ವಾತೀತಃ ಪರಃ ಸಾಕ್ಷೀ ಸರ್ವಾನುಗ್ರಹವಿಗ್ರಹಃ ।
ಅಹಮಾತ್ಮಾ ಪರೋ ಹಲ್ ಸ್ಯಾಮಿತಿ ಶಂಭುಸ್ತಿರೋದಧೇ ॥ ೨೭ ॥

ಹೀಗೆ ಪರಶಿವನು ತನ್ನ ಲೀಲೆಗಾಗಿ ತನ್ನಲ್ಲಿ ಸೂಕ್ಷ್ಮರೂಪದಿಂದ ಅಡಗಿದ್ದ ಈ ವಿಶ್ವವನ್ನು ತನ್ನಲ್ಲಿಯೇ ಅನನ್ಯವೆನಿಸಿರುವ ಚಿಚ್ಛಕ್ತಿಯ ಸಹಾಯದಿಂದ ಮೂವತ್ತಾರು ತತ್ತ್ವಾತ್ಮಕವಾಗಿ ವಿಸ್ತರಿಸಿದನು. ಅನಂತರ ಆ ವಿಶ್ವದಲ್ಲಿ ತಾನೇ ಸೇರಿ ಸತ್ತ್ವರಜಸ್ತಮೋಗುಣಗಳ ಮೂಲಕ ಬೇಕಾದ ಹಾಗೆ ಕ್ರೀಡಿಸಿದನು. ತರುವಾಯ ಅವನು ತತ್ತ್ವಾತೀತನಾದ್ದರಿಂದ ವಿಶ್ವದಲ್ಲಿ ಇದ್ದೂ ಇಲ್ಲದಂತೆ ಈ ಚರಾಚರಾತ್ಮಕವಾದ ಜಗತ್ತಿಗೆ ಪರನೂ ಸಾಕ್ಷಿಭೂತನೂ "ಅಹಂ" ಪದವಾಚ್ಯನೂ ಆಗಿ ಅರ್ಹರಾದ ಎಲ್ಲ ಸಾಧಕರನ್ನು ಅನುಗ್ರಹಿಸುವೆನು ಎಂದು ಅಭಯವಿತ್ತು ಅಂತರ್ಧಾನನಾದನು.

ಹೀಗೆ ಪರಶಿವನು ನೃತ್ತಾವಸಾನದಲ್ಲಿ ಸನಕಾದಿಮಹರ್ಷಿಗಳ ಪ್ರಾರ್ಥನೆಯಂತೆ ಹದಿನಾಲ್ಕು ಸಲ ನುಡಿಸಿದ ಡಮರುಗದಿಂದ ಧ್ವನಿಸಿದ ಮಾಹೇಶ್ವರಸೂತ್ರಗಳು ಮೊದಲೇ ಹೇಳಿದಂತೆ ವಾಕ್‌ಜ್ಞಾನಕ್ಕಾಗಿಯೂ ಬ್ರಹ್ಮಬೋಧಕವಾಗಿಯೂ ಇವೆ. ಈ ಗುಟ್ಟನ್ನು ಗಮನಿಸಿಯೇ ನಂದಿ

ಕೇಶ್ವರಶಿವಾಚಾರ್ಯರು ಆ ಸೂತ್ರಗಳ ರಹಸ್ಯಾರ್ಥವನ್ನು ತನ್ನ ಕಾರಿಕೆಗಳ ಮೂಲಕ ಲೋಕಹಿತಾರ್ಥವಾಗಿ ಪ್ರಕಾಶಪಡಿಸಿದರು.

೮

## ಪ್ರವೃತ್ತಿಯಲ್ಲಿ ಷಟ್‌ತ್ರಿಂಶತ್ತತ್ತ್ವಕ್ರಮದಿಂದ ಪ್ರಪಂಚಸೃಷ್ಟಿ

ಸೃಷ್ಟಿಗೆ ಮೊದಲು ಪರಮಶಿವ-ಶಕ್ತಿಗಳ ಸೂಕ್ಷ್ಮ-ಸ್ಥೂಲ-ಚಿದಚಿದ್ರೂಪವಾದ ನಾಮ-ರೂಪ-ವಿಭಾಗಕ್ಕೆ ಅನರ್ಹವಾಗಿದ್ದ ದೆಸೆಯನ್ನು ಆಗಮಗಳು ಹೀಗೆ ವರ್ಣಿಸಿವೆ–

"ಚಂದ್ರಸೂರ್ಯರ ಪ್ರಕಾಶವಿಲ್ಲದಾಗ, ಹಗಲುರಾತ್ರಿಯ ವಿಭಾಗವಿಲ್ಲದಾಗ, ನಾಮ-ರೂಪವಿಶೇಷವಿಲ್ಲದಾಗ, ಸೂಕ್ಷ್ಮ-ಸ್ಥೂಲ-ಚೇತನ-ಚೇತನ-ಅಸತ್-ಅಸದ್-ವ್ಯಕ್ತಿವ್ಯವಸ್ಥೆಯಿಲ್ಲದಾಗ, ಇದೆಲ್ಲವೂ ಕತ್ತಲಿನಿಂದ ತುಂಬಿತ್ತು. ಆಗ ನಂದಿಕೇಶ್ವರನು ಹೇಳಿದಂತೆ "ಹಲ್" ಸೂತ್ರನಿರ್ದಿಷ್ಟನೂ ಸರ್ವತತ್ತ್ವಜನಕನೂ ಸ್ವಯಂತತ್ತ್ವಾತೀತನೂ ಆದ ಶಕ್ತಿವಿಶಿಷ್ಟ-ಶಂಭುವು "ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ" ಎಂಬಂತೆ 'ನಾನೇ ಬಹುವಾಗಿ ಆಗುವೆನು.' ಎಂಬ ಭಾವನಾರೂಪವಿಮರ್ಶಶಕ್ತಿರೂಪದಿಂದ ಸೃಷ್ಟಿಸಬಯಸಿದನು. ಆಗ ಆತನಲ್ಲಿದ್ದ ವಿಮರ್ಶಾಶಕ್ತಿಯೇ ಇಚ್ಛಾಶಕ್ತಿಯಾಗಿ ಪರಿಣಮಿಸಿತು.[1]

ಇದನ್ನೇ ವಚನಶಾಸ್ತ್ರವು–

"ಆದಿ ಅನಾದಿ ಇಲ್ಲದಂದು, ಹಮ್ಮು-ಬಿಮ್ಮುಗಳಿಲ್ಲದಂದು, ಸುರಾಳ-ನಿರಾಳವಿಲ್ಲದಂದು, ಶೂನ್ಯ-ನಿಃಶೂನ್ಯವಿಲ್ಲದಂದು, ಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನೊಬ್ಬನೇ ಇದ್ದಿಯಲ್ಲ ಇಲ್ಲದಂತೆ"

"ಅಂತರವಿಲ್ಲದಂದು ಬಾಹ್ಯವಿಲ್ಲದಂದು, ಅಡಿ ಮುಡಿ ಒಡಲು ಮತ್ತೊಂದೆಡೆ ಏನೂ ಇಲ್ಲದಂದು, ದಶದಿಕ್ಕುಗಳು, ವಿಶ್ವಪ್ರಪಂಚಗಳು ಏನೂ ಇಲ್ಲದಂದು, ಸ್ಥಾವರಾತ್ಮಕಂಗಳಿಗೆ ಆಧಾರಕರ್ತೃ ಎಂಬ ನಾಮಂಗಗಳೇನೂ ಇಲ್ಲದಂದು, ಸರ್ವಶೂನ್ಯ-ನಿರಾಲಂಬನಾಗಿದ್ದೆಯಲ್ಲ ; ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ." ಎಂದು ಪರಿಷ್ಕರಿಸಿ ವಿವರಿಸಿದೆ.

"ಸ ಏಕಾಕೀ ನ ರಮತೇ ; ಸದ್ವಿತೀಯಮೈಚ್ಛತ್ ; ಸಚ್ಚಾಸಚ್ಚಾಭವತ್" ಎಂಬಂತೆ ಇವನ ಇಚ್ಛಾಶಕ್ತಿಯೇ ಸೃಷ್ಟಿಮೂಲ.

---

[1] ಯದಾ ತಮಸ್ತನ್ನ ದಿವಾ ನ ರಾತ್ರಿಃ
ನ ಸನ್ನ ಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ಸವಿತುರ್ವರೇಣ್ಯಂ
ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ॥

[ಶ್ವೇತಾಶ್ವತರ.........]

ಸೃಷ್ಟಿರಚನೆಯನ್ನು ಕುರಿತು ವಚನಶಾಸ್ತ್ರದಲ್ಲಿ–

"ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತಲೋಕಗಳನ್ನು ಚಂದ್ರ, ಸೂರ್ಯ, ನಕ್ಷತ್ರ, ಸಿಡಿಲು, ಮಿಂಚುಗಳನ್ನು ಕಾಲ-ಕರ್ಮ-ಪ್ರಳಯಗಳನ್ನು ಹೆಣ್ಣು ಗಂಡು ಇವು ಜಾತಿವಿಜಾತಿಗಳಾದ ನರ-ಸುರ-ತಿರ್ಯಗ್ಜಾತಿ-ಸ್ಥಲ-ಭೋಗ-ಆಯುಷ್ಯ-ನಿದ್ರೆ ಮೊದಲಾದ ಸಮಸ್ತ ಪ್ರಪಂಚಗಳನ್ನು, ಎಂಭತ್ತುನಾಲ್ಕುಲಕ್ಷ ಜೀವರಾಶಿಗಳನ್ನು ಹುಟ್ಟಿಸಿದ ತನ್ನ ವಿನೋದಕ್ಕೆ. ಯಂತ್ರವಾಹಕನು ಮಾಡಿದ ಕಟ್ಟಣೆಯ ನಾನು ತಿಳಿಯಬಾರದುನೋಡಾ ಸರ್ವಾತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರೂ ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು."

"ಶಿವಾಗಮದಲ್ಲಿ ಉಕ್ತವಾಗಿರುವಂತೆ ಉತ್ಪತ್ತಿಯಿಲ್ಲದವನೂ ಪರಮಕಾರಣನೂ ಶಾಂತನೂ ತತ್ತ್ವಾತೀತನೂ ಆದ ಶಿವನ ದೆಸೆಯಿಂದ ಮೊದಲು ಇಚ್ಛಾಶಕ್ತಿಯು ಉದಿಸಿತು. ಅನಂತರ ಜ್ಞಾನಶಕ್ತಿ-ಕ್ರಿಯಾಶಕ್ತಿಗಳುದಿಸಿದವು. ಅವುಗಳಿಂದ ಮೂವತ್ತಾರು ತತ್ತ್ವಾತ್ಮಕವಾದ ಜಗತ್ತು ಉದಿಸಿತು.[1]

**ಷಟ್‌ತ್ರಿಂಶತ್-ತತ್ತ್ವಗಳು–**

ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ (ಶುದ್ಧತತ್ತ್ವಗಳು ೫)
ಮಾಯಾ, ಕಲಾ, ಅವಿದ್ಯಾ, ರಾಗ, ಕಾಲ, ನಿಯತಿ, ಪುರುಷ (ಮಿಶ್ರತತ್ತ್ವಗಳು ೭)
ಪ್ರಕೃತಿ, ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು (ಅಂತಃಕರಣ ೪)
ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ (ಜ್ಞಾನೇಂದ್ರಿಯ ೫)
ವಾಕ್, ಪಾಣಿ, ಪಾದ, ಪಾಯು, ಉಪಸ್ಥಾ (ಕರ್ಮೇಂದ್ರಿಯ ೫)
ಶಬ್ದ, ಸ್ಪರ್ಶ, ರೂಪ, ರಸ, ಗಂಧ (ತನ್ಮಾತ್ರಗಳು ೫)
ಆಕಾಶ, ವಾಯು, ವಹ್ನಿ, ಜಲ, ನೆಲ (ಭೂತಪಂಚಕ)

ಇವುಗಳ ಉತ್ಪತ್ತಿ ಕ್ರಮವು ಹೀಗಿದೆ–

ಇಚ್ಛಾಶಕ್ತಿಗೆ ಜ್ಞಾನಶಕ್ತಿಯು ಅಂತರಂಗ ; ಕ್ರಿಯಾಶಕ್ತಿಯು ಬಹಿರಂಗ. ಪರಶಿವಬ್ರಹ್ಮವು ಇಚ್ಛಾಶಕ್ತಿಗೆ ಅಂತರಂಗವಾಗಿರುವ ಜ್ಞಾನಶಕ್ತಿಯನ್ನು ಪ್ರವೇಶಿಸಿ 'ಸರ್ವಜ್ಞೋಽಹಂ' (ನಾನು ಸರ್ವಜ್ಞನು) ಎಂಬ ಅಭಿಮಾನವನ್ನು ಹೊಂದಿ "ಶಿವತತ್ತ್ವ"ವೆನಿಸುತ್ತದೆ. ಈ ಶಿವತತ್ತ್ವವೇ ಗಡಿಗೆಗೆ– ಕುಂಬಾರನಂತೆ ಭಾವಿಪ್ರಪಂಚವನ್ನು ಕುರಿತು ನಿಮಿತ್ತಕಾರಣವಾಗುತ್ತದೆ.

ಪರಶಿವಬ್ರಹ್ಮವು ಇಚ್ಛಾಶಕ್ತಿಯ -ಬಹಿರಂಗವಾಗಿರುವ ಕ್ರಿಯಾಶಕ್ತಿಯನ್ನು ಪ್ರವೇಶಿಸಿ "ಸರ್ವಕರ್ತಾಽಹಂ" (ನಾನು ಸರ್ವಕರ್ತೃವು) ಎಂಬ ಅಭಿಮಾನವನ್ನು ಹೊಂದಿ "ಶಕ್ತಿತತ್ತ್ವ" ವೆನಿಸುತ್ತದೆ. ಈ ಶಕ್ತಿತತ್ತ್ವಾತ್ಮಕವಾದ ಪರಶಿವಬ್ರಹ್ಮವೇ ಘಟಕ್ಕೆ ಮೃತ್ತಿಕೆಯಂತೆ ಭಾವಿಪ್ರಪಂಚ

---

[1] ಅನಾದಿನಿಧನಾತ್ ಶಾಂತಾತ್ ಶಿವಾತ್ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

–ಶಿವಾಗಮ

ವನ್ನು ಕುರಿತು ಉಪಾದಾನಕಾರಣವಾಗುತ್ತದೆ. ಇದರಿಂದ ಶಕ್ತಿವಿಶಿಷ್ಟಬ್ರಹ್ಮವು ಪ್ರಪಂಚಕ್ಕೆ **"ಅಭಿನ್ನನಿಮಿತ್ತೋಪಾದಾನ"** ಕಾರಣವಾಯಿತು.

ಈ ಶಕ್ತಿತತ್ತ್ವವೇ ತನ್ನ ಇಚ್ಛಾಶಕ್ತಿಗೆ ಅಂತರಂಗವಾಗಿರುವ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿ ನೀರಿನಲ್ಲಿ ನೆನೆದು ಉಬ್ಬಿದ ಕಡಲೆಯಂತೆ ಉಬ್ಬಿ ಸ್ವಲ್ಪ ವಿಲಕ್ಷಣವಾಗಿ ಅಂಕುರಾಯಮಾಣವಾದ ಭಾವಿಪ್ರಪಂಚವನ್ನು ಕುರಿತು **"ಅಹಮಿದಂ"** (ನಾನು ಈ ಪ್ರಪಂಚವು) ಎಂದು ಅಭಿಮಾನ ಪಡೆಯಲು **"ಸದಾಶಿವತತ್ತ್ವ"** ವೆನಿಸುತ್ತದೆ.

ಅದೇ ಶಕ್ತಿತತ್ತ್ವವೇ ತನ್ನ ಇಚ್ಛಾಶಕ್ತಿಗೆ ಬಹಿರಂಗವಾಗಿರುವ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ ಸುಕ್ಷೇತ್ರದಲ್ಲಿ ಬಿತ್ತಿದ ಬೀಜದಂತೆ ಅಂಕುರಿಸಿ, ಅಹಮಿದಂ (ನಾನು ಈ ಪ್ರಪಂಚವು) ಎಂದು ತನ್ನ ಅಭಿಮಾನ ಪಡೆಯಲು **"ಈಶ್ವರತತ್ತ್ವ"**ವೆನಿಸುತ್ತದೆ. ಇದೇ **ನಾರಾಯಣ** ಎಂಬ ಹೆಸರಿನ **ಈಶ್ವರತತ್ತ್ವ.**

ಈ ಶಕ್ತಿತತ್ತ್ವವು ಸಾಗರ-ತರಂಗನ್ಯಾಯದಂತೆ ಕಡಲಿಗೂ ಕಡಲ ಅಲೆಗಳಿಗೂ ಅಭೇದ ವಿರುವಂತೆ 'ಅಹಮಿದಂ'– 'ನಾನು' ಎಂಬ ಅಹಂಕಾರಕ್ಕೂ, 'ಇದು' ಎಂಬ ಪ್ರಪಂಚಕ್ಕೂ, ಅಭೇದಜ್ಞಾನ ಪಡೆಯಲು **"ಶುದ್ಧವಿದ್ಯಾತತ್ತ್ವ"**ವೆನಿಸಿಕೊಳ್ಳುವುದು.

ಶುದ್ಧವಿದ್ಯಾತತ್ತ್ವರೂಪವಾಗಿ ಪರಿಣಮಿಸಿರುವ ಈ ಶಕ್ತಿತತ್ತ್ವವು ಮಯೂರಾಂಡರಸ ನ್ಯಾಯದಂತೆ (ನವಿಲಿನ ತತ್ತಿಯ ರಸದಲ್ಲಿ ಕಾಲು, ರೆಕ್ಕೆ, ಬಣ್ಣ ಮುಂತಾದ ವೈಚಿತ್ರ್ಯಗಳು ವಿಭಾಗ ರೂಪವಾಗಿ ಸೂಕ್ಷ್ಮವಾಗಿರುವಂತೆ) ತನ್ನಲ್ಲಿ ಅಡಗಿರುವ ಭಾವೀ ಪ್ರಪಂಚನಿರ್ಮಾಣಕ್ಕೆ ಕಾರಣ ವಾದ ಸೂಕ್ಷ್ಮಪದಾರ್ಥಗಳಲ್ಲಿ ಅನ್ಯೋನ್ಯಾಭಾವ (ಘಟವು ಪಟವಲ್ಲ ; ಪಟವು ಘಟವಲ್ಲ.) ಎಂಬ ಭೇದಬುದ್ಧಿಪ್ರಾಧಾನ್ಯದಿಂದ **"ಮಾಯಾತತ್ತ್ವ"**ವೆನಿಸಿಕೊಳ್ಳುವುದು.

**ಕಲಾ, ವಿದ್ಯಾ, ರಾಗ, ಕಾಲ, ನಿಯತಿ** ಎಂಬ ಐದು ತತ್ತ್ವಗಳು ಪುರುಷನಿಗೆ (ಜೀವ) ಕಂಚುಕರೂಪವಾಗಿರುವುದರಿಂದ, ಮೊದಲು ಕಂಚುಕಿಯಾದ ಪುರುಷತತ್ತ್ವವನ್ನು ನಿರೂಪಿಸಿ, ಬಳಿಕ ಕಲಾದಿಪಂಚತತ್ತ್ವಗಳನ್ನು ನಿರೂಪಿಸಲಾಗುವುದು.

ಉರಿವ ಬೆಂಕಿಯ ಮೇಲೆ ಸೌದೆಯನ್ನು ಹಾಕುವುದರಿಂದ ಬೆಂಕಿಯ ಕಿಡಿಗಳು ಸಿಡಿಯುವಂತೆ ಪರಶಿವನ ಇಚ್ಛಾಶಕ್ತಿಯೋಗದಿಂದ ಆವಿರ್ಭವಿಸುವ ಶಿವಾಂಶವೇ ಮಾಯಾ ಶಕ್ತಿಯಲ್ಲಿ ಪ್ರವೇಶಿಸಿ, **"ಪುರುಷತತ್ತ್ವ"**ವೆನಿಸಿಕೊಳ್ಳುವುದು. ಈ ಪುರುಷತತ್ತ್ವಕ್ಕೆ ಮಾಯಾಮಲಸಂಬಂಧ ವುಂಟಾಗುವುದರಿಂದ ಆತ್ಮನಲ್ಲಿ ಅನಾತ್ಮಜ್ಞಾನವೂ, ಅನಾತ್ಮವಸ್ತುಗಳಲ್ಲಿ ಆತ್ಮಜ್ಞಾನವೂ, "ನಾನು ಸುಖಿ" "ನಾನು ದುಃಖಿ" ಎಂಬ ಬುದ್ಧಿಯೂ ಉತ್ಪನ್ನವಾಗುವುವು. ಪುರುಷನು ಹೀಗೆ ಆಣವನ ಮಾಯಾ-ಕರ್ಮ ಎಂಬ ಮಲಗಳಿಂದ ಕೂಡಿ **"ಸಂಸಾರಿ"** ಎನಿಸುವನು.

ಪುರುಷನು ಮಾಯಾಮಲಾವೃತನಾಗಿ ತನ್ನ ಸರ್ವಕರ್ತೃತ್ವ-ಸರ್ವಜ್ಞತ್ವ-ಪೂರ್ಣತ್ವ-ನಿತ್ಯತ್ವ-ವ್ಯಾಪಕತ್ವರೂಪಶಕ್ತಿಗಳನ್ನು ಕಳೆದುಕೊಂಡು, ಕಿಂಚಿತ್-ಕರ್ತೃತ್ವಾದಿ-ಶಕ್ತಿಗಳಿಂದ ಕೂಡಿರುತ್ತಾನೆ. ಪುರುಷನ ಕಿಂಚಿತ್ಕರ್ತೃತ್ವರೂಪಶಕ್ತಿಯೇ **ಕಲಾತತ್ತ್ವ;** ಕಿಂಚಿಜ್ಞತ್ವರೂಪ ಶಕ್ತಿಯೇ **"ಅವಿದ್ಯಾತತ್ತ್ವ"** ; ಅಪೂರ್ಣತ್ವರೂಪ-ಶಕ್ತಿಯೇ ಸ್ರಕ್-ಚಂದನ-ವನಿತಾದಿವಿಷಯದ ಪ್ರೀತಿ ರೂಪವಾದ **"ರಾಗತತ್ತ್ವ"** ; ಅನಿತ್ಯತ್ವರೂಪಶಕ್ತಿಯೇ, ಭೂತ-ಭವಿಷ್ಯದ್ವರ್ತಮಾನಕಾಲ

ಗಳ ವ್ಯವಹಾರಕ್ಕೆ ಅಸಾಧಾರಣಕಾರಣವಾದ "ಕಾಲತತ್ತ್ವ" ; ಅವ್ಯಾಪಕತ್ವರೂಪಶಕ್ತಿಯೇ ಈ ಕಾರಣದಿಂದ ಈ ಕಾರ್ಯವೇ ಹುಟ್ಟುವುದು ; ಮತ್ತೊಂದು ಹುಟ್ಟುವುದಿಲ್ಲ ; ಎಂಬ ನಿಯಮಕ್ಕೆ ಅಸಾಧಾರಣ ಕಾರಣವಾದ "ನಿಯತಿತತ್ತ್ವ".

ಕಾರ್ಯೌನ್ಮುಖ್ಯಗರ್ಭಿತವಾದ ಇಚ್ಛಾಶಕ್ತಿಯು, ಸ್ವಗತವಾದ ಜ್ಞಾನಶಕ್ತಿ-ಕ್ರಿಯಾಶಕ್ತಿ ಗಳಲ್ಲಿರುವ 'ಜ್ಞಾನವು ಕ್ರಿಯೆಯಲ್ಲ.' ಕ್ರಿಯೆ ಜ್ಞಾನವಲ್ಲ' ; ಎಂಬ ಅನ್ಯೋನ್ಯಾಭಾವರೂಪ ಭೇದ ಬುದ್ಧಿಪ್ರಧಾನವಾದ ಮಾಯಾತತ್ತ್ವದಲ್ಲಿ ಪ್ರತಿಸ್ಫುರಿಸಲು, "ಪ್ರಕೃತಿತತ್ತ್ವ"ವೆನಿಸುವುದು. ಈ ಪ್ರಕೃತಿತತ್ತ್ವವು ಸುಖ-ದುಃಖ-ಮೋಹಗಳಿಗೆ ಕಾರಣಗಳಾದ ಸತ್ವ-ರಜಃ-ತಮೋಗುಣಗಳ ಸಾಮ್ಯಾವಸ್ಥಾರೂಪವಾಗಿದ್ದು, ಮಹತತ್ತ್ವವೇ ಮೊದಲ್ಗೊಂಡು ಪೃಥಿವೀತತ್ತ್ವದವರೆಗಿರುವ ೨೩ ತತ್ತ್ವ ಗಳಿಗೆ ಮೂಲಕಾರಣ.

ಪ್ರಕೃತಿತತ್ತ್ವರೂಪವಾದ ಈ ಶಕ್ತಿತತ್ತ್ವವೇ "ಇದಮಿತ್ಥಂ" (ಇದು ಹೀಗೆಯೇ ಸರಿ !) ಎಂಬ ನಿಶ್ಚಯಕ್ಕೆ ಕಾರಣವಾಗಿ "ಬುದ್ಧಿತತ್ತ್ವ"ವೆನಿಸುವುದು. ಇದಕ್ಕೆ ಮಹತ್ತತ್ತ್ವವೆಂಬ ಬೇರೆ ಹೆಸರಿದೆ. ಈ ಬುದ್ಧಿತತ್ತ್ವವೇ 'ನಾನು, ನನ್ನದು' ಎಂಬ ಅಹಂಕಾರ-ಮಮಕಾರಗಳಿಗೆ ಕಾರಣವಾಗಿ "ಅಹಂಕಾರ" ತತ್ತ್ವವೆನಿಸುವುದು. ಈ ಅಹಂಕಾರತತ್ತ್ವವೆಂಬ ಶಕ್ತಿತತ್ತ್ವವೇ ಇದು ಸ್ಥಾಣುವೋ, ಅಥವಾ ಪುರುಷನೋ ? ಎಂಬ ಸಂಕಲ್ಪವಿಕಲ್ಪಗಳಿಗೆ ಕಾರಣವಾಗಿ "ಮನಸ್ತತ್ತ್ವ" ವೆನಿಸಿಕೊಳ್ಳುವುದು. ಬುದ್ಧಿ-ಅಹಂಕಾರ-ಮನಸ್ತತ್ತ್ವಗಳು ಶರೀರದೊಳಗಿರುವುದರಿಂದ ಈ ಮೂರೂ "ಅಂತಃಕರಣ"ವೆನಿಸುವುವು. ಅಂತಃಕರಣವು ಇಚ್ಛಾಶಕ್ತಿಪ್ರಧಾನವಾದದ್ದು.

ಅಂತಃಕರಣರೂಪವಾಗಿ ಪರಿಣಮಿಸಿದ ಈ ಶಕ್ತಿತತ್ತ್ವವೇ ಬಾಹ್ಯಶರೀರವನ್ನು ಅವಲಂಬಿಸಿ ಶಬ್ದಜ್ಞಾನಕ್ಕೆ ಸಾಧನವಾಗಿ "ಶ್ರೋತ್ರತತ್ತ್ವ" ವೆಂದೂ, ಸ್ಪರ್ಶಜ್ಞಾನಕ್ಕೆ ಸಾಧನವಾಗಿ "ತ್ವಕ್ ತತ್ತ್ವ" ವೆಂದೂ, ರೂಪಜ್ಞಾನಕ್ಕೆ ಸಾಧನವಾಗಿ "ನೇತ್ರತತ್ತ್ವ" ವೆಂದೂ, ರಸಜ್ಞಾನಕ್ಕೆ ಸಾಧನ ವಾಗಿ "ಜಿಹ್ವಾತತ್ತ್ವ" ವೆಂದೂ, ಗಂಧಜ್ಞಾನಕ್ಕೆ ಸಾಧನವಾಗಿ "ಘ್ರಾಣತತ್ತ್ವ" ವೆಂದೂ ಹೇಳಿಸಿ ಕೊಳ್ಳುವುದು. ಈ ಐದು ಇಂದ್ರಿಯಗಳು ಜ್ಞಾನಶಕ್ತಿ ಪ್ರಧಾನವಾದುದರಿಂದ ಜ್ಞಾನೇಂದ್ರಿಯಗಳು.

ಜ್ಞಾನೇಂದ್ರಿಯರೂಪವಾಗಿ ಪರಿಣಮಿಸಿದ ಈ ಶಕ್ತಿತತ್ತ್ವವೇ ಉಚ್ಚಾರಣಕ್ರಿಯೆಗೆ ಸಾಧನ ವಾಗಿ "ವಾಕ್ತತ್ತ್ವ" ವೆಂದೂ, ಕೂಡುವುದು, ತರುವುದು, ಮುಂತಾದ ಕ್ರಿಯೆಗಳಿಗೆ ಸಾಧನವಾಗಿ "ಪಾಣಿತತ್ತ್ವ"ವೆಂದೂ, ಗಮನ-ಆಗಮನ ಮುಂತಾದ ಕ್ರಿಯೆಗಳಿಗೆ ಸಾಧನವಾಗಿ "ಪಾದ ತತ್ತ್ವ"ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ "ಪಾಯುತತ್ತ್ವ" ವೆಂದೂ, ರೇತೋಮೂತ್ರ-ಪರಿತ್ಯಾಗಕ್ಕೆ ಸಾಧನವಾಗಿ "ಉಪಸ್ಥತತ್ತ್ವ" ವೆಂದೂ ಕರೆಸಿಕೊಳ್ಳುವುದು. ಈ ಐದು ಇಂದ್ರಿಯ ಗಳು ಕ್ರಿಯಾಶಕ್ತಿ ಪ್ರಧಾನವಾದ್ದರಿಂದ ಕರ್ಮೇಂದ್ರಿಯಗಳು. ಮೇಲೆ ಹೇಳಿದ ಬುದ್ಧಿತತ್ತ್ವಾದಿ ಹದಿಮೂರು ತತ್ತ್ವಗಳೂ ಕ್ರಮವಾಗಿ ಇಚ್ಛಾಶಕ್ತಿ-ಜ್ಞಾನಶಕ್ತಿ-ಕ್ರಿಯಾಶಕ್ತಿಪ್ರಧಾನವಾಗಿರು ವುವು.

ಈ ಶಕ್ತಿತತ್ತ್ವವೇ ಕೇವಲ ಶ್ರೋತ್ರೇಂದ್ರಿಯಗ್ರಾಹ್ಯವಾಗಿ "ಶಬ್ದತತ್ತ್ವ" ವೆಂದೂ, ಕೇವಲ ತ್ವಗಿಂದ್ರಿಯಗ್ರಾಹ್ಯವಾಗಿ "ಸ್ಪರ್ಶತತ್ತ್ವ" ವೆಂದೂ ಕೇವಲ ನೇತ್ರೇಂದ್ರಿಯಗ್ರಾಹ್ಯವಾಗಿ "ರೂಪ ತತ್ತ್ವ" ವೆಂದೂ, ಕೇವಲ ಜಿಹ್ವೇಂದ್ರಿಯಗ್ರಾಹ್ಯವಾಗಿ "ರಸತತ್ತ್ವ" ವೆಂದೂ, ಕೇವಲ ಘ್ರಾಣೇಂದ್ರಿಯಗ್ರಾಹ್ಯವಾಗಿ "ಗಂಧತತ್ತ್ವ" ವೆಂದೂ ಕರೆಸಿಕೊಳ್ಳುವುದು. ಶಬ್ದದಲ್ಲಿ ಧ್ವನ್ಯಾ-

ತ್ಮಕ-ವರ್ಣಾತ್ಮಕ ಶಬ್ದವೆಂದೂ, ಸ್ಪರ್ಶದಲ್ಲಿ ಶೀತೋಷ್ಣಸ್ಪರ್ಶವೆಂದೂ, ರೂಪದಲ್ಲಿ ನೀಲಪೀತಾದಿ-ರೂಪವೆಂದೂ ರಸದಲ್ಲಿ ಮಧುರಾಮ್ಲಾದಿ-ರಸವೆಂದೂ, ಗಂಧದಲ್ಲಿ ಸುಗಂಧ-ದುರ್ಗಂಧವೆಂದೂ ವಿಭಾಗ ವ್ಯಕ್ತವಾಗದೆ ಸಾಮಾನ್ಯರೂಪವಾಗಿರುವುದರಿಂದ ಶಬ್ದಾದಿಗಳಿಗೆ "ತನ್ಮಾತ್ರ" ಗಳೆಂದು ಹೆಸರು.

ಮೇಲೆ ಹೇಳಿದ ಶಕ್ತಿತತ್ತ್ವವೇ ಶಬ್ದೈಕಗುಣವುಳ್ಳದಾಗಿ "ಆಕಾಶತತ್ತ್ವ" ವೆಂದೂ, ಸ್ಪರ್ಶವೆಂಬ ಮುಖ್ಯಗುಣವುಳ್ಳದ್ದಾಗಿ "ವಾಯುತತ್ತ್ವ" ವೆಂದೂ, ರೂಪವೆಂಬ ಮುಖ್ಯಗುಣವುಳ್ಳದ್ದಾಗಿ "ತೇಜಸ್ತತ್ತ್ವ"ವೆಂದೂ, ರಸವೆಂಬ ಪ್ರಧಾನಗುಣವುಳ್ಳದ್ದಾಗಿ "ಜಲತತ್ತ್ವ"ವೆಂದೂ, ಗಂಧವೆಂಬ ಮುಖ್ಯಗುಣವುಳ್ಳದ್ದಾಗಿ "ಪೃಥಿವೀತತ್ತ್ವ" ವೆಂದೂ ಕರೆಸಿಕೊಳ್ಳುವುದು.

ಈ ಪಂಚಭೂತಗಳಲ್ಲಿ ಮುನ್ಮುಂದಿನ ಭೂತಗಳಲ್ಲಿ ಹಿಂದುಹಿಂದಿನ ಭೂತಗಳ ಗುಣಗಳು ಅನುವರ್ತಿಸುತ್ತವೆ. ನಿಗಮಾಗಮಪ್ರಸಿದ್ಧವಾದ ಮೂವತ್ತಾರು ತತ್ತ್ವಗಳು ಸಚ್ಚಿದಾನಂದಶಕ್ತಿ ವಿಶಿಷ್ಟ-ಪರಶಿವಬ್ರಹ್ಮದ ಪರಿಣಾಮ-ರೂಪವಾಗಿರುವುದರಿಂದ, ಇದು ಪರಿಣಾಮವಾದವನ್ನು ಜಗತ್ಸತ್ಯತ್ವವನ್ನು ಬೋಧಿಸುತ್ತದೆ.

ಹೀಗೆ ವಾಯು-ವಹ್ನಿ-ಜಲ-ಪೃಥಿವೀತತ್ತ್ವಗಳಿಗೆ ಅವಕಾಶವನ್ನು ನೀಡಿರುವುದರಿಂದ "ಆಕಾಶ" ವೆನಿಸಿದೆ. "ಆಕಾಶಾದ್ವಾಯುಃ; ವಾಯೋರಗ್ನಿಃ ; ಅಗ್ನೇರಾಪಃ ; ಅದ್ಭ್ಯಃ ಪೃಥಿವೀ." ಎಂಬ ಶ್ರುತಿಯು ಈ ಕ್ರಮವನ್ನು ಸೂಚಿಸಿದೆ. ಆಕಾಶಾದಿ ಐದು ತತ್ತ್ವಗಳಿಗೆ "ಪಂಚಮಹಾಭೂತ" ಗಳೆಂದು ಹೆಸರು.

ಮೇಲೆ ಹೇಳಿದ ಮೂವತ್ತಾರು ತತ್ತ್ವಗಳ ರೂಪವಾದ ಜಗತ್ಪರಿಣಾಮವನ್ನು ಕುರಿತು ಹೇಳಿರುವ ಈ ಮಾತು ಚಮತ್ಕಾರವಾಗಿಯೂ ಅರ್ಥಪೂರ್ಣವಾಗಿಯೂ ಇದೆ.

ಭಗವಂತನೆಂಬ ಕುಂಬಾರನು ಶಕ್ತ್ಯಂಡವೆಂಬ ಮಣ್ಣನ್ನು ತಂದು, ಮಾಯಾಂಡವೆಂಬ ಚಕ್ರದ ಮೇಲಿಟ್ಟು, ಮೂಲಾಂಡವೆಂಬ ದಂಡದಿಂದ ತಿರುಗಿಸುತ್ತಾ ಬ್ರಹ್ಮಾಂಡವೆಂಬ ಭಾಂಡ(ಗಡಿಗೆ)ವನ್ನು ಪದೇಪದೇ ಪ್ರತಿಪ್ರಳಯದ ಮೊದಲಿನಲ್ಲಿಯೂ ಸೃಜಿಸುತ್ತಾನೆ. [1]

ಹೀಗೆ ಶಿವ ಮೊದಲ್ಗೊಂಡು ಪೃಥಿವಿಯವರೆಗಿನ ಮೂವತ್ತಾರು ತತ್ತ್ವಗಳ ಸ್ವರೂಪವು ಶೈವ ದರ್ಶನದಲ್ಲಿ ವಿಸ್ತಾರವಾಗಿ ಉಕ್ತವಾಗಿದೆ. ಇವುಗಳಲ್ಲಿ ಪುರುಷತತ್ತ್ವದಿಂದ ಪೃಥಿವಿಯವರೆಗಿನ ಇಪ್ಪತ್ತೈದು ತತ್ತ್ವಗಳು ಸಾಂಖ್ಯಶಾಸ್ತ್ರದಲ್ಲಿ ಉಕ್ತವಾಗಿವೆ. ಶ್ರೀಕರಭಾಷ್ಯದಲ್ಲಿಯೂ ಕೂಡ ಸರ್ವತ್ರ ಪ್ರಸಿದ್ಧ್ಯಧಿಕರಣದಲ್ಲಿ[2] "ಸ್ಮೃತೇಶ್ಚ" ಎಂಬ ಸೂತ್ರಭಾಷ್ಯದಲ್ಲಿ ಪಂಚಬ್ರಹ್ಮಮಂತ್ರಗಳಿಂದ ಶಿವಲಿಂಗಕ್ಕೆ ಷಟ್-ತ್ರಿಂಶತ್-ತತ್ತ್ವಾತ್ಮಕತ್ವಕಥನವೆಂಬಲ್ಲಿ ಈ ವಿಷಯಗಳು ಸೂಚಿತವಾಗಿವೆ.

---

[1] ಶಕ್ತ್ಯಂಡಮೃತ್ಪಿಂಡ ಮುಪಾದದಾನೋ
ಮಾಯಾಂಡಚಕ್ರಭ್ರಮಣಕ್ರಮೇಣ !
ಮೂಲಾಂಡದಂಡೇನ ಮುಹುರ್ವಿಧತ್ತೇ
ಬ್ರಹ್ಮಾಂಡಭಾಂಡಂ ಭಗವಾನ್ ಕುಲಾಲಃ ||

[2] ಶ್ರೀಕರಭಾಷ್ಯ (ಭಾಗ ೧. ಪು ೨೭೨-೨೭೪)

ಈ ಬಗೆಯ ಮುವತ್ತಾರು ತತ್ತ್ವಬೀಜದಿಂದ ಹುಟ್ಟಿದ ಶೈವದರ್ಶನ-ಕಲ್ಪತರುವಿನ ವಿವಿಧ ಶಾಖೆಗಳೇ ಶೈವಪ್ರಭೇದಗಳು. ಇವು ವಿಶ್ವದಲ್ಲಿ ಹರಡಿ ಜನತೆಗೆ ಇಹ-ಪರಸುಖಸಾಧನೆಯಲ್ಲಿ ನೆರವಾಗಿವೆ.

೯

## ಶೈವದರ್ಶನಪ್ರಭೇದಗಳು

ಇಲ್ಲಿಯವರೆಗೆ ಭಾರತದಲ್ಲಿ ಪ್ರಚಾರದಲ್ಲಿರುವ ಶೈವಪ್ರಭೇದಗಳಲ್ಲಿ ಶೈವದ್ವೈತ, ಶೈವಾದ್ವೈತ, ಶೈವದ್ವೈತಾದ್ವೈತ, ಶೈವ ವಿಶಿಷ್ಟಾದ್ವೈತ, ವಿಶೇಷಾದ್ವೈತ (ಶಕ್ತಿವಿಶಿಷ್ಟಾದ್ವೈತ) ಎಂಬ ಶಾಖೆಗಳು ಮುಖ್ಯ. ಇವುಗಳಲ್ಲಿ ಶೈವದ್ವೈತ ಮೊದಲನೆಯದು. ಏಕೆಂದರೆ ಅದರ ಪ್ರಚಾರವು ಕ್ರಿ. ಪೂರ್ವಕ್ಕೆ ಸೇರಿದ್ದು.

ಕಾಶ್ಮೀರ ಶೈವದಾರ್ಶನಿಕರಾದ ಸೋಮಾನಂದ, ಅಭಿನವಗುಪ್ತ ಮೊದಲಾದವರ ಅಭಿಪ್ರಾಯದಂತೆ ಆಗಮುಗಳೂ ಕೂಡ ವೇದಗಳಂತೆ ಈಶ್ವರೀಯ ವಾಣಿ ; ಹಾಗೂ ಅನಾದಿ. ಆಗಮುಗಳ ಉಗಮು ಮತ್ತು ಅವುಗಳ ಪರಂಪರೆಯನ್ನು ಕುರಿತು ಸೋಮಾನಂದನು (ಕ್ರಿ. ಶ. ೯೦೦) ತನ್ನ 'ಶಿವದೃಷ್ಟಿ' ಎಂಬ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾನೆ.

ಆತನ ಅಭಿಪ್ರಾಯದಂತೆ ಮಹರ್ಷಿ 'ದೂರ್ವಾಸ'ನ ಪೀಳಿಗೆಯಲ್ಲಿ ಉದಿಸಿದ 'ತ್ರ್ಯಂಬಕಾದಿತ್ಯ' 'ತ್ರ್ಯಂಬಕ' ಮುಂತಾದವರ ವಂಶದಲ್ಲಿ 'ಸಂಗಮಾದಿತ್ಯ' ಹುಟ್ಟಿದ. ತರುವಾಯ 'ವರ್ಷಾದಿತ್ಯ' 'ಅರುಣಾದಿತ್ಯ' 'ಆನಂದ'ರು ಉದಿಸಿದರು. ಈ ಪರಂಪರೆಯಲ್ಲಿ 'ಸೋಮಾನಂದ' ಹತ್ತೊಂಭತ್ತನೆಯವನು. ಅವನ ಶಿಷ್ಯ ಪ್ರಸಿದ್ಧ ಶೈವಾಚಾರ್ಯ ಅಭಿನವಗುಪ್ತ. ಈತನ 'ಈಶ್ವರ ಪ್ರತ್ಯಭಿಜ್ಞಾವಿವೃತಿ-ವಿಮರ್ಶಿನೀ' 'ಭೈರವಸ್ತವ' ಮುಂತಾದ ಗ್ರಂಥಗಳಲ್ಲಿ ಸೂಚಿಸಿರುವ ತಿಥಿಗಳ ಪ್ರಕಾರ ಈತನ ಕಾಲ ಕ್ರಿ. ಶ. ಹತ್ತನೆಯ ಶತಮಾನದ ಕೊನೆ ಅಥವಾ ಹನ್ನೊಂದರ ಆರಂಭವಾಗುತ್ತದೆ. ಇಲ್ಲಿಗೆ ಸುಮಾರು ಇಪ್ಪತ್ತು ತಲೆಮಾರುಗಳ ಹಿಂದಿನ ದೂರ್ವಾಸನ ಕಾಲವು ಆಧುನಿಕರ ಕಾಲಪರಿಗಣನೆಯ ಪ್ರಕಾರ ತಲೆಗೆ ೩೫ ವರ್ಷಗಳಂತೆ ಗಣಿಸಿದರೂ ಅದು ಕ್ರಿ. ಶ. ನಾಲ್ಕನೆಯ ಶತಮಾನವಾಗುತ್ತದೆ.

ಇನ್ನು ಶೈವಾಗಮುಗಳನ್ನು ಆಶ್ರಯಿಸಿರುವ ಲಕುಲೀಶ-ಪಾಶುಪತದರ್ಶನ-ಪ್ರವರ್ತಕ ಲಕುಲೀಶ ಕ್ರಿ. ಶ. ೨ನೆಯ ಶತಮಾನದವನು ; ಎಂಬುದು ಮಥುರಾ ಮತ್ತು ಗುಜರಾತದ ಸೋಮನಾಥ ದೇವಾಲಯುಗಳಲ್ಲಿರುವ ಸ್ತಂಭಲೇಖನಗಳಿಂದ ಸ್ಪಷ್ಟವಾಗಿದೆ. ಮೇಲಾಗಿ ಬಾದರಾಯಣನು ತನ್ನ ವೇದಾಂತಸೂತ್ರಗಳಲ್ಲಿ 'ಪಾಶುಪತ'ವನ್ನು ನಿರಾಕರಿಸಿದ್ದಾನೆ. ಎಷ್ಟೇ ಮತಭೇದಗಳಿದ್ದರೂ ಬಾದರಾಯಣನ ಕಾಲ ಕ್ರಿ. ಪೂ. ಸು. ೨ ನೆಯ ಶತಮಾನಕ್ಕಿಂತ ಈಚಿನದಲ್ಲ.

ಅಭಿನವಗುಪ್ತನು 'ಶ್ರೀಸಿದ್ಧತಂತ್ರ'ವನ್ನು ಅನುಸರಿಸಿ ಅದ್ವೈತ-ದ್ವೈತ-ದ್ವೈತಾದ್ವೈತ ದರ್ಶನಗಳು ಕ್ರಮವಾಗಿ ತ್ರ್ಯಂಬಕ-ಅಮರ್ದಕ-ಶ್ರೀನಾಥ ಎಂಬುವರಿಂದ ಕಲಿಯುಗದಲ್ಲಿ ಏಕಕಾಲ

ದಲ್ಲಿಯೇ ಪ್ರಕಾಶಿತವಾದವು ; ಎಂದಿದ್ದಾನೆ.[1] ಸೂತಸಂಹಿತೆಯಲ್ಲಿ ಉಕ್ತವಾಗಿರುವ "ಭೇದಾಭೇದ ಸ್ತಥಾಽಭೇದೋ ಭೇದ ಏತೇ ಮತಾಸ್ತ್ರಯಃ" ಎಂಬ ಉಕ್ತಿಯನ್ನು ಇದು ಸಮರ್ಥಿಸಿದೆ.

## ದ್ವೈತ ಶೈವ

ದ್ವೈತಶೈವವನ್ನು ಪ್ರತಿಪಾದಿಸುವ ದರ್ಶನವು ಪಾಶುಪತದರ್ಶನ ಮತ್ತು ಸಿದ್ಧಾಂತಶೈವ ದರ್ಶನ ಎಂದು ಎರಡು ಬಗೆಯಾಗಿದೆ. ಇವುಗಳಲ್ಲಿ ಮೊದಲನೆಯದು ಹತ್ತು ಶೈವಾಗಮ[2]ಗಳನ್ನು ಆಶ್ರಯಿಸಿದೆ. ಇವುಗಳ ಜೊತೆಗೆ ಉಳಿದ ಹದಿನೆಂಟು ಆಗಮುಗಳು[3] ಸೇರಿ ಒಟ್ಟು ಇಪ್ಪತ್ತೆಂಟು ಆಗಮುಗಳನ್ನು ಸಿದ್ಧಾಂತ ಶೈವವು ಒಪ್ಪಿದೆ.

### ೧. ಪಾಶುಪತದರ್ಶನ

ದ್ವೈತ ಶೈವವನ್ನು ಪ್ರದಿಪಾದಿಸುವ 'ಪಾಶುಪತ' ವೆಂಬ ಯಾವ ಗ್ರಂಥವೂ ಇದುವರೆಗೆ ಉಪಲಬ್ಧವಾಗಿಲ್ಲವಾದ್ದರಿಂದ ದ್ವೈತ ಶೈವದರ್ಶನದ ತಾತ್ತ್ವಿಕ ಸ್ವರೂಪವನ್ನು ನಿರ್ಣಯಿಸುವುದು ಕಷ್ಟ. ಆದರೂ ಬಾದರಾಯಣನ ಬ್ರಹ್ಮಸೂತ್ರಟೀಕೆಗಳಲ್ಲಿ ಖಂಡನಾರ್ಥವಾಗಿ ಉಲ್ಲೇಖಿಸಿರುವ ಭಾಷ್ಯಕಾರರ ಹಾಗೂ ಹರಿಭದ್ರಸೂರಿ ಮತ್ತು ರಾಜಶೇಖರರು ರಚಿಸಿರುವ "ಷಡ್ದರ್ಶನಸಮುಚ್ಚಯ" ಎಂಬ ಗ್ರಂಥಗಳಲ್ಲಿ ಸಂಕ್ಷೇಪವಾಗಿ ಪ್ರತಿಪಾದಿಸಿರುವ ವಿಷಯವನ್ನು ಅಧಿಕರಿಸಿ ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗುತ್ತದೆ.

ಬ್ರಹ್ಮಸೂತ್ರ: ಪತ್ಯಧಿಕರಣ– "ಪತ್ಯುರಸಾಮಂಜಸ್ಯಾತ್" (ಬ್ರ. ಸೂ. ೨. ೨-೭-೩೫) ಇಲ್ಲಿ ನಿರಾಕರಿಸಿರುವ ಪಾಶುಪತವನ್ನು ಕೆಲವರು ಲಕುಲೀಶ ಪಾಶುಪತ ಎನ್ನುತ್ತಾರೆ. ಅದು ಸರಿಯಲ್ಲ. ಏಕೆಂದರೆ ಶ್ರೀ ಶಂಕರರೇ ಈ ಸೂತ್ರದಲ್ಲಿ ನಿರಾಕೃತವಾಗಿರುವ ದರ್ಶನವು 'ದ್ವೈತಶೈವ' ಎಂದಿದ್ದಾರೆ. ಅಲ್ಲಿ 'ಅಪ್ರಕೃತಿರಧಿಷ್ಠಾತಾ ಕೇವಲಂ ನಿಮಿತ್ತಕಾರಣಮೀಶ್ವರಃ' ಎನ್ನಲಾಗಿದೆ.

---

[1] ತೇಷಾಂ ಕ್ರಮೇಣ ತನ್ಮಧ್ಯೇ ಭ್ರಷ್ಟಂ ಕಾಲಾಂತರಾದ್ಯದಾ ।
ತದಾ ಶ್ರೀಕಂಠನಾಥಾಜ್ಞಾವಶಾತ್ ಸಿದ್ಧಾ ಅವಾತರನ್ ॥ ೧೧ ॥
ತ್ರ್ಯಂಬಕಾಮರ್ದಕಾಭಿಖ್ಯಶ್ರೀನಾಥಾ ಅದ್ವಯೇ ದ್ವಯೇ ।
ದ್ವಯಾದ್ವಯೇ ಚ ನಿಪುಣಾಃ ಕ್ರಮೇಣ ಶಿವಶಾಸನೇ ॥ ೧೨ ॥
– [ತಂತ್ರಾಲೋಕ: ೩೬ನೇ ಆಹ್ನಿಕ]

[2] (೧) ಕಾಮಜ. (೨) ಯೋಗಜ. (೩) ಚಿಂತ್ಯ. (೪) ಮಾಕುಟ. (೫) ಅಂಶುಮತ್. (೬) ದೀಪ್ತ. (೭) ಕಾರಣ. (೮) ಅಜಿತ. (೯) ಸೂಕ್ಷ್ಮ. (೧೦) ಸಹಸ್ರ. ಇವುಗಳಲ್ಲಿ 'ಕಾಮಜಕ್ಕೆ' 'ಕಾಮಿಕ' ಎಂದು ಕರೆಯುವುದುಂಟು.

[3]. (೧) ವಿಜಯ. (೨) ನಿಶ್ವಾಸ (೩) ಮದ್‌ಗೀತ. (೪) ಪಾರಮೇಶ್ವರ. (೫) ಮುಖಬಿಂಬ. (೬) ಸಿದ್ಧ. (೭) ಸಂತಾನ. (೮) ನಾರಸಿಂಹ. (೮) ಚಂದ್ರಾಂಶು. (೧೦) ವೀರಭದ್ರ. (೧೧) ಆಗ್ನೇಯ. (೧೨) ಸ್ವಾಯಂಭುವ. (೧೩) ವಿಸರ. (೧೪) ರೌರವ. (೧೫) ವಿಮಲ. (೧೬) ಕಿರಣ. (೧೭) ಲಲಿತ. (೧೮) ಸೌರಭೇಯ.

'ಕಾರಣ-ಕಾರ್ಯ-ಯೋಗ-ವಿಧಿ-ದುಃಖಾಂತ' ಎಂಬವು ಪಂಚಪದಾರ್ಥಗಳು. ಪಶುಪತಿ– ಈಶ್ವರ ನಿಮಿತ್ತಕಾರಣ. ಶಾಂಕರಭಾಷ್ಯವ್ಯಾಖ್ಯಾಕಾರನಾದ ವಾಚಸ್ಪತಿಮಿಶ್ರನ (ಭಾಮತಿ) ಅಭಿಪ್ರಾಯ ದಲ್ಲಿಯೂ ಇಲ್ಲಿ ನಿರಾಕರಿಸಿರುವ ದರ್ಶನವು ದ್ವೈತವೇ. ಆತನ ಅಭಿಪ್ರಾಯದಂತೆ ಇದು ಮಾಹೇ ಶ್ವರ ಸಿದ್ಧಾಂತ. ಮಾಹೇಶ್ವರರು, ಶೈವ, ಪಾಶುಪತ, ಕಾರುಣಿಕಸಿದ್ಧಾಂತಿ ಮತ್ತು ಕಾಪಾಲಿಕ ಎಂದು ನಾಲ್ಕು ಬಗೆ. ಈ ನಾಲ್ವರೂ ಮಾಹೇಶ್ವರಪ್ರಣೀತ-ಸಿದ್ಧಾಂತವನ್ನು ಅನುಸರಿಸುವುದರಿಂದ ಮಾಹೇಶ್ವರರೆನಿಸಿದ್ದಾರೆ. ಇವರು ಘಟಕಾರ್ಯಕ್ಕೆ 'ಕುಲಾಲ' ನಿಮಿತ್ತವಾಗಿರುವಂತೆ ಮಹೇಶ್ವರನು ಜಗತ್ತಿಗೆ 'ನಿಮಿತ್ತಕಾರಣ' ಎನ್ನುತ್ತಾರೆ.

ಶಾಂಕರಭಾಷ್ಯದ ಪ್ರಕಾರ ಬಾದರಾಯಣನು ನಿರಾಕರಿಸಿರುವ ದರ್ಶನವು 'ಲಕುಲೀಶ ಪಾಶುಪತ'ವಲ್ಲ ; ಏಕೆಂದರೆ ಲಕುಲೀಶ ಪಾಶುಪತ ದರ್ಶನವು ದ್ವೈತವಲ್ಲ. ಅದು 'ದ್ವೈತಾ-ದ್ವೈತ' ಎಂಬುದು ಅಲ್ಲಿರುವ 'ಭವೋದ್ಭವ' 'ಕಲಿತಾಸನಮ್' ಎಂಬ ಸೂತ್ರಗಳ ಕೌಂಡಿನ್ಯವ್ಯಾಖ್ಯೆ ಯಿಂದ ವೇದ್ಯವಾಗುತ್ತದೆ.

ಮೇಲಾಗಿ ಪಾಶುಪತ ಮತ್ತು ಲಕುಲೀಶಪಾಶುಪತಗಳ ಮೋಕ್ಷಸ್ವರೂಪದಲ್ಲಿಯೂ ಅಂತರವಿದೆ. ಮೊದಲನೆಯದರಲ್ಲಿ 'ಎಲ್ಲ ದುಃಖಗಳ ಅಂತ್ಯವೇ ಮೋಕ್ಷ'. ಎರಡನೆಯ ಮತ ದಲ್ಲಿ 'ದುಃಖಾತ' ಮಾತ್ರವೇ ಅಲ್ಲದೆ 'ಪರಮೈಶ್ವರ್ಯಪ್ರಾಪ್ತಿ'ಯೇ ಮೋಕ್ಷ ಎಂಬ ಅಂಶವು ಮುಂದೆ ಸ್ಪಷ್ಟವಾಗುತ್ತದೆ.

ಹರಿಭದ್ರಸೂರಿ-ವಿರಚಿತ 'ಷಡ್ದರ್ಶನಸಮುಚ್ಚಯ' ದಲ್ಲಿ ಪರಸ್ಪರ ವಿಭಿನ್ನವಾದ ದರ್ಶನ ಗಳು ಅನೇಕ ಎಂದು ಸೂಚಿಸಿ, ಧರ್ಮ-ಮೋಕ್ಷೋಪಾಯ-ಮೋಕ್ಷಸ್ವರೂಪ ಮತ್ತು ದಾರ್ಶನಿಕ ತತ್ತ್ವ ಎಂಬುದನ್ನು ಆಶ್ರಯಿಸಿ ದರ್ಶನಗಳು ಆರು ಎನ್ನಲಾಗಿದೆ. ಅವು ಕ್ರಮವಾಗಿ ಬೌದ್ಧ, ಜೈನ, ನೈಯಾಯಿಕ, ವೈಶೇಷಿಕ, ಸಾಂಖ್ಯ ಮತ್ತು ಜೈಮಿನೀಯ. ಇವರಲ್ಲಿ ನ್ಯಾಯ-ವೈಶೇಷಿಕ ಪ್ರವರ್ತಕರು ಶೈವರು. ಅವುಗಳ ಮೋಕ್ಷವು 'ದುಃಖಾಂತ'ರೂಪ. ಅದರ ಟೀಕೆ (ಮಣಿಭದ್ರ ಸೂರಿ ವಿರಚಿತ) ಯಲ್ಲಿ ಸೃಷ್ಟಿಕಾರಣ ಈಶ್ವರ (ಶಿವ). ಆತ ಕೇವಲ 'ನಿಮಿತ್ತಕಾರಣ'. ರಾಜ ಶೇಖರನ 'ಷಡ್‌ದರ್ಶನ ಸಮುಚ್ಚಯ' ದಲ್ಲಿ 'ನ್ಯಾಯದರ್ಶನ' ವನ್ನು 'ಯೋಗ' ಎನ್ನಲಾಗಿದೆ.

ಅಥ ಯೋಗಮತಂ ಬ್ರೂಮಃ ಶೈವಮಿತ್ಯಪರಾಭಿಧಮ್ ।........
ಅಕ್ಷಪಾದೋ ಗುರುಸ್ತೇಷಾಂ ತೇನ ತೇ ಹ್ಯಕ್ಷಪಾದಿಕಾಃ ॥

ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ. ಈ ಶೈವರಲ್ಲಿರುವ ಶೈವ, ಪಾಶುಪತ, ಮಹಾ ವ್ರತಧಾರಿ ಮತ್ತು ಕಾಲಾಮುಖ ಎಂಬ ನಾಲ್ಕು ಪ್ರಭೇದಗಳನ್ನು ಹರಿಭದ್ರಸೂರಿ ಸೂಚಿಸಿದ್ದಾನೆ. [1]

---

[1] ಶೈವಾಃ ಪಾಶುಪತಾಶ್ಚೈವ ಮಹಾವ್ರತಧರಾಸ್ತಥಾ ।
ತುರ್ಯಾಃ ಕಾಲಾಮುಖಾ ಮುಖ್ಯಾ ಭೇದಾ ಏತೇ ತಪಸ್ವಿನಾಮ್ ॥

## ೨. ದ್ವೈತ-ಶೈವಸಿದ್ಧಾಂತದರ್ಶನ

ದ್ವೈತ-ಶೈವಪ್ರಭೇದಗಳಲ್ಲಿ 'ಸಿದ್ಧಾಂತದರ್ಶನ' ಎರಡನೆಯದು. ಇದಕ್ಕೆ ವಿಪುಲ ಸಾಹಿತ್ಯವಿದೆ.

'ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ'

[–ಸಿ. ಶಿ. ಪ. ೫]

ಎಂಬ ಉಕ್ತಿಯಂತೆ ಕಾಮಿಕ ಮೊದಲ್ಗೊಂಡು ವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳಿಗೂ 'ಸಿದ್ಧಾಂತ' ಎಂಬ ಹೆಸರಿದೆ. ಹಿಂದೆ ಹೇಳಿದ ಹತ್ತು ಶೈವಾಗಮಗಳು ದ್ವೈತ-ಶೈವ-ಸಾಧಾರಣಗಳು. ಉಳಿದ ಹದಿನೆಂಟು ದ್ವೈತಾದ್ವೈತಪ್ರತಿಪಾದಕಗಳೆಂದು ಅಭಿನವಗುಪ್ತನು ಹೇಳಿದ್ದಾನೆ. ಆದರೆ ಶೈವ-ಸಿದ್ಧಾಂತದಾರ್ಶನಿಕರು ಅವು ದ್ವೈತಪರ ಎಂದಿದ್ದಾರೆ.

ಸಿದ್ಧಾಂತಶೈವಪ್ರಚಾರವು ದಕ್ಷಿಣಭಾರತದಲ್ಲಿ ಹೆಚ್ಚು. ಕ್ರಿ. ಶ. ೯ ನೆಯ ಶತಮಾನದಿಂದ ೧೨ ನೆಯ ಶತಮಾನದವರೆಗೆ ಇದರ ಪ್ರಚಾರವು ಕಾಶ್ಮೀರ, ಚೋಳ, ಲಾಟ, ಮಧ್ಯಪ್ರದೇಶ, ಮತ್ತು ಕಾನ್ಯಕುಬ್ಜ ಮುಂತಾದ ಕಡೆ ಹೆಚ್ಚಾಗಿತ್ತು.

### ಸಿದ್ಧಾಂತಶೈವಪ್ರತಿಪಾದಕಗ್ರಂಥಗಳು

ಶೈವ-ಸಿದ್ಧಾಂತಾಗಮಪ್ರತಿಪಾದಕರಲ್ಲಿ 'ಸದ್ಯೋಜ್ಯೋತಿಬೃಹಸ್ಪತಿ' ಶಂಕರಾನಂದ ಮತ್ತು ದೇವಬಲರು ಪ್ರಸಿದ್ಧರು. ಇವರಲ್ಲಿ ಸದ್ಯೋಜ್ಯೋತಿಗೆ ಖೇಟಪಾಲ, ಖೇಟಕನಂದನ ಎಂಬ ಹೆಸರುಗಳಿರುವಂತೆ ತಿಳಿದುಬಂದಿದೆ. ಈತ ಕ್ರಿ. ಶ. ಸು. ಒಂಬತ್ತನೆಯ ಶತಮಾನದವನು. ಈತನ ಗ್ರಂಥಗಳು ಏಳು. ಅವು ರೌರವಾಗಮಟೀಕೆ, ಸ್ವಾಯಂಭುವಾಗಮಟೀಕೆ, ತತ್ತ್ವತ್ರಯನಿರ್ಣಯ, ಭೋಗಕಾರಿಕೆ, ಮೋಕ್ಷಕಾರಿಕೆ, ತತ್ತ್ವಸಂಗ್ರಹ ಮತ್ತು ಪರೋಕ್ಷನಿರಾಸಕಾರಿಕೆ ಎಂದು.

ಈ ಸದ್ಯೋಜ್ಯೋತಿಯೇ ಮೊದಲು ರೌರವಾಗಮಪ್ರತಿಪಾದಿತವಾದ ಶೈವದರ್ಶನವನ್ನು 'ಸಿದ್ಧಾಂತ' ಎಂದು ಕರೆದವನು. ಈತನ ತರುವಾಯ ಅಘೋರಶಿವಾಚಾರ್ಯನ ಮತದಂತೆ 'ಸಿದ್ಧಾಂತ' ಶಬ್ದವು ಇಪ್ಪತ್ತೆಂಟು ತಂತ್ರಗಳಿಗೂ ಅನ್ವಯಿಸಿತು. ಈತ ಶ್ರೀಕಂಠಕೃತ 'ರತ್ನತ್ರಯ'ಕ್ಕೆ ಟೀಕೆ ಬರೆದಿದ್ದಾನೆ.

ಬೃಹಸ್ಪತಿ ಸದ್ಯೋಜ್ಯೋತಿಯ ಸಮಕಾಲಿಕ. ಏಕೆಂದರೆ– ಅಘೋರ ಶಿವನು ತನ್ನ ಮೋಕ್ಷ-ಕಾರಿಕೆ ಟೀಕೆಯಲ್ಲಿ ಈ ಇಬ್ಬರನ್ನೂ ಒಟ್ಟಿಗೆ ನೆನೆದಿದ್ದಾನೆ.[1] 'ಶಿವತನುಶಾಸ್ತ್ರ' ಎಂಬುದು ಈತನ ಗ್ರಂಥ ಎಂದು ತಂತ್ರಾಲೋಕದಿಂದ ವೇದ್ಯವಾಗುತ್ತದೆ.

ಶಂಕರಾನಂದರ ಮತ್ತು ದೇವಬಲರ ಮತಗಳು ತಂತ್ರಾಲೋಕಟೀಕೆಯಲ್ಲಿ ಜಯರಥನಿಂದ ನಿರಾಕೃತವಾಗಿವೆ. ಆದುದರಿಂದ ಅವರೂ ದ್ವೈತಶೈವರೆಂದೇ ಹೇಳಲಾಗಿದೆ.

---

[1] ಯಾಭ್ಯಾಂ ಪ್ರಕಾಶಿತಂ ಪತ್ಯುಃ ಸಿದ್ಧಾಂತೇ ಸಿದ್ಧಭಾವತಃ ।
ಗುರುಣಾಮಪಿ ತೌ ವಂದೇ ಸದ್ಯೋಜ್ಯೋತಿಬೃಹಸ್ಪತೀ ॥
–[ಮೋಕ್ಷಕಾರಿಕಾ ಟೀಕೆ ೧]

## ಕಾಶ್ಮೀರದಲ್ಲಿ ದ್ವೈತಶೈವಸಿದ್ಧಾಂತ

ಸದ್ಯೋಜ್ಯೋತಿಯ ಅನುಯಾಯಿಗಳು ಕಾಶ್ಮೀರದಲ್ಲಿದ್ದರು. ಈತನ ಮೋಕ್ಷಕಾರಿಕೆಗೆ ಕಾಶ್ಮೀರದ ಎರಡನೆಯ ರಾಮಕಂಠ ಟೀಕೆ ಬರೆದಿದ್ದಾನೆ. ಈ ರಾಮಕಂಠ ಕಾಶ್ಮೀರದವನು. ಈತ ತನ್ನ 'ನಾದಕಾರಿಕೆಯ' ಕಡೆಯಲ್ಲಿ ತನ್ನನ್ನು 'ನಾರಾಯಣಕಂಠಸುತ' ಎಂದಿದ್ದಾನೆ. ಇವರಿಬ್ಬರೂ ದ್ವೈತಶೈವಸಿದ್ಧಾಂತ ಪ್ರತಿಪಾದಕರು. -

ಒಟ್ಟನಲ್ಲಿ ಕಾಶ್ಮೀರದಲ್ಲಿನ ದ್ವೈತಶೈವ ಪ್ರತಿಪಾದಕರಲ್ಲಿ 'ರಾಮಕಂಠ', ರತ್ನತ್ರಯ ಟೀಕಾಕರ್ತೃ ಶ್ರೀಕಂಠ, ರಾಮಕಂಠನ ಶಿಷ್ಯನೂ ಮೃಗೇಂದ್ರ-ವೃತ್ತಿಕಾರನೂ ಆದ ನಾರಾಯಣಕಂಠ ಮತ್ತು ಈತನ ಮಗ ಎರಡನೆಯ ರಾಮಕಂಠ ಮುಂತಾದವರು ಮುಖ್ಯರು.

## ೨ ನೇ ರಾಮಕಂಠನ ಅಭಿವ್ಯಕ್ತಿಪಕ್ಷ

ಈತ ಬರೆದ ಎರಡು ಟೀಕೆಗಳಲ್ಲಿ ಮೂರು ಮತ (ಪಕ್ಷ) ಗಳನ್ನು ನಿರಾಕರಿಸಿ ನಾಲ್ಕನೆಯ 'ಅಭಿವ್ಯಕ್ತಿಪಕ್ಷ'ವನ್ನು ಸ್ಥಾಪಿಸಿದ್ದಾನೆ. ಇವುಗಳಲ್ಲಿ ಮೊದಲನೆಯದು "ಉತ್ಪತ್ತಿಸಮತಾಪಕ್ಷ". ಅದರ ಪ್ರಕಾರ ಸರ್ವಜ್ಞತ್ವ ಮತ್ತು ಸರ್ವಶಕ್ತಿಮತ್ವಗಳು ಜೀವನಿಗೆ ಸ್ವಾಭಾವಿಕವಲ್ಲ; ಅವು ಮೋಕ್ಷದಲ್ಲಿ ಹುಟ್ಟುತ್ತವೆ. ಎರಡನೆಯದು "ಸಮತಾಸಂಕ್ರಾಂತಿಪಕ್ಷ". ಇದು ಲಕುಲೀಶಪಾಶುಪತರಿಗೂ ಸಮ್ಮತ. ಅದರ ಪ್ರಕಾರ ಕಸ್ತೂರಿಯ ಸೌರಭವು ಬಟ್ಟೆಯ ಪದರಗಳಲ್ಲಿ ಹರಡುವಂತೆ ಸರ್ವಜ್ಞತ್ವ-ಸರ್ವಶಕ್ತಿಮತ್ವಗಳು ಶಿವನ ದೆಶೆಯಿಂದ ಮುಕ್ತಾತ್ಮನಲ್ಲಿ ಸಂಕ್ರಮಿಸುತ್ತವೆ. ಮೂರನೆಯದು ಆವೇಶಪಕ್ಷ. ಅದು ತನ್ನ ಮನೆಯಲ್ಲಿರುವ ಗ್ರಹದೃಷ್ಟಿಯು ಬೇರೆ ಬೇರೆ ಪುರುಷರ ಮೇಲೆ ಬೀಳುವಂತೆ ಶಿವನಲ್ಲಿರುವ ಸರ್ವಜ್ಞತ್ವ-ಸರ್ವಕರ್ತೃತ್ವಗಳು ಮುಕ್ತನಲ್ಲಿ ಆವಿಷ್ಟವಾಗುತ್ತವೆ.

ಈ ಮೂರೂ ಮತಗಳನ್ನು ರಾಮಕಂಠನು ಸಕಾರಣವಾಗಿ ನಿರಾಕರಿಸಿ 'ಜೀವನಲ್ಲಿ ಸ್ವಾಭಾವಿಕವಾಗಿರುವ ಸರ್ವಜ್ಞತ್ವ-ಸರ್ವಕರ್ತೃತ್ವಗಳು ಮಲದಿಂದ ಮುಚ್ಚಿರುತ್ತವೆ. ಮಲವು ನಷ್ಟವಾದ ಮೇಲೆ ಸರ್ವಜ್ಞತ್ವಾದಿಗಳು ಮುಕ್ತನಲ್ಲಿ ಅಭಿವ್ಯಕ್ತವಾಗುತ್ತವೆ. ಇದೇ 'ಅಭಿವ್ಯಕ್ತಿಪಕ್ಷ'. ಇವಲ್ಲದೆ ಈತ 'ಮುಕ್ತಿ ವಿವೇಕಟೀಕೆ' ಮತ್ತು 'ಆಗಮವಿವೇಕ' ಎಂಬ ಗ್ರಂಥಗಳನ್ನೂ ಬರೆದಿದ್ದಾನೆ.

## ಮಧ್ಯಪ್ರದೇಶ ಮತ್ತು ಗುಜರಾತ್‌ಗಳಲ್ಲಿ ಶೈವಸಿದ್ಧಾಂತ

ಪ್ರಕೃತಗ್ರಂಥವೆನಿಸಿರುವ "ತತ್ತ್ವಪ್ರಕಾಶ"ಕರ್ತೃ ಭೋಜರಾಜನು (ಕ್ರಿ. ಶ. ೧೦೧೮-೧೦೬೦) ಧಾರಾನಗರವಾಸಿ. ಈತ ಅಲಂಕಾರಶಾಸ್ತ್ರ ಮತ್ತು ವಾಸ್ತುಶಾಸ್ತ್ರಗಳಿಗೂ ಕರ್ತೃ. ಸಿದ್ಧಾಂತಶೈವರಹಸ್ಯವನ್ನು ಅರಿಯದ ಕೆಲವರು "ತತ್ತ್ವಪ್ರಕಾಶ"ಕ್ಕೆ ಅದ್ವೈತ ಪರವಾಗಿ ಟೀಕೆಗಳನ್ನು ಬರೆದಿದ್ದಾರೆ. ಅವನ್ನು ನಿರಾಕರಿಸಲಿಕ್ಕಾಗಿಯೇ ತಾನು ವ್ಯಾಖ್ಯೆಯನ್ನು ಬರೆದಿರುವೆನೆಂದು ಅಘೋರಶಿವಾಚಾರ್ಯನು ಹೇಳಿಕೊಂಡಿದ್ದಾನೆ. [1]

---

[1] ಅದ್ವೈತವಾಸನಾವಿಷ್ಟೈಃ ಸಿದ್ಧಾಂತಜ್ಞಾನವರ್ಜಿತೈಃ ।
ವ್ಯಾಖ್ಯಾತೋಽತ್ರಾನ್ಯಥಾನ್ಯೈರ್ಯತ್ ಸ ತತೋಽಸ್ಮಾಕಮುದ್ಯಮಃ ॥
–[ತತ್ತ್ವ ಪ್ರಕಾಶ. ೧]

ಇದರಲ್ಲಿ ಮುವತ್ತಾರು ತತ್ತ್ವಗಳ ವಿವರಣವಿದೆ. ಈ ಗ್ರಂಥಕ್ಕೆ 'ಶ್ರೀಕುಮಾರ' ಎಂಬುವರ 'ತಾತ್ಪರ್ಯಟೀಕೆ' ಮತ್ತು ಕನ್ನಡದಲ್ಲಿನ 'ಪರ್ವತಶಿವಯೋಗಿ-ಕೃತ ಟೀಕೆ' ಮುಂತಾದ ಟೀಕೆಗಳಿವೆ. ಇವುಗಳ ಬಗ್ಗೆ ಇರುವ ಹೆಚ್ಚಿನ ವಿವರಗಳನ್ನು "ಶೈವದರ್ಶನ ಇತಿಹಾಸ ಮತ್ತು ತತ್ತ್ವಪ್ರಕಾಶ" ಎಂಬ ಗ್ರಂಥದಲ್ಲಿ ನೋಡಬಹುದು.

**ದಕ್ಷಿಣ ದೇಶದಲ್ಲಿ ದ್ವೈತಶೈವಸಿದ್ಧಾಂತದರ್ಶನ**

ಅಘೋರ-ಶಿವಾಚಾರ್ಯನು ದ್ವೈತಸಿದ್ಧಾಂತಶೈವದರ್ಶನಪ್ರತಿಪಾದಕವಾದ ಅನೇಕ ಗ್ರಂಥಗಳಿಗೆ ಟೀಕೆಗಳನ್ನು ಬರೆದಿದ್ದಾನೆ. ಈತ ಚೋಳದೇಶದ ಕುಂಡಿನ ಕುಲವಾಸಿ. ಈತ ತನ್ನ "ಪದ್ಧತಿ" ಯನ್ನು ಕ್ರಿ. ಶ. ೧೧೫೮ರಲ್ಲಿ ಮುಗಿಸಿದನು. ಅಘೋರಶಿವನು ಕವಿಯೂ ಆಗಿದ್ದ. ಆತನ ಕೃತಿಗಳಿವು–

**ಕಾವ್ಯಗಳು :**–– ಆಶ್ಚರ್ಯಸಾರ, ಪಾಖಂಡಾಪಜಯ, ಭಕ್ತಪ್ರಕಾಶ ಮುಂತಾದವು. **ನಾಟಕಗಳು :**– ಅಭ್ಯುದಯ. **ದ್ವೈತಶೈವಗ್ರಂಥಟೀಕೆಗಳು :**– ತತ್ತ್ವಪ್ರಕಾಶಟೀಕೆ, ಸದ್ಯೋಜ್ಯೋತಿಕೃತ ತತ್ತ್ವಸಂಗ್ರಹ, ತತ್ತ್ವನಿರ್ಣಯ ಮತ್ತು ಭೋಗಕಾರಿಕಾಟೀಕೆ, ಎರಡನೆ ರಾಮಕಂಠಕೃತ ನಾದಕಾರಿಕಾಟೀಕೆ, ಶ್ರೀಕಂಠಕೃತ ರತ್ನತ್ರಯಟೀಕೆ, ನಾರಾಯಣಕಂಠಕೃತ ಮೃಗೇಂದ್ರಾಗಮವೃತ್ತಿಟೀಕೆ ಮುಂತಾದವು.

ಹಿಂದೆ ಉಲ್ಲೇಖಿಸಿದ 'ರಾಮಕಂಠ' ಎಂಬ ಇಬ್ಬರು ಪಂಡಿತರು ಕಾಶ್ಮೀರದವರು ; ಎಂದು ಹೇಳಲಾಗಿದೆ. ಮತ್ತೊಬ್ಬ ರಾಮಕಂಠ ಕಾನ್ಯಕುಬ್ಜದವನು. ಇವನು ತನ್ನನ್ನು ನಾರಾಯಣ-ವಂಶಜ ಮುಕ್ತಾಕಣನ ಚಿಕ್ಕ ತಮ್ಮನೆಂದು ಹೇಳಿಕೊಂಡಿದ್ದಾನೆ. ಮುಕ್ತಾಕಣ ಕಾಶ್ಮೀರದ ರಾಜ ಅವಂತಿವರ್ಮನ ಆಸ್ಥಾನಕವಿ.

ಒಟ್ಟಿನಲ್ಲಿ ಕ್ರಿ. ಶ. ೯ ನೆಯ ಶತಮಾನದಿಂದ ೧೩ ರವರೆಗೆ ದ್ವೈತ-ಸಿದ್ಧಾಂತಶೈವಪ್ರಚಾರವು ಗುಜರಾತ್, ಮಧ್ಯಪ್ರದೇಶ, ಚೋಳ ಮತ್ತು ಕಾನ್ಯಕುಬ್ಜಗಳಲ್ಲಿ ಪ್ರಚಾರದಲ್ಲಿತ್ತು ; ಎಂಬುದು ಸ್ಪಷ್ಟ.

**ಸಿದ್ಧಾಂತ-ಶೈವದರ್ಶನಸ್ವರೂಪ**

ಸಿದ್ಧಾಂತಶೈವವು ಮಹಾಮಾಯೆ, ಪುರುಷ ಮತ್ತು ಶಿವ ಎಂಬ ಮೂರು ಪ್ರಧಾನತತ್ತ್ವಗಳನ್ನು ಒಪ್ಪಿದೆ. ಇದನ್ನೇ ಪತಿ, ಪಶು ಮತ್ತು ಪಾಶ ಎಂದು ಹೆಸರಿಸಲಾಗಿದೆ. ಇಲ್ಲಿಯ ಪತಿ ಮತ್ತು ಪಶುಶಬ್ದಗಳು ಶಿವ ಮತ್ತು ಪುರುಷಗಳಿಗೆ ಪರ್ಯಾಯವಾಚಕಗಳಾದರೂ ಮಹಾಮಾಯೆ ಮತ್ತು ಪಾಶಗಳಿಗೆ ತುಂಬಾ ಅಂತರವಿದೆ. ಏಕೆಂದರೆ– ಇಲ್ಲಿ ಹೇಳಿರುವ ಪಾಶವು ಮಹಾಮಾಯೆಗಿಂತ ವ್ಯಾಪಕವಾದದ್ದು. ಪಾಶದಲ್ಲಿ ಅಂತರ್ಗತವಾಗಿರುವ ಮಲ-ಮಾಯಾ-ರೋಧಶಕ್ತಿ-ಕರ್ಮ-ಬಿಂದು ಎಂಬ ಅಮುಖ್ಯಪದಾರ್ಥಗಳಲ್ಲಿರುವ ಬಿಂದುವನ್ನೇ ಮಹಾಮಾಯೆ ಎಂದು ಹೇಳಲಾಗಿದೆ.

**ಮೂವತ್ತಾರು ತತ್ತ್ವಗಳು**

ಸಿದ್ಧಾಂತ ಶೈವವು ಮುಖ್ಯವಾಗಿ ತತ್ತ್ವತ್ರಯವನ್ನು ಹೇಳಿದೆಯಾದರೂ ಅದರಲ್ಲಿ ಮೂವತ್ತಾರು ತತ್ತ್ವಗಳು ಅಂತರ್ಗತವಾಗಿವೆ. ಮೂವತ್ತಾರು ತತ್ತ್ವಗಳ ವಿಷಯದಲ್ಲಿ ಸಿದ್ಧಾಂತಶೈವದರ್ಶನವ್ಯಾಖ್ಯಾತೃಗಳಲ್ಲಿ ಮತಭೇದವುಂಟು. ಇಲ್ಲಿ ಪತಿತತ್ತ್ವದಲ್ಲಿ ಶಿವ-ಶಕ್ತಿ-ಮಂತ್ರಮಹೇಶ-

ಮಂತ್ರೇಶ ಮತ್ತು ಮಂತ್ರ ಎಂಬ ಐದು ತತ್ತ್ವಗಳು ಅಂತರ್ಗತವಾಗಿವೆ. ಪಶುತತ್ತ್ವದಲ್ಲಿ ವಿಜ್ಞಾನಾಕಲ, ಪ್ರಳಯಾಕಲ, ಸಕಲ ಎಂಬ ಅವಾಂತರಭೇದಗಳಿದ್ದರೂ ಅವು ಗೌಣ. ಇದರಿಂದ ಅದು ಒಂದು. ಅದರಂತೆ ಪಾಶತತ್ತ್ವದಲ್ಲಿ ಮಲ-ನಿರೋಧಶಕ್ತಿ-ಮಾಯಾಬಿಂದು-ಕರ್ಮ ಎಂಬ ಐದು ತತ್ತ್ವಗಳು ಅಂತರ್ಗತವಾಗಿವೆ. ಅವುಗಳಲ್ಲಿ ಮಾಯೆ ಪ್ರಧಾನ. ಉಳಿದವು ಅಪ್ರಧಾನ. ಮಾಯೆಯ ಪರಿಣಾಮ– ಕಲಾ-ನಿಯತಿ-ರಾಗ.ವಿದ್ಯಾ-ಕಾಲ ತತ್ತ್ವಗಳು ಮತ್ತು ಸಾಂಖ್ಯರು ಒಪ್ಪಿರುವ ಪ್ರಕೃತಿ ಮೊದಲು ಪೃಥಿವೀವರೆಗಿನ ಇಪ್ಪತ್ತುನಾಲ್ಕು ತತ್ತ್ವಗಳೂ ಸೇರಿ ಒಟ್ಟು ಮೂವತ್ತಾರು ತತ್ತ್ವಗಳು.

## ತತ್ತ್ವತ್ರಯ

೧. ಪತಿ :– (ವಿಶ್ವೋತ್ತೀರ್ಣ– ಶಿವ) ಸಿದ್ಧಾಂತಶೈವವು ಒಪ್ಪಿರುವ ಪತಿತತ್ತ್ವವು ವೇದೋಕ್ತ-'ಪಶುಪತಿ' ತತ್ತ್ವಕ್ಕಿಂತ ವಿಶಿಷ್ಟವಾದದ್ದು. ಏಕೆಂದರೆ ವೇದದ ಪಶುಪತಿ ನಾಲ್ಕುಕಾಲಿನ ಪ್ರಾಣಿಗಳಿಗೆ ಪತಿ ; ಇಲ್ಲಿ ಆತ ಎಲ್ಲ ಜೀವಕೋಟಿಗೂ ಪತಿ ; ಮತ್ತು ಪಾಲಕ ; ಹಾಗೂ ಸರ್ವಶಕ್ತ. ಪತಿಯು ಏಕ, ಸರ್ವವ್ಯಾಪಿ, ನಿತ್ಯ, ಅನಾದ್ಯಂತ, ಅನಾದಿಮುಕ್ತ, ನಿರ್ಮಲ, ಚಿದ್ಘನ, ಪ್ರಭು, ಶಾಂತ, ಅಕಾರಣಕಾರಣ, ಸೃಷ್ಟಿಕರ್ತನಾದರೂ ಅವಿಕಾರಿ. ತಾವರೆಗಳನ್ನು ಅರಳಿಸುವ ರವಿಯಂತೆ, ಆತ ಜಗತ್ತಿಗೆ ನಿಮಿತ್ತಕಾರಣ. ಅವನ ಶಕ್ತಿಗಳು ಉಪಾದಾನಕಾರಣ.[1]

ಉಪಾದಾನವಾದ ಶಕ್ತಿಯ ಸಹಾಯದಿಂದ ಪತಿಯು ವಿಶ್ವವನ್ನು ಸೃಜಿಸುತ್ತಾನೆ. ಅಲ್ಲಿ ಜೀವರು ತಮ್ಮ ತಮ್ಮ ಕರ್ಮಗಳಿಗೆ ಅನುಗುಣವಾಗಿ ಸುಖ-ದುಃಖಗಳನ್ನು ಅನುಭವಿಸುತ್ತಾರೆ. ಕಡೆಯಲ್ಲಿ ಪತಿಯು ಅವರನ್ನು ಪಾಶಮುಕ್ತರನ್ನಾಗಿ ಮಾಡುತ್ತಾನೆ. ಇದನ್ನೇ ತತ್ತ್ವಪ್ರಕಾಶವು–

ಶಕ್ತ್ಯೋ ಯಯಾ ಶಂಭುರ್ಭುಕ್ತೌ ಮುಕ್ತೌ ಚ ಪಶುಗಣಸ್ಯಾಸ್ಯ ||
ತಾಮೇಕಾಂ ಚಿದ್ರೂಪಾಮಾದ್ಯಾಂ ಸರ್ವಾತ್ಮನಾಸ್ಮಿ ನತಃ ||

–[ತ. ಪ್ರ. ೫]

ಎಂದರೆ ಪರಮೇಶ್ವರನು ಯಾವ ಶಕ್ತಿಯ ನೆರವಿನಿಂದ ಈ ಜೀವಾತ್ಮರ ಭೋಗ ಮತ್ತು ಮೋಕ್ಷಗಳನ್ನು ಕೊಡಲು ಸಮರ್ಥನಾಗುವನೋ ಅಂಥ ಅದ್ವಿತೀಯಳಾದ ಜ್ಞಾನ-ಕ್ರಿಯಾಸ್ವರೂಪಳಾದ ಆ ಮುಖ್ಯ ಶಕ್ತಿಯನ್ನು ಶರಣಾಗುತ್ತೇನೆ. ಶಿವ-ಶಕ್ತಿಗಳಿಗೆ ಇರುವ ಸಂಬಂಧವು ಚಂದ್ರ ಚಂದ್ರಿಕೆಗಳಿರುವಂತೆ ಅವಿನಾಭಾವ. ಈ ಶಕ್ತಿಗೆ ಅಮೋಘಾ, ಅಪರಿಚ್ಛಿನ್ನಾ, ಅವಿಕಲ್ಪಾ, ಅಕಾರಣಾ, ಸ್ವಪ್ರಕಾಶಾ ಮುಂತಾದ ವಿಶೇಷಣಗಳಿವೆ. ಇದರಿಂದ ಶಕ್ತಿ-ಸ್ವರೂಪನಿರೂಪಣದಲ್ಲಿ ಸಿದ್ಧಾಂತಶೈವವು ದ್ವೈತಾದ್ವೈತದಿಂದ ಪ್ರಭಾವಿತವಾದದ್ದು ; ಎಂದು ವೇದ್ಯವಾಗುತ್ತದೆ. ಶಿವ-ಶಕ್ತಿಗಳೆರಡೂ ಚಿತ್‌ಸ್ವರೂಪ ಎಂಬುದು ಸ್ಪಷ್ಟವಾಗುತ್ತದೆ. ಇವರಲ್ಲಿ ಚಿತ್‌ಸ್ವರೂಪನಾದ ಶಿವನು ಸ್ವನಿಷ್ಠ ; ಚಿತ್ ಶಕ್ತಿಯು ಮಾತ್ರ ಜ್ಞಾನಕ್ಕಾಗಿ ವಿಷಯವನ್ನು ಆಶ್ರಯಿಸುತ್ತಾಳೆ ; ಎಂಬುದು ಮಾತ್ರ ಭೇದ. ಇವರಿಬ್ಬರಿಗೆ ಧರ್ಮ-ಧರ್ಮಿರೂಪ ಸಂಬಂಧ ಉಂಟು. ಶಿವನಿಗೆ ಪರಾಪೇಕ್ಷೆಯಿಲ್ಲ.

---

[1] ನಿಮಿತ್ತಕಾರಣಂತ್ವೀಶೋ ಹ್ಯುಪಾದಾನಂ ಚ ಶಕ್ತಯಃ !
ಸಮವಾಯಿ ತಥಾ ಮಾಯಾ ಕಾರ್ಯಮೇತತ್ ಜಗತ್ತ್ರಯಮ್ ||

–[ಮ. ಶಾ. ೩೭]

ಶಕ್ತಿಗೆ ಪರಾಪೇಕ್ಷೆ ಅಗತ್ಯ. ಹೇಗೆ ಬೆಂಕಿಯ ದಾಹಕ-ಶಕ್ತಿಯು ದಾಹ್ಯವಾದ ಇಂಧನದೊಡನೆ ಸೇರಿ ಅಭಿವ್ಯಕ್ತವಾಗುತ್ತದೆಯೋ ಅದರಂತೆ ಶಿವನ ಶಕ್ತಿಯು ಹೊರಗಿನ ಜಗತ್ತಿನೊಡನೆ ಸೇರಿಯೇ ತನ್ನನ್ನು ಅಭಿವ್ಯಕ್ತಗೊಳಿಸುತ್ತದೆ.

**ಸೃಷ್ಟಿ ಎರಡು ಬಗೆ**

ಸೃಷ್ಟಿಯು ಶುದ್ಧ ಮತ್ತು ಅಶುದ್ಧ ಎಂದು ಎರಡು ಬಗೆ. ಮೊದಲನೆಯದಕ್ಕೆ ಪತಿ (ಶಿವ) ಸಾಕ್ಷಾತ್‌ಕರ್ತೃ ; ಬಿಂದು ಸಮವಾಯಿಕಾರಣ. ಆದ್ದರಿಂದ ಶಿವನು ಶುದ್ಧತತ್ತ್ವಭುವನಾದಿಗಳನ್ನು ಸೃಜಿಸಿ ಮುಕ್ತರನ್ನು ವಿದ್ಯೇಶ್ವರತತ್ತ್ವದಲ್ಲಿ ನಿಯೋಜಿಸುತ್ತಾನೆ. [ಶ. ಪ್ರ. ೧೦]

ಶುದ್ಧಸೃಷ್ಟಿಯಲ್ಲಿ ಬಿಂದುವಿನಿಂದ ನಾದ, ಅದರ ಪರಿಣಾಮ ಶುದ್ಧವಿದ್ಯೆ. ಅವನು ಅಶರೀರಿಯಾದರೂ ಶುದ್ಧಸೃಷ್ಟಿಯನ್ನು ಮಾಡಬಲ್ಲ. ಅಪರಿಮಿತಾತ್ಮನಾದ ಅವನು ಶರೀರದಲ್ಲಿ ಸ್ಪಂದವನ್ನು ಹುಟ್ಟಿಸುತ್ತಾನೆ. ಇಂಥ ಸೃಷ್ಟಿ ಎಸಗಲು ಶಿವನಿಗೆ ಶರೀರದ ಅಗತ್ಯವಿಲ್ಲ. ಅದು ನಿರ್ವಿಕಲ್ಪ-ಜ್ಞಾನಸ್ವರೂಪ. ಅಲ್ಲಿ ವಿಕಲ್ಪವಿಲ್ಲ. ಏಕೆಂದರೆ– ಅದು ವಿಕಲ್ಪಜ್ಞಾನವನ್ನು ಬಯಸುವ ಶಬ್ದೋತ್ಪತ್ತಿಗೆ ಮೀರಿದ್ದು.

ಅಶುದ್ಧಸೃಷ್ಟಿಗೆ ಪತಿಪ್ರೇರಿತರಾದ ಬೈಂದವಶರೀರವುಳ್ಳ ವಿದ್ಯೇಶ್ವರರು ಕರ್ತೃಗಳು. ಇದಕ್ಕೆ ಸಮವಾಯಿಕಾರಣ ಮಾಯೆ. ಪಾಶಬದ್ಧರಾದ ಪಶುಗಳು ತಮ್ಮ ಕರ್ಮಕ್ಕೆ ಅನುಗುಣವಾಗಿ ವಿವಿಧ ಸುಖದುಃಖಗಳನ್ನು ಅನುಭವಿಸುತ್ತಾರೆ. ಇದು ಸವಿಕಲ್ಪಸೃಷ್ಟಿ. ಏಕೆಂದರೆ– ಇದು ಶಬ್ದೋತ್ಪತ್ತಿಯ ತರುವಾಯ ಅಸ್ತಿತ್ವವನ್ನು ಪಡೆಯುತ್ತದೆ.

೨. ಪಶು :– ಇದು ಎರಡನೆಯ ಮುಖ್ಯ ಪದಾರ್ಥ. ಕ್ಷೇತ್ರಜ್ಞ ಮೊದಲಾದವು ಇದರ ಪರ್ಯಾಯಪದಗಳು. ಈ ಪಶು ಚಾರ್ವಾಕರು ಹೇಳುವಂತೆ ದೇಹವೇ ಆತ್ಮನಲ್ಲ ; ನೈಯಾಯಿಕ ಮತದಂತೆ ಜ್ಞೇಯನೂ ಅಲ್ಲ ; ಜೈನ ಸಿದ್ಧಾಂತದಂತೆ ದೇಹಪರಿಮಾಣನೂ ಅಲ್ಲ ; ಬೌದ್ಧರೆನ್ನುವಂತೆ ಕ್ಷಣಿಕನೂ ಅಲ್ಲ ; ವೇದಾಂತಿಗಳು ತಿಳಿದಿರುವಂತೆ ಪರಮಾರ್ಥತಃ ಬ್ರಹ್ಮಸ್ವರೂಪಿಯೂ ಅಲ್ಲ ; ಸಾಂಖ್ಯರ ಮತದಂತೆ ಜ್ಞಾನ-ಕ್ರಿಯಾ ಶಕ್ತಿರಹಿತನೂ ಅಲ್ಲ. ಆದರೆ ಆತ ಜ್ಞಾನಕ್ರಿಯಾಶಕ್ತಿಯುತ ; ನಿತ್ಯ. ಅವನ ಅಪರಿಮಿತಜ್ಞಾನ-ಕ್ರಿಯಾ-ಶಕ್ತಿಗಳು ಈಶಾನುಗ್ರಹದಿಂದ ಮುಕ್ತಿಯಲ್ಲಿ ಅಭಿವ್ಯಕ್ತವಾಗುತ್ತವೆ. ಆದ್ದರಿಂದಲೇ ಅವನು ಶಿವಸಾಮ್ಯವನ್ನು ಹೊಂದುತ್ತಾನೆ.

ಪಶು ಮೂರು ವಿಧ– ವಿಜ್ಞಾನಾಕಲ, ಪ್ರಳಯಾಕಲ, ಮತ್ತು ಸಕಲ ಎಂದು. ಇದರಲ್ಲಿ ವಿಜ್ಞಾನಾಕಲರು ಆಣವಮಲದ ವಿಭಿನ್ನ-ಧ್ವಸ್ಯಮಾನ-ಧ್ವಸ್ತ ಎಂಬ ದಶೆಗಳನ್ನು ಅನುಸರಿಸಿ ಅವರು ಕ್ರಮವಾಗಿ ಮಂತ್ರ-ಮಂತ್ರೇಶ-ಮಂತ್ರಮಹೇಶ ಎಂದು ಕರೆಯಲ್ಪಡುತ್ತಾರೆ. ವಿಜ್ಞಾನಾಕಲರು– ಕಲಾದಿತತ್ತ್ವವಿಮುಕ್ತರಾಗಿ ಮಾಯಾ-ಕಾರ್ಮ ಎಂಬ ಎರಡೂ ಮಲವಳಿದು, ಆಣವಮಲವೂ ನಷ್ಟವಾಗಿ ಮಂತ್ರಯುತರಾಗುತ್ತಾರೆ.

ಪ್ರಳಯಾಕಲನು– ಆಣವ-ಕಾರ್ಮ ಎಂಬ ಎರಡು ಮಲವಿರುವ ಪಶು. ಆತ ಪ್ರಳಯದಲ್ಲಿ ಅಗಲಿರುವ ಪರಿಮಿತ-ಪ್ರಮಾತೃ. ಸಕಲ– ಮೂರೂ ಮಲಯುಕ್ತ ಪಶು. ಆತ ನಮ್ಮಂತೆ ಕಲಾದಿ ಪೃಥಿವೀವರೆಗಿನ ಮೂವತ್ತು ತತ್ತ್ವಗಳಿಂದ ಕೂಡಿದವ.

೩. ಪಾಶ– ಈ ಪಾಶವೇ ಪಶು ಮತ್ತು ಪತಿ ಎಂಬ ಭೇದಕ್ಕೆ ಕಾರಣ. ಅದು ಮೂರನೆಯ ಪದಾರ್ಥ. ಅದರಲ್ಲಿ ಮಲ-ಮಾಯಾ-ಕರ್ಮ-ನಿರೋಧಶಕ್ತಿ-ಬಿಂದು ಎಂಬ ಐದು ಅವಾಂತರ ಪದಾರ್ಥಗಳಿವೆ. ಇವಕ್ಕೂ ಮೋಕ್ಷಕ್ಕೂ ನಿಕಟಸಂಬಂಧ. ಕರ್ಮ ಮತ್ತು ಮಾಯೆ ಈ ಎರಡನ್ನು ವೇದಾಂತಿಗಳೂ ಒಪ್ಪಿದ್ದಾರೆ. ಅವರು ಈ ಎರಡೂ ಅಳಿವುದೇ ಮೋಕ್ಷ ಎನ್ನುತ್ತಾರೆ. ಆದರೆ ಸಿದ್ಧಾಂತಶೈವಕ್ಕೆ ಅನುಗುಣವಾಗಿ ವೇದಾಂತಿಗಳು ಹೇಳುವ ಮೋಕ್ಷವು ಒಂದು ಅಂಶವೇ ಹೊರತು ಅದು ಪೂರ್ಣಮೋಕ್ಷವಲ್ಲ. ಏಕೆಂದರೆ– ಅವರು ಹೇಳುವ ಎರಡು ಮಲಗಳು ಅಳಿದರೂ ಅಲ್ಲಿರುವ ಆಣವಮಲವು ಬಂಧಕವೇ. ಇವರ ಮತದಂತೆ ಮಾಯೆ ಮತ್ತು ಕಾರ್ಮಮಲಗಳು ನಷ್ಟವಾದರೂ ಆ ಬಗೆಯ ಮುಕ್ತರು ಧ್ವಸ್ತೋನ್ಮುಕ್ತ (ನಷ್ಟವಾಗಲಿರುವ) ಆಣವಮಲವುಳ್ಳ ಪಶುಗಳು–ವಿಜ್ಞಾನಾಕಲರೆನಿಸುತ್ತಾರೆ. ಇವರು ಶುದ್ಧಸೃಷ್ಟಿಯಲ್ಲಿ ಬೈಂದವ-ಶರೀರಗಳನ್ನು ಪಡೆದು ಆಣವ ಮಲದ ಧ್ವಸ್ಯಮಾನ–ಧ್ವಸ್ತ ಮುಂತಾದ ಅವಸ್ಥೆಗಳಿಗೆ ಅನುಗುಣವಾಗಿ ವಿದ್ಯಾ-ಈಶ್ವರ-ಸದಾಶಿವ ಮುಂತಾದ ಮೇಲೆ ಮೇಲಿನ ಭೂಮಿಕೆಗಳಿಗೆ ಒಯ್ಯಲ್ಪಟ್ಟು ಕ್ರಮವಾಗಿ ಮಂತ್ರ-ಮಂತ್ರೇಶ-ಮಂತ್ರ-ಮಹೇಶ ಶಬ್ದಗಳಿಂದ ಕರೆಯಲ್ಪಡುತ್ತಾರೆ.

## ೧. ಆಣವಮಲ

ಮಲಗಳು ಮೂರು :– ಆಣವ, ಮಾಯೀಯ ಮತ್ತು ಕಾರ್ಮ ಎಂದು. ಅವುಗಳಲ್ಲಿ ಆಣವವು ಅನಾದಿ. ಇದು ಪಶುವಿನ ಜ್ಞಾನ ಮತ್ತು ಕ್ರಿಯಾಶಕ್ತಿಗಳನ್ನು ತಿರೋಧಾನ (ಮರೆ) ಮಾಡುತ್ತದೆ. ಈ ಮಲವು (ಕಣ್ಣಿಗೆ ಪರೆಯಂತೆ) ದ್ರವ್ಯರೂಪ. ಇದು ಪತಿಯ ಚಿಕಿತ್ಸೆಯಿಂದ ವಾಸಿಯಾಗುತ್ತದೆ. ಎಂದರೆ ಕಣ್ಣಿನ ಪರೆ ಪರಿಪಕ್ವವಾದಾಗ ಮಾತ್ರವೇ ತೆಗೆಯಲು ಸಾಧ್ಯ. ಅದರಂತೆ ಆಣವವೂ ಕ್ರಿಯಾ-ಚರ್ಯಾ-ಯೋಗಗಳ ಅನುಷ್ಠಾನದಿಂದ ಪರಿಪಕ್ವವಾಗುತ್ತದೆ. ಮಲವು ಪರಿಪಕ್ವವಾದಾಗ ಶಿವಕೃಪೆಯಾಗಿ ಅದು ತೊಲಗುತ್ತದೆ.

## ೨. ಮಾಯಾಮಲ

ಮಾಯೆ ವಸ್ತುರೂಪ. ಅದು ವೇದಾಂತಿಗಳು ಹೇಳುವಂತೆ ಅಸತ್ಯವಲ್ಲ ; ಸದ್ರೂಪ. ಇದು ಅಶುದ್ಧಸೃಷ್ಟಿಯಲ್ಲಿರುವ ಕಲಾ-ಭುವನ-ಸೂಕ್ಷ್ಮ-ಸ್ಥೂಲ-ಶರೀರ ಮತ್ತು ಅದರ ಉಪಭೋಗ್ಯ ವಿಷಯಗಳಿಗೆ ಉಪಾದಾನಕಾರಣ. ಮಾಯಾಮಲವು ಆತ್ಮನ ಬುದ್ಧಿ ಮೊದಲಾದವುಗಳೊಡನೆ ತಾದಾತ್ಮ್ಯವನ್ನು ಹೊಂದುತ್ತದೆ. ಅದಲ್ಲದ್ದನ್ನು ಅದರಂತೆ (ತದಭಾವವತಿ ತದ್ವತ್ತಾಬುದ್ಧಿಃ) ಕಾಣಿಸುತ್ತದೆ ; ಎಂದರೆ– ಕಪ್ಪೆಚಿಪ್ಪನ್ನು ಬೆಳ್ಳಿಯೆಂಬಂತೆ ತೋರಿಸುತ್ತದೆ.

## ೩. ಕಾರ್ಮಮಲ

ಮಾನವನು ಎಸಗಿದ ಕರ್ಮಗಳಿಗೆ ಫಲರೂಪವಾದ ಕರ್ಮವು ಪ್ರವಾಹದಂತೆ ಅನಾದಿ. ಇದು ಸುಖದುಃಖಭೋಗಕ್ಕೆ ಹಾಗೂ ಭೋಗಸಾಧನಗಳಿಗೆ ಶರೀರ-ಇಂದ್ರಿಯಗಳನ್ನು ಕುರಿತು ಕಾರಣ. ಅನಂತ ಮೊದಲಾದವರು ಸೃಜಿಸಿದ ಅಶುದ್ಧಸೃಷ್ಟಿಯು ಕರ್ಮದ ಅಧೀನ. ಆದ್ದರಿಂದಲೇ ಎಲ್ಲರೂ ತಮ್ಮ ತಮ್ಮ ಕರ್ಮಗಳಿಗೆ ಅನುಗುಣವಾಗಿ ಫಲಗಳನ್ನು ಅನುಭವಿಸಲು ಸಮರ್ಥರಾಗುತ್ತಾರೆ. "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಎಂಬುದು ಎಲ್ಲರಿಗೂ ತಿಳಿದದ್ದೇ.

### ೪. ನಿರೋಧಶಕ್ತಿ (ತಿರೋಭಾವ)

ನಿರೋಧ ಅಥವಾ ರೋಧಶಕ್ತಿ ಕೇವಲ ಪಾಶವೇ ಅಲ್ಲದೆ ಅದು ಪರಮೇಶ್ವರನ ಶಕ್ತಿಯೂ ಆಗಿದೆ. ಪಾಶ ಎಂಬ ಹೆಸರು ಇಲ್ಲಿ ಗೌಣ. (ತ. ಪ್ರ. ೧೭-೨೦) ಏಕೆಂದರೆ– ಇದು ಪರಮೇಶ್ವರನಿಗೆ ಉಪಕರಣ. ಏಕೆಂದರೆ– ಪರಮೇಶ್ವರನು ಈ ಪಾಶದಿಂದ ಜೀವಿಗಳನ್ನು ಬಂಧಿಸಿ ಅವರವರ ಭೋಗ್ಯ ಭೋಗಗಳ ಕಡೆ ಒಯ್ಯುತ್ತಾನೆ.

### ೫. ಬಿಂದು

ಬಿಂದುವು ಕೇವಲ ಮಲಸ್ವರೂಪವುಮಾತ್ರವೇ ಅಲ್ಲ : ಅದು ಶುದ್ಧಸೃಷ್ಟಿಗೆ ಉಪಾದಾನವೂ ಆಗಿದೆ ; ಎಂದು ಹೇಳಲಾಯಿತು. ಈ ಬಿಂದುವಿಗೂ ಮೋಕ್ಷಕ್ಕೂ ಸಂಬಂಧವಿದೆ. ಮೋಕ್ಷವು ಪರ ಮತ್ತು ಅಪರ ಎಂದು ಎರಡು ವಿಧ. ಮಾಯೆ ಮತ್ತು ಕಾರ್ಮ ಎಂಬ ಎರಡು ಪಾಶ ಗಳಿಂದ ಮುಕ್ತನಾದ ಪಶು ಪೂರ್ಣಮುಕ್ತನಲ್ಲ. ಅವನಿಗೆ ಆಣವವು ಇದ್ದೇ ಇರುವುದರಿಂದ ಅವನು ಅಪರ ಮುಕ್ತ ; ಆಣವವೂ ಅಳಿದವನು ಪರಮುಕ್ತ.

ಬಿಂದುವು "ಶಿವಾ" ಎಂಬ ಹೆಸರುಳ್ಳ "ಮಾಯೆ"ಯೂ ಆಗಿದೆ. ಶಕ್ತಿ-ಸದಾಶಿವ-ಈಶ್ವರ-ವಿದ್ಯಾ ಎಂಬ ತತ್ತ್ವಗಳು ಇದರ ಪರಿಣಾಮ. ಇದಕ್ಕೆ "ಕುಂಡಲಿನೀ" ಎಂದೂ ಹೆಸರು. ಇದು ಪರಶಿವನ ಪರಿಗ್ರಹ-ಶಕ್ತಿರೂಪ. ಆದರೆ ಜಡವಾದ್ದರಿಂದ ಇದು ಸ್ವತಂತ್ರವಲ್ಲ ; ಪರಶಿವನ ಇಚ್ಛೆಗೆ ಅಧೀನ (ತ. ಪ್ರ. ೨೭).

ಬಿಂದುವಿನ ಪರಿಣಾಮ ನಾದ. ಸಿದ್ಧಾಂತಶೈವಮತದಲ್ಲಿ ಬಿಂದು ಆತ್ಮನಲ್ಲಿ ಸಮವೇತ ವಲ್ಲ. ಅದು ಬಿಂದುವಿನ ಪರಿಣಾಮ. ಪ್ರತಿ ಆತ್ಮನಿಗೂ ನಾದವು ಬೇರೆಬೇರೆಯಾದುದರಿಂದ ನಾದಗಳು ಅನೇಕ.

### ಸಿದ್ಧಾಂತಶೈವವು ವೈಯಾಕರಣರ ಸ್ಫೋಟವನಲ್ಲ

ಪದ ಮತ್ತು ವಾಕ್ಯಗಳಿಂದ ಅರ್ಥಜ್ಞಾನವಾಗಬೇಕಾದರೆ "ಸ್ಫೋಟ" ಎಂಬುದು ಅಗತ್ಯ; ಎಂದು ವೈಯಾಕರಣರು ಹೇಳುತ್ತಾರೆ. ಸ್ಫೋಟಸ್ವರೂಪ:–ಒಂದು ಪದವನ್ನು ಉಚ್ಚರಿಸಿದಾಗ ಶಬ್ದ ಘಟಕವಾದ ಅಕ್ಷರಗಳು ಕಿವಿಗೆ ಬೀಳುತ್ತವೆ. ಉಚ್ಚರಿಸಿದ ಕ್ಷಣದ ತರುವಾಯ ಆ ಅಕ್ಷರಗಳು ನಾಶವಾಗುತ್ತವೆ. ಅರ್ಥಕ್ಕೆ ಶಬ್ದದ ಸಂಬಂಧವು ಅಗತ್ಯವಾದುದರಿಂದಲೂ ಶಬ್ದಘಟಕ ಅಕ್ಷರಗಳು ಉಚ್ಚರಿಸಿದೊಡನೆಯೇ ನಷ್ಟವಾದ್ದರಿಂದಲೂ ಶಬ್ದಗಳಿಂದ ಕೂಡಿದ ವಾಕ್ಯಗಳೂ ಸಹ ಪ್ರತ್ಯಕ್ಷವಲ್ಲ ವಾದ್ದರಿಂದಲೂ ಅರ್ಥಜ್ಞಾನವಾಗಲು ಸಾಧ್ಯವಿಲ್ಲ. ಶಬ್ದದ ಕಡೆಯ ವರ್ಣವನ್ನು ಕೇಳಿದೊಡನೆಯೇ ಆಯಾ ಶಬ್ದದ ಅರ್ಥಜ್ಞಾನವಾಗುತ್ತದೆ ; ಎಂದು ಹೇಳಲಾಗುವುದಿಲ್ಲ. ಏಕೆಂದರೆ "ಗೌಃ" ಎಂಬ ಶಬ್ದದ ಕಡೆಯಲ್ಲಿ ವಿಸರ್ಗವಿರುವಂತೆ "ನರಃ" ಎಂಬ ಶಬ್ದದ ಕಡೆಯಲ್ಲಿಯೂ ವಿಸರ್ಗವಿದೆ. ಇಲ್ಲಿ "ಗೌಃ" ಎಂಬ ಶಬ್ದದ ಕಡೆಯ ವಿಸರ್ಗಶ್ರವಣದಿಂದ ಗೋವಿನ ಅರ್ಥವೇ ಆಗಬೇಕೆಂಬುದಿಲ್ಲ ; ಏಕೆಂದರೆ– "ನರಃ" ಎಂಬಲ್ಲಿಯೂ ವಿಸರ್ಗವಿರುವುದರಿಂದ "ಗೌಃ" ಎಂದಾಗ "ನರಃ" ಎಂಬ ಅರ್ಥವೂ ತೋರಬಹುದು ; ಎಂಬ ಸಂಶಯಕ್ಕೆ ವೈಯಾಕರಣರ ಸಮಾಧಾನ ಹೀಗಿದೆ–

ಪೂರ್ವಪೂರ್ವವರ್ಣಸಂಸ್ಕಾರದಿಂದ ಕೂಡಿರುವ ಅಂತ್ಯವರ್ಣವು ಅಭಿವ್ಯಂಜಿಸುವ ಅರ್ಥವು ವರ್ಣವ್ಯತಿರಿಕ್ತವಾದ್ದರಿಂದ ಅದು ವಿಶಿಷ್ಟವಾದದ್ದು. ನವಿಲಿನ ತತ್ತಿಯಲ್ಲಿರುವ ರಸದಲ್ಲಿ ಅನೇಕ ವರ್ಣಗಳಿರುವಂತೆ ಅದು ಅನೇಕ-ವರ್ಣ-ಅವಭಾಸಕವೂ, ಪದಾತ್ಮಕವೂ, ಪದವ್ಯತಿರಿಕ್ತವೂ ಆದ

ವಾಕ್ಯವು ಸಮಸ್ತಜಗತ್ತನ್ನೂ ಒಮ್ಮೆಗೆ ಅಥವಾ ಕ್ರಮವಾಗಿ ಅಭಿವ್ಯಕ್ತಗೊಳಿಸುತ್ತದೆ. ಇದೇ 'ಸ್ಫೋಟ'. ಇದು ವ್ಯವಹರಿಸುವವರ ಅರ್ಥವನ್ನು ಸ್ಫುಟಗೊಳಿಸುತ್ತದೆ. "ಸ್ಫುಟತ್ಯರ್ಥೋ ಯಸ್ಮಾತ್ ಸ ಸ್ಫೋಟಃ" ಎಂಬುದು ವೈಯಾಕರಣರ ಸಿದ್ಧಾಂತ.

ಸಿದ್ಧಾಂತಶೈವವು ಇದನ್ನು ಒಪ್ಪುವುದಿಲ್ಲ. ಸಿದ್ಧಾಂತಶೈವದ ದೃಷ್ಟಿಯಿಂದ ಅರ್ಥಗ್ರಹಣ ಪ್ರಕಾರವು ಹೀಗೆ- ನಾದವು "ಅಕ್ಷರಬಿಂದು." ಎಂಬ ಅಂತಃಸಂಜಲ್ಪಕ್ಕೆ ಕಾರಣ. ಶಬ್ದಾರ್ಥ ಜ್ಞಾನಕ್ಕೆ ನಾದವೇ ಕಾರಣ. ಅದು ಅಂತಃ-ಸಂಜಲ್ಪವನ್ನು ಉಂಟುಮಾಡುತ್ತದೆ. ಅದರಿಂದ ಬುದ್ಧಿಯು ಬಾಹ್ಯದ ವಿಷಯಪ್ರತಿಬಿಂಬವನ್ನು ಹಿಡಿಯುತ್ತದೆ. ಹೊರಗಿನ ವೃಕ್ಷ ಶಬ್ದವು ಅಂತಃ-ಸಂಜಲ್ಪದ ಹೊರರೂಪ.

ನಾದಗಳು ಅನೇಕ. ಇವುಗಳಲ್ಲಿ ಒಂದೊಂದೂ ಪ್ರತ್ಯೇಕ ಪರಿಮಿತಾತ್ಮನೊಡನೆ ಸಂಬಂಧ ಹೊಂದಿವೆ. ಪ್ರತಿಯೊಂದು ನಾದವೂ ಎಲ್ಲ ಶಬ್ದ ಮತ್ತು ಅದರ ಅರ್ಥಗಳ ಅವ್ಯಕ್ತರೂಪ. ಅಲ್ಲಿ ಎಲ್ಲವೂ ನವಿಲಿನ ತತ್ತಿಯ ರಸದಲ್ಲಿ ರೆಕ್ಕೆ ಪುಕ್ಕವರ್ಣಗಳಿರುವಂತೆ ಪರಸ್ಪರ ಅವಿಭಕ್ತವಾಗಿ ಒಂದಾಗಿರುತ್ತವೆ. ಇದು ಹೊರಗಿನ ವಿಷಯವನ್ನು ಪ್ರತ್ಯಕ್ಷಗೊಳಿಸಿಕೊಳ್ಳುವಾಗ ದ್ರಷ್ಟೃವಿನಲ್ಲಿ ಅಡಗಿರುವ ವಿಷಯವನ್ನು ತಿಳಿಯಲು ಪ್ರಯೋಗಿಸಿದ ವರ್ಣಗಳನ್ನು ಕೇಳುವಾಗ ಶ್ರೋತೃವಿನಲ್ಲಿ ಶಬ್ದಾರ್ಥಗಳ ಅಧ್ಯವಸಾಯವುಂಟಾಗಿ "ಈ ಶಬ್ದಕ್ಕೆ ಇದು ಅರ್ಥ" ಎಂಬ ತಿಳಿವು ಉದಿಸುತ್ತದೆ ; ಎಂಬುದು ಸಿದ್ಧಾಂತಶೈವದ ದೃಷ್ಟಿ.

ಬಿಂದುವಿಗೆ 'ಪರಾ' (ಸೂಕ್ಷ್ಮಾ) ಎಂಬ ಹೆಸರಿದೆ. ಇದರಿಂದಲೇ ಪಶ್ಯಂತೀ ಮಧ್ಯಮಾ ವೈಖರೀ ಎಂಬ ವಾಕ್-ಪ್ರವೃತ್ತಿಗಳು ಉಂಟಾಗುತ್ತವೆ. ಇವರ ಮತದಲ್ಲಿ ನಾದ ಬಿಂದುವಿನ ಪರಿಣಾಮ. ಭರ್ತೃಹರಿಯ ಮತದಲ್ಲಿ ಪಶ್ಯಂತಿಯ ಸಾಕ್ಷಾತ್ಕಾರವೇ ಬ್ರಹ್ಮಸಾಕ್ಷಾತ್ಕಾರ. ಏಕೆಂದರೆ- ಪಶ್ಯಂತಿಯೇ ಬ್ರಹ್ಮರೂಪ. ದ್ವೈತವಾದಿಯಾದ ಶ್ರೀಕಂಠನ ಮತದಲ್ಲಿ ಪಶ್ಯಂತಿ ಬ್ರಹ್ಮವಲ್ಲ ಅದು ಅಚೇತನಬಿಂದುವಿನ ಅಚೇತನ ಪರಿಣಾಮ. ನಾದ-ಬಿಂದುಗಳು ಶಿವ-ಶಕ್ತಿ ಎನಿಸಿವೆ. ಇವೇ ಸಿದ್ಧಾಂತಶೈವದ ಮೂವತ್ತಾರು ತತ್ತ್ವಗಳಲ್ಲಿ ಮೊದಲ ಎರಡು ಪದಾರ್ಥಗಳು.

**ಮೋಕ್ಷ**

ಮೋಕ್ಷವು ಪರ ಮತ್ತು ಅಪರ ಎಂದು ಎರಡು ವಿಧ. ಪರಮೋಕ್ಷವು ಶಿವಸಾಮ್ಯರೂಪ. ಮಲಾವೃತನಾದ ಪಶು ಕ್ರಿಯಾ-ಚರ್ಯಾ-ಯೋಗಾನುಷ್ಠಾನದಿಂದ ಮಾಯಾಮಲ-ವಿಮುಕ್ತನಾಗಿ ಈಶಾನುಗ್ರಹದಿಂದ ಆಣವಮಲವು ಕಳಚಲು ಅಪರಿಮಿತಜ್ಞಾನ-ಕ್ರಿಯಾಶಕ್ತಿಗಳು ಅಭಿವ್ಯಕ್ತವಾಗಿ ಶಿವಸಾಮ್ಯವು ಲಭಿಸುತ್ತದೆ. ಆದರೂ ಮುಕ್ತನು ಶಿವನಿಗಿಂತ ಬೇರೆಯೇ ಇರುತ್ತಾನೆ. ಮೋಕ್ಷವೂ ಕೂಡ ಶಿವನಿಗಿಂತ ಪೃಥಕ್‌ಸತ್ತೆಯನ್ನು ಒಪ್ಪಿರುವುದರಿಂದ ಇದು ದ್ವೈತದರ್ಶನ. ದ್ವೈತವು ಜನಸಾಮಾನ್ಯದೃಷ್ಟಿಯಿಂದ ಹೊರಟಿದೆ. ಸಾಮಾನ್ಯಜನರು ದುಃಖಾಕ್ರಾಂತರಾಗಿ ಈಶ್ವರನ ಆರಾಧನ ಮಾಡಿ ದುಃಖದೂರರಾಗಬೇಕು ; ಎಂಬುದು ಇವರ ದೃಷ್ಟಿ.

**ದ್ವೈತ ಸಿದ್ಧಾಂತದರ್ಶನ ಮತ್ತು ಇತರ ದರ್ಶನಗಳು**

ದ್ವೈತಸಿದ್ಧಾಂತದರ್ಶನದ ಮೌಲಿಕಸಿದ್ಧಾಂತಗಳಿಗೂ ವೈಶೇಷಿಕ, ನ್ಯಾಯ, ಸಾಂಖ್ಯ, ವೇದಾಂತ ಮತ್ತು ಪಾಶುಪತ ಮೊದಲಾದ ಇತರ ದಾರ್ಶನಿಕಸಿದ್ಧಾಂತಗಳಿಗೂ ಬಹಳ ಅಂತರವಿದೆ ; ಎಂಬುದನ್ನು ಹೀಗೆ ಸಂಗ್ರಹಿಸಬಹುದು-

ದ್ವೈತಶೈವಸಿದ್ಧಾಂತದರ್ಶನ ಮತ್ತು ವೈಶೇಷಿಕದರ್ಶನ :— ಸಿದ್ಧಾಂತ ಶೈವವು ಒಪ್ಪಿರುವ ಜಗದುತ್ಪತ್ತಿ ಸಿದ್ಧಾಂತವು ವೈಶೇಷಿಕಕ್ಕಿಂತ ಬೇರೆ. ಸಿದ್ಧಾಂತಶೈವ ಮತ್ತು ಸಾಂಖ್ಯ ಇವುಗಳಿಗೆ ಅನೇಕ ಅಂಶಗಳಲ್ಲಿ ಸಾಮ್ಯವಿದೆ. ಇದು ಪರಿಣಾಮವಾದವನ್ನು ಒಪ್ಪಿದೆ. ಈ ಮತದಲ್ಲಿ ಮಾಯೆ ಪರಿಣಾಮ ಹೊಂದುತ್ತದೆ. ಹಾಲು ತನ್ನ ಮೊದಲ ಅವಸ್ಥೆ ತೊರೆದು ಮೊಸರು ಆಗುವಂತೆ, ಇದು ಸತ್ಕಾರ್ಯ ವಾದವನ್ನು ಅನುಸರಿಸುತ್ತದೆ. ಮಾಯೆಯು ಕಲಾ-ವಿದ್ಯಾ-ರಾಗ-ನಿಯತಿ-ಕಾಲ ಮುಂತಾಗಿ ಪರಿಣಾಮ ಹೊಂದಿದರೂ ಸಂಪೂರ್ಣವಾಗಿ ಪರಿಣಾಮವಲ್ಲ— ಅಂಶತಃ ಘೃತ-ಕೀಟ ನ್ಯಾಯದಂತೆ. ಘೃತವು ತನ್ನಲ್ಲಿ ಬಿದ್ದ ಕೀಟದ ದೆಸೆಯಿಂದ ಕೆಲವು ಅಂಶಗಳಲ್ಲಿ ಮಾತ್ರ ಪರಿಣಾಮ ಹೊಂದುತ್ತದೆ. ಆದ್ದರಿಂದ ಸತ್ಕಾರ್ಯವಾದಿ-ದ್ವೈತಸಿದ್ಧಾಂತದರ್ಶನವು ಅಸತ್ಕಾರ್ಯವಾದಿ-ವೈಶೇಷಿಕ ದರ್ಶನಕ್ಕಿಂತ ಬೇರೆ.

ಈ ದರ್ಶನದಲ್ಲಿ ಕರ್ಮವು ಬುದ್ಧಿಯ ಧರ್ಮ ; ವೈಶೇಷಿಕರು ಹೇಳುವಂತೆ ಅದು ಆತ್ಮ ಧರ್ಮವಲ್ಲ. ಸಿದ್ಧಾಂತಶೈವದಲ್ಲಿ ಭೂತ-ಭವಿಷ್ಯತ್-ವರ್ತಮಾನರೂಪ-ಅಚೇತನ-ಕಾಲವೂ ಕೂಡ ಅನಿತ್ಯ. ವೈಶೇಷಿಕರು ಹೇಳುವಂತೆ ಅದು ನಿತ್ಯವಲ್ಲ. ಈ ಮತದಲ್ಲಿ ನ್ಯಾಯ-ವೈಶೇಷಿಕರು ನಿತ್ಯವೆಂದು ಒಪ್ಪಿರುವ ಅಸಂಖ್ಯಾತ-ಅಚೇತನ-ಪರಮಾಣುಗಳೆಲ್ಲವೂ ಅನಿತ್ಯವೇ. ಇವರ ಮತದಲ್ಲಿ ಆತ್ಮನು ಜ್ಞಾನಸ್ವರೂಪ ; ವೈಶೇಷಿಕರಲ್ಲಿ ಜ್ಞಾನವು ಆತ್ಮನ ಗುಣ.

ಸಿದ್ಧಾಂತಶೈವ-ಸಾಂಖ್ಯ :— ಸಾಂಖ್ಯರು ಪುರುಷನು ಪುಷ್ಕರಪಲಾಶದಂತೆ ನಿರ್ಲಿಪ್ತ ಎನ್ನುತ್ತಾರೆ. ಆದರೆ ಸಿದ್ಧಾಂತಶೈವದಲ್ಲಿ ಪುರುಷನು ಅನಾದಿ ಮಲಾವೃತ. ಪುರುಷ (ಆತ್ಮ)ನಿಗೆ ನಿರ್ಮಲತ್ವವನ್ನು ಒಪ್ಪಿದರೆ ಅವನಿಗೆ ಭೋಗವೇ ಇಲ್ಲದಂತಾಗುತ್ತದೆ. ಭೋಗ ಸ್ವಾಭಾವಿಕವಲ್ಲ ; ಇಲ್ಲದಿದ್ದರೆ ಅದು ಮುಕ್ತಿ-ದೆಸೆಯಲ್ಲಿಯೂ ಇರಬೇಕಾಗುತ್ತದೆ.

ಈ ಮತದಲ್ಲಿ ಭೋಗವು ಸಾಂಖ್ಯರು ಹೇಳುವ ಭೋಗಕ್ಕಿಂತ ಬೇರೆ. ಈ ಮತದಲ್ಲಿ ಚೇತನ ಪುರುಷನೇ ಭೋಕ್ತೃ ಮತ್ತು ಕರ್ತೃ ; ಅಚೇತನವಾದ ಬುದ್ಧಿ ಮೊದಲಾದುವಲ್ಲ.

ಸಿದ್ಧಾಂತಶೈವ ಮತ್ತು ಅದ್ವೈತ ವೇದಾಂತ :— ಸಿದ್ಧಾಂತಶೈವದರ್ಶನಕ್ಕೂ ಅದ್ವೈತ-ವೇದಾಂತದರ್ಶನಕ್ಕೂ ಮುಂದೆ ಕಾಣಿಸಿರುವ ಕೆಲವು ಅಂಶಗಳಲ್ಲಿ ಅಂತರವುಂಟು. ಸಿದ್ಧಾಂತಶೈವವು ಜೀವ-ಬ್ರಹ್ಮರ ಐಕ್ಯವನ್ನು ಒಪ್ಪುವುದಿಲ್ಲ. ಜೀವರು ಭೋಗ ಮತ್ತು ಮೋಕ್ಷಕ್ಕಾಗಿ ಪರಮಾತ್ಮನ ಅಧೀನರು.

ಈ ಮತದಲ್ಲಿ ಜಗತ್ತಿನ ಉಪಾದಾನಕಾರಣವು ನಿಮಿತ್ತಕಾರಣಕ್ಕಿಂತ ಬೇರೆ. ಅದ್ವೈತಿಗಳು ಹೇಳುವಂತೆ ನಿಮಿತ್ತೋಪಾದಾನಗಳು ಕೂಡಿ ಜಗತ್ತಿಗೆ ಕಾರಣವಲ್ಲ. ಹಾಗೆ ಹೇಳಿದರೆ ಕಾರ್ಯದಲ್ಲಿ ಕಾರಣ-ಧರ್ಮಗಳಿರುವುದನ್ನು ಎಲ್ಲರೂ ಒಪ್ಪಿದ್ದಾರೆ. ಕಾರ್ಯಭೂತವಾದ ಜಗತ್ತು ಚೇತನಾಚೇತನರೂಪ. ಆದ್ದರಿಂದ ಅದ್ವೈತಿಗಳ ಬ್ರಹ್ಮವು ಚಿದಚಿತ್-ಸ್ವರೂಪ ; ಎಂದು ಹೇಳಬೇಕಾಗುತ್ತದೆ. ಇನ್ನು ಅದ್ವೈತವು— ಜ್ಞಾನವು ಮೋಕ್ಷಕ್ಕೆ ಉಪಾಯ ಎನ್ನುತ್ತದೆ. ಆದರೆ— ಪರಮಾದ್ವೈತದಲ್ಲಿ ಉಪಾಯ-ಉಪೇಯಭೇದವು ಎಲ್ಲಿದೆ ?

ದ್ವೈತಪಾಶುಪತ— ಸಿದ್ಧಾಂತಶೈವ :— ವಾಸ್ತವವಾಗಿ ಸಿದ್ಧಾಂತಶೈವವು ದ್ವೈತಪಾಶುಪತಕ್ಕಿಂತ ಬೇರೆಯೆ !

ಪಾಶುಪತವು ಹೇಳುವ "ಕಾರಣ"ವು ಸಿದ್ಧಾಂತಶೈವದ "ಪತಿ"ಪದಾರ್ಥಕ್ಕಿಂತ ಬೇರೆಯಲ್ಲ. ಪಾಶುಪತದ ಅನೇಕವಿಚಾರಗಳು ಸಿದ್ಧಾಂತಶೈವದಲ್ಲಿ ಬಂದಿವೆಯಾದರೂ ಪಾಶುಪತರು "ದುಃಖಾಂತ"ವನ್ನು ಮೋಕ್ಷ ಎನ್ನುತ್ತಾರೆ. ಸಿದ್ಧಾಂತಶೈವದಲ್ಲಿ 'ಶಿವಸಾಮ್ಯ'ವೇ ಮೋಕ್ಷ.

೧೦

## ಶೈವಅದ್ವೈತದರ್ಶನ

ಏಕಮೇವಾದ್ವಿತೀಯವಾದ ಪರತತ್ತ್ವವನ್ನು ಶೂನ್ಯವಾದಿಗಳೂ, ವಿಜ್ಞಾನವಾದಿಗಳಾದ ಬೌದ್ಧರೂ, ವೇದಾನುಯಾಯಿಗಳಾದ ಗೌಡಪಾದ, ಶಂಕರ ಮೊದಲಾದವರೂ, ವೈಯಾಕರಣರಾದ ಭರ್ತೃಹರಿ, ಪುಣ್ಯರಾಜ, ಹೇಲರಾಜ, ನಾಗೇಶಭಟ್ಟ ಮೊದಲಾದವರೂ, ವೈಷ್ಣವ-ವಲ್ಲಭಾಚಾರ್ಯರೂ, ಶಕ್ತಿ ಅದ್ವಯವಾದಿಗಳಾದ ಕಾಶ್ಮೀರದ ಶಾಕ್ತರೂ, ಶೈವಾಗಮಾನುಯಾಯಿಗಳೂ, ಸ್ವಾತಂತ್ರ್ಯವಾದಿಗಳೂ ಆದ ಕಾಶ್ಮೀರಶೈವರೂ ಒಪ್ಪಿದ್ದಾರೆ ; ಮತ್ತು ಬೇರೆ ಬೇರೆ ಯುಕ್ತಿಗಳಿಂದ ದೃಷ್ಟಿಕೋಣಗಳಿಂದ ಸಮರ್ಥಿಸಿದ್ದಾರೆ. ಪ್ರಕೃತ ಅದ್ವೈತವನ್ನು ಮುಖ್ಯವಾಗಿ ಪ್ರತಿಪಾದಿಸುವ ಪ್ರತ್ಯಭಿಜ್ಞಾದರ್ಶನವನ್ನು ಕುರಿತು ಸ್ಥೂಲವಾಗಿ ಇಲ್ಲಿ ಪರಿಶೀಲಿಸಲಾಗುತ್ತದೆ.

### ಪ್ರತ್ಯಭಿಜ್ಞಾದರ್ಶನ

ಶೈವ-ಅದ್ವೈತವನ್ನು ಸಮರ್ಥಿಸುವ ಪ್ರಭೇದಗಳಲ್ಲಿ ಕಾಶ್ಮೀರ-ಶೈವದರ್ಶನ ಮುಖ್ಯವಾದದ್ದು. ಇದು 'ಪ್ರತ್ಯಭಿಜ್ಞಾ ದರ್ಶನ' ಎಂದು ಪ್ರಸಿದ್ಧವಾಗಿದೆ.

ಎಲ್ಲ ಅದ್ವೈತದರ್ಶನಗಳೂ ಅರವತ್ತನಾಲ್ಕುಆಗಮುಗಳನ್ನು ಆಶ್ರಯಿಸಿವೆ. ಧಾರ್ಮಿಕ-ದೃಷ್ಟಿಯಿಂದ ಆಗಮುಗಳು ಶಿವನಿಂದ ಬಂದವು (ಅನಾದಿ)ಗಳಾದರೂ ಅವು ಭಾಷೆಯ ದೃಷ್ಟಿಯಿಂದ ವೇದಗಳಿಗಿಂತ ಈಚಿನವು. ಈ ಆಗಮುಗಳನ್ನು ಅನುಷ್ಠಾನಮಾಡಿದವರಲ್ಲಿ ಸ್ವಚ್ಛಂದ, ಲಾಕುಳ, ಅಣುರಾಟ್, ಅಬ್ಜಜ, ಬಲಿ, ವಾಮನ, ವಿಭೀಷಣ, ರಾವಣ, ರಾಮ, ಲಕ್ಷ್ಮಣ, ಸಿದ್ಧ, ಋಷಿ, ಯೋಗಿ ಮುಂತಾದವರು ಮುಖ್ಯರು ; ಎಂಬ ಅಂಶವನ್ನು ಅಭಿನವಗುಪ್ತನು ತಂತ್ರಾಲೋಕ (ಅಹ್ನಿಕ ೩೬) ದಲ್ಲಿ ಸೂಚಿಸಿದ್ದಾನೆ.[1] ಆಚಾರ್ಯ-ಶಂಕರರ "ಚತುಃಷಷ್ಟ್ಯಾ ತಂತ್ರೈಃ ಸಕಲಮಭಿಸಂಧಾಯ ಭುವನಂ" (ಸೌಂದರ್ಯಲಹರೀ) ಎಂಬ ಉಕ್ತಿಯಲ್ಲಿ ಅರವತ್ತುನಾಲ್ಕು ತಂತ್ರಗಳ ಉಲ್ಲೇಖವಿದೆ.

ಪ್ರತ್ಯಭಿಜ್ಞಾದರ್ಶನದ ಪ್ರವರ್ತಕ ಸೋಮಾನಂದ (ಕ್ರಿ. ಶ. ೯೦೦). ಈತ ಆಣವ, ಶಾಕ್ತ, ಶಾಂಭವ, ಪ್ರತ್ಯಭಿಜ್ಞಾ ಎಂಬ ನಾಲ್ಕು ಉಪಾಯಗಳಲ್ಲಿ ಶ್ರೇಷ್ಠವೂ ಕಡೆಯದೂ ಆದ 'ಅನುಪಾಯ' ಎಂಬ ಹೆಸರುಳ್ಳ 'ಪ್ರತ್ಯಭಿಜ್ಞೆ'ಯನ್ನು ದ್ವೈತಶೈವಪ್ರತಿಪಾದಕನಾದ ವಸುಗುಪ್ತ ಆಚಾರ್ಯನಿಗೂ ವೇದ್ಯವಾಗದಿದ್ದ ಮೋಕ್ಷೋಪಾಯ ಹಾಗೂ ಮಹೇಶ್ವರ ಸ್ವರೂಪವನ್ನು ಪ್ರತ್ಯಭಿಜ್ಞೆಯಿಂದ ಅರಿಯಬಹುದು ; ಎಂದು ಯುಕ್ತಿಗಳಿಂದ ಸಮರ್ಥಿಸಿ ತನ್ನ 'ಶಿವದೃಷ್ಟಿ'ಯಲ್ಲಿ ನಿರೂಪಿಸಿದ್ದಾನೆ.

---

[1] ಶೈವದರ್ಶನ ಬಿಂದು– ಡಾ|| ಕಾಂತಿಚಂದ್ರ ಪಾಂಡೇಯ (ಪು. ೭೬).

ಸೋಮಾನಂದನ ಶಿಷ್ಯ ಉತ್ಪಲಾಚಾರ್ಯ. ಈತ 'ಶಿವದೃಷ್ಟಿ'ಗೆ ಪ್ರತಿಬಿಂಬದಂತಿರುವ 'ಈಶ್ವರಪ್ರತ್ಯಭಿಜ್ಞಾಕಾರಿಕೆ'ಯನ್ನು ಅದರ ಮೇಲೆ 'ವೃತ್ತಿ' ಎಂಬ ಟೀಕೆಯನ್ನೂ, ಅದಕ್ಕೆ 'ವಿವೃತಿ' ಎಂಬ ಮತ್ತೊಂದು ಟೀಕೆಯನ್ನೂ ಬರೆದ.

ಅಭಿನವಗುಪ್ತನು ಉತ್ಪಲಾಚಾರ್ಯನ ಕೃತಿಗಳಿಗೆ ಎಂದರೆ ಈಶ್ವರಪ್ರತ್ಯಭಿಜ್ಞಾಕಾರಿಕೆ ಮತ್ತು ಅದರ ವಿವೃತಿಗಳಿಗೆ ಕ್ರಮವಾಗಿ ವಿಮರ್ಶಿನೀ ಮತ್ತು ವಿವೃತಿವಿಮರ್ಶಿನೀ ಎಂಬ ಪ್ರಸಿದ್ಧವಾದ ಎರಡುಟೀಕೆಗಳನ್ನೂ ಬರೆದ. ಮೇಲೆ ಹೇಳಿದ ಪ್ರತ್ಯಭಿಜ್ಞಾಕಾರಿಕೆ, ವೃತ್ತಿ, ವಿವೃತಿ, ವಿಮರ್ಶಿನೀ ಮತ್ತು ವಿವೃತಿವಿಮರ್ಶಿನಿ ಎಂಬ ಐದು ಗ್ರಂಥಗಳು ಪ್ರತ್ಯಭಿಜ್ಞಾದರ್ಶನದ "ಪ್ರಕರಣ ವಿವರಣ-ಪಂಚಕ" ಎಂದು ಮಾಧವಾಚಾರ್ಯರು (ಸರ್ವದರ್ಶನ ಸಂಗ್ರಹ) ಹೇಳಿಕೊಂಡಿದ್ದಾರೆ.

ಅಭಿನವಗುಪ್ತನ "ತಂತ್ರಾಲೋಕ"ವು ಅದ್ವೈತ-ಶೈವದರ್ಶನಗಳೆನಿಸಿದ ಕ್ರಮ-ಕುಲ-ಪ್ರತ್ಯಭಿಜ್ಞೆ ಎಂದು ಪ್ರಸಿದ್ಧವಾದ ಮೂರೂ ದರ್ಶನಗಳನ್ನು ಪ್ರತಿಪಾದಿಸಿದೆ.

ಮಹಾದೇವಗಿರಿಯಲ್ಲಿ ಶಿಲೆಯ ಮೇಲೆ ಪ್ರಕಟವಾಗಿ ವಸುಗುಪ್ತ (ಕ್ರಿ. ಶ. ೮೫೫) ನಿಗೆ ದೊರೆತ ಶಿವಸೂತ್ರಗಳು ಪ್ರತ್ಯಭಿಜ್ಞಾಪ್ರತಿಪಾದಕಗಳಲ್ಲ. ಅವುಗಳಲ್ಲಿ ಶಾಂಭವ-ಶಾಕ್ತ-ಆಣವ ಎಂಬ ಮೂರು ಉಪಾಯಗಳು ಮೂರು ಉನ್ಮೇಷ (ಅಧ್ಯಾಯ) ಗಳಲ್ಲಿ ಉಕ್ತವಾಗಿವೆ. ಆದುದರಿಂದಲೇ ಈಶ್ವರಪ್ರತ್ಯಭಿಜ್ಞಾಕಾರಿಕೆಯಲ್ಲಿ "ಇತಿ ಪ್ರಕಟಿತೋ ಮಯಾ ಸುಘಟ ಏಷ ಮಾರ್ಗೋ ನವೋ" ಎಂದು ಸೋಮಾನಂದನು "ಶಿವದೃಷ್ಟಿ" ಯಲ್ಲಿ ಸೂಚಿಸಿರುವಂತೆ ಉತ್ಪಲಾರ್ಯನು ಹೇಳಿಕೊಂಡಿದ್ದಾನೆ.

ಇದರಂತೆ "ಸ್ಪಂದಕಾರಿಕೆ" ಮತ್ತು ಅದನ್ನು ಆಶ್ರಯಿಸಿರುವ ಗ್ರಂಥಗಳೂ ಸಹ ಪ್ರತ್ಯಭಿಜ್ಞಾ-ಪ್ರತಿಪಾದಕಗಳಲ್ಲ. ಏಕೆಂದರೆ ಸ್ಪಂದಕಾರಿಕೆಯು ಶಿವಸೂತ್ರಗಳ ಸಂಗ್ರಹ. ಸ್ಪಂದಶಾಸ್ತ್ರವು ಪ್ರತ್ಯ-ಭಿಜ್ಞಾಶಾಸ್ತ್ರಕ್ಕಿಂತ ಬೇರೆ.

ಶಿವಸೂತ್ರಗಳಲ್ಲಿ ಸೂಚಿಸಿರುವ ಮೂರು ಮಾರ್ಗಗಳೂ ಆಗಮಗಳನ್ನೇ ಆಶ್ರಯಿಸಿವೆ. ಏಕೆಂದರೆ ಶಿವಸೂತ್ರಗಳು 'ಆಗಮ ಸಾರಸಂಗ್ರಹ'. ಶಿವಸೂತ್ರವಿಮರ್ಶಿನಿಯ (೫೫) "ರಹಸ್ಯಾಗಮಸಾರಸಂಗ್ರಹರೂಪತ್ವಾತ್ ಶಿವಸೂತ್ರಾಣಾಂ" ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

## ಪ್ರತ್ಯಭಿಜ್ಞಾದರ್ಶನದ ಹಿನ್ನೆಲೆ

ಹಿಂದೆ ಕಾಶ್ಮೀರವು ಶಾರದಾಪೀಠ ಎಂದು ಹೆಸರಾಂತಿತ್ತು. ಪ್ರತ್ಯಭಿಜ್ಞಾದರ್ಶನವು ಉದಿಸಿದ ಸಮಯದಲ್ಲಿ ಕಾಶ್ಮೀರವು ಅನೇಕ ದಾರ್ಶನಿಕರ ವಿಚಾರಧಾರೆಗಳ ಸಂಗಮವಾಗಿತ್ತು. ಅಶೋಕ (ಕ್ರಿ. ಪೂ. ೨೭೩-೨೩೨) ನ ಕಾಲದಿಂದಲೂ ಕಾಶ್ಮೀರವು ಬೌದ್ಧರ ನೆಲೆಯಾಗಿತ್ತು. ಇಲ್ಲಿ ಬೌದ್ಧರ ಗ್ರಂಥಗಳಲ್ಲಿದ್ದ ಪರಸ್ಪರ ವಿರೋಧವನ್ನು ಸಮನ್ವಯಗೊಳಿಸುವುದಕ್ಕಾಗಿ ಕಾನಿಷ್ಕನು (ಕ್ರಿ. ಶ. ೭೮-೧೦೦) ಬೌದ್ಧಪಂಡಿತರ ಸಭೆಯೊಂದನ್ನು ಕರೆದನು. ಕಾನಿಷ್ಕನ ಕಾಲದಲ್ಲಿ ಬೌದ್ಧರ ಪ್ರಾಬಲ್ಯವು ಶೈವರಿಗೆ ತಲೆನೋವಾಗಿತ್ತು. ಏಕೆಂದರೆ– ಕಾನಿಷ್ಕನು ಕಾಶ್ಮೀರವನ್ನು ಬೌದ್ಧ-ಭಿಕ್ಷುಕಸಂಘಕ್ಕೆ ಒಪ್ಪಿಸಿದ್ದನು. ಆಗ್ಗೆ ಬೌದ್ಧಸಂಘದ ನೇತೃ ನಾಗಾರ್ಜುನ. ಆತ ತನ್ನ ಸರ್ವಶಕ್ತಿಯನ್ನು ಬೌದ್ಧ-ಧರ್ಮಪ್ರಚಾರ ಮತ್ತು ಶೈವಧರ್ಮನಿರ್ಮೂಲನಕ್ಕಾಗಿ ಬಳಸಿಕೊಂಡ. ನಾಗಾರ್ಜುನ ಮತ್ತು

ಅವನ ಅನುಯಾಯಿಗಳ ಶೈವಧರ್ಮದ್ವೇಷವು ಕಲ್ಹಣನ "ರಾಜತರಂಗಿಣಿ"ಯಲ್ಲಿ ಹಾಗೂ ವರದರಾಜ-ಕೃತ" "ಶಿವಸೂತ್ರವಾರ್ತಿಕ"ದಲ್ಲಿ ಸೂಚಿತವಾಗಿದೆ. [1]

ಕಲ್ಹಣನು ಹೇಳುವಂತೆ ಪಾಣಿನಿಯ ವ್ಯಾಕರಣ ಮತ್ತು ದರ್ಶನಗಳ ಅಧ್ಯಯನ ಪರಂಪರೆಯನ್ನು ಕಾಶ್ಮೀರದ ರಾಜ 'ಅಭಿಮನ್ಯು (ಕ್ರಿ. ಶ. ಸು. ೪೦೦) ಆರಂಭಿಸಿದ. ನ್ಯಾಯ ಮತ್ತು ಅದ್ವೈತ ವೇದಾಂತದರ್ಶನಗಳಿಗೆ ಕಾಶ್ಮೀರದಲ್ಲಿ ಒಳ್ಳೆಯ ಪ್ರಚಾರವಿತ್ತು. ಶ್ರೀಶಂಕುಕನ ನ್ಯಾಯ ಸಿದ್ಧಾಂತಕ್ಕೆ ಮತ್ತು ವೇದಾಂತಸಿದ್ಧಾಂತಕ್ಕೆ ಅನುಗುಣವಾಗಿ ರಚಿತವಾದ ಭಟ್ಟನಾಯಕನ ರಸ ಸೂತ್ರವ್ಯಾಖ್ಯಾನಕ್ಕೆ ಅಲ್ಲಿ ಪ್ರಾಧಾನ್ಯವಿತ್ತು. ಅಭಿನವಗುಪ್ತನು ತನ್ನ "ಕಥಾಮುಖತಿಲಕ"ದಲ್ಲಿ ನೈಯಾಯಿಕರು ಒಪ್ಪಿರುವ ಹದಿನಾರು ಪದಾರ್ಥಗಳನ್ನು ಪ್ರತಿಪಾದಿಸಿದ್ದಾನೆ. ಮಾಲಿನೀವಿಜಯ ವಾರ್ತಿಕದಲ್ಲಿ ವೈಶೇಷಿಕರು ಒಪ್ಪಿರುವ ಸಮವಾಯ-ವಿಶೇಷ-ಅಭಾವಗಳನ್ನು ದೃಢವಾಗಿ ಸಮಾಲೋಚಿಸಲಾಗಿದೆ. ಧ್ವನ್ಯಾಲೋಕ-ಲೋಚನದಲ್ಲಿ 'ಅಭಿಹಿತಾನ್ವಯವಾದ' ಮತ್ತು 'ಅನ್ವಿತಾಭಿಧಾನವಾದ' ಸಿದ್ಧಾಂತ ಮೀಮಾಂಸೆ ಉಕ್ತವಾಗಿದೆ. 'ನೈಷಧೀಯಚರಿತ'ಕರ್ತೃ ಕವಿ ಶ್ರೀಹರ್ಷನು ಜಯಂತಚಂದ್ರನ ಆಜ್ಞೆಯಂತೆ ತನ್ನ ಕೃತಿಯನ್ನು ಶಾರದಾಪೀಠಕ್ಕೆ ಸಮರ್ಪಿಸಲು ಕಾಶ್ಮೀರಕ್ಕೆ ಹೋಗಿದ್ದನು. ಹೀಗೆ ಕ್ರಿ. ಪೂ. ನಾಲ್ಕನೆಯ ಶತಮಾನದಿಂದ ಕ್ರಿ. ಶ. ೧೨ ಶತಮಾನದ ವರೆಗೆ ಕಾಶ್ಮೀರವು ವಿವಿಧ-ದಾರ್ಶನಿಕರ ವಿಚಾರಧಾರೆಗಳ ಸಂಗಮ ಕ್ಷೇತ್ರವಾಗಿತ್ತು.

ಆಚಾರ್ಯ ಶಂಕರರು ಕ್ರಿ. ಶ. ೯೨೦ ರಲ್ಲಿ ಕಾಶ್ಮೀರಕ್ಕೆ ಹೋದರು. ಅವರ ವಿಚಾರ ವೈಭವವು ಮಂಡನಮಿಶ್ರರ ಕರ್ಮಸಿದ್ಧಾಂತ ಹಾಗೂ ಬೌದ್ಧಮತಗಳ ಪ್ರಾಬಲ್ಯವನ್ನು ಕುಗ್ಗಿಸಿತು. ಅವರ ಪ್ರಭಾವದಿಂದ ಅಲ್ಲಿ ಅದ್ವೈತ ವೇದಾಂತ ಮತ್ತು ಅದ್ವೈತ-ಶೈವಾಗಮ-ವಿಚಾರವು ಮೊಳೆಯಲು ಕಾರಣವಾಯಿತು. ಶಂಕರರ ದಕ್ಷಿಣಾಮೂರ್ತಿ-ಸ್ತೋತ್ರವು ಶಿವಾದ್ವೈತ-ವಿಚಾರಧಾರೆಯನ್ನು ಪ್ರೋತ್ಸಾಹಿಸಿತು.

ಸುರೇಶ್ವರಾಚಾರ್ಯರು ಶಂಕರರ ಶಿಷ್ಯರು. ಅವರು ದಕ್ಷಿಣಾಮೂರ್ತಿಸ್ತವಕ್ಕೆ ವ್ಯಾಖ್ಯೆಯನ್ನು ಬರೆದು ಶೈವಾಗಮ-ಪಾರಿಭಾಷಿಕ ಶಬ್ದಗಳನ್ನು ಅದರಲ್ಲಿ ಪ್ರಯೋಗಿಸಿ ಅಲ್ಲಿಯ ಶೈವರನ್ನು ಶಿವಾದ್ವೈತದ ಕಡೆ ಆಕರ್ಷಿಸಿದರು. ಆಗಮವನ್ನು ಆಶ್ರಯಿಸಿರುವ ಶಂಕರಾದ್ವೈತಕ್ಕೆ ಶಿವಾದ್ವೈತ ಸಾಮ್ಯವನ್ನು ನಿದರ್ಶಿಸಿದರು. ಇದರಿಂದ ಅಲ್ಲಿ ಶೈವಾಗಮಗಳನ್ನು ದಾರ್ಶನಿಕ-ದೃಷ್ಟಿಯಿಂದ ಓದುವ ಪರಿಪಾಠ ಬೆಳೆಯಿತು.

"ಶಂಕರರು ಶೈವರು. ಅವರು ಅರವತ್ತನಾಲ್ಕು ಆಗಮಗಳನ್ನು ಅನುಸರಿಸಿದವರು. ಅವರು ಶೈವಾಗಮ ಸಮ್ಮತವಾದ ಶ್ರೀಚಕ್ರವನ್ನು ಜಗನ್ನಾಥದಲ್ಲಿರುವ ತಮ್ಮ ಮಠದಲ್ಲಿ ಸ್ಥಾಪಿಸಿದ್ದು ಸುಪ್ರಸಿದ್ಧ. ಆದುದರಿಂದ ಅವರ ಸಿದ್ಧಾಂತವು ಅದ್ವೈತಶೈವಾಗಮಾಭ್ಯಾಸವನ್ನು ಬಯಸುತ್ತದೆ. ಆದರೆ

---

[1] ನಾಗಾರ್ಜುನೇನ ಸುಧಿಯಾ ಬೋಧಿಸತ್ವೇನ ಪಾಲಿತಾಃ |
ಕ್ರಿಯಾಂ ನೀಲಪುರಾಣೋಕ್ತಾಮಾಚ್ಛಿಂದನ್ನಾಗಮದ್ವಿಷಃ ||
(ರಾಜತರಂಗಿಣೀ)

ನಾಗಬೋಧ್ಯಾದಿಭಿಃ ಸಿದ್ಧೈರ್ನಾಸ್ತಿಕಾನಾಂ ಪುರಃಸರೈಃ |
ಆಕ್ರಾಂತೇ ಜೀವಲೋಕೇಽಸ್ಮಿನ್ನಾತ್ಮೇಶ್ವರ ನಿರಾಸಕೈಃ ||
(ಶಿ. ಸೂ. ವಾರ್ತಿಕ)

ಇಂದು ಅವರ ವೇದಾಂತಭಾಷ್ಯವು ಇದನ್ನು ಗಮನಿಸದೆಯೇ ವಿರುದ್ಧದಿಶೆಯಲ್ಲಿ ಪ್ರಚಾರವಾಗುತ್ತಿರುವುದು ಆಶ್ಚರ್ಯಕರ" ಎಂಬ ಡಾ॥ ಕಾಂತಿಚಂದ್ರ ಪಾಂಡೇಯರ ಸಂದೇಹ ಸಮರ್ಥನೀಯವೇ ಆಗಿದೆ. [1]

ಅಭಿನವಗುಪ್ತನು ಈಶ್ವರಪ್ರತ್ಯಭಿಜ್ಞಾವಿವೃತಿವಿಮರ್ಶನಿಯ ಕಡೆಯಲ್ಲಿ– 'ಅದ್ವೈತಶೈವ ಮತ್ತು ಅದ್ವೈತವೇದಾಂತಗಳ ಮೌಲಿಕ-ಮತಭೇದವು ಮಾಯೆಯ ವಿಷಯದಲ್ಲಿ ಮಾತ್ರ.' ಎನ್ನುತ್ತಾನೆ. ಅದ್ವೈತಿಗಳು ಮಾಯೆ "ಸದಸದನಿರ್ವಚನೀಯ" ಎನ್ನುತ್ತಾರೆ. ಆದರೂ ಶಾಂಕರ ಭಾಷ್ಯದಲ್ಲಿ 'ಮಾಯೆ'ಗೆ ಪರ್ಯಾಯವಾಗಿ 'ಶಕ್ತಿ'ಶಬ್ದವನ್ನು ಬಳಸಲಾಗಿದೆ.

ಉದಾ :– "ಶಕ್ತಿರಹಿತಸ್ಯ ಪ್ರವೃತ್ತ್ಯನುಪಪತ್ತೇಃ ......ಅವಿದ್ಯಾತ್ಮಿಕಾ ಬೀಜಶಕ್ತಿಃ" (ಶಾಂ. ಭಾಷ್ಯ. ಭಾ. ೨೯೭) "ಸರ್ವಜ್ಞಸ್ಯೇಶ್ವರಸ್ಯ ಮಾಯಾಶಕ್ತಿಃ" (ಶಾಂ ಭಾ. ೩೬೨) ಎಂಬ ಉಕ್ತಿಗಳು ಈ ದಿಸೆಯಲ್ಲಿ ಉಲ್ಲೇಖನೀಯಗಳಾಗಿವೆ.

## ಪ್ರತ್ಯಭಿಜ್ಞಾದರ್ಶನಸ್ವರೂಪ

ಪ್ರತ್ಯಭಿಜ್ಞಾದರ್ಶನಕ್ಕೆ ಸ್ವಾತಂತ್ರ್ಯವಾದ, ಆಭಾಸವಾದ, ಸಂವಿದದ್ವಯವಾದ, ಯಥಾರ್ಥಪ್ರತ್ಯಯವಾದ ಮತ್ತು ಕಾಶ್ಮೀರ ಶಿವಾದ್ವೈತ ಎಂಬ ಹೆಸರುಗಳಿವೆ.

## ಸ್ವಾತಂತ್ರ್ಯವಾದ–

ಪರಶಿವನು ಸ್ವತಂತ್ರ. ಆತ ತನ್ನಿಂದಲೇ ತನ್ನಲ್ಲಿಯೇ ತನ್ನ ಇಚ್ಛೆಯಿಂದಲೇ ಪರದೆಶೆಯಲ್ಲಿ ತನಗೆ ಅಭಿನ್ನವಾಗಿ ಅಹಂತಾರೂಪದಿಂದ ತನ್ನಲ್ಲಿರುವ ಪದಾರ್ಥಗಳನ್ನು ಅಪರದೆಶೆಯಲ್ಲಿ ಅನ್ಯೋನ್ಯ ಭೇದವಿರುವಂತೆ ತೋರ್ಪಡಿಸಿ, ಹಾಗೆ ಭೇದರೂಪವಾಗಿ ತೋರುವ ಪದಾರ್ಥಗಳಿಗೆ ಕಾರ್ಯಕಾರಣ ಭಾವ-ಕ್ರಿಯಾಕಾರಕಭಾವಾದಿಗಳನ್ನೂ, ಅವುಗಳಿಗಿರುವ ಪರಸ್ಪರ ಸಂಬಂಧಗಳನ್ನೂ ತೋರ್ಪಡಿಸುವುದೇ ಅವನ ನಿಜಸ್ವರೂಪ ಎಂಬುದೇ ಸ್ವಾತಂತ್ರ್ಯವಾದ ; ಎಂಬುದು ಸ್ವತಂತ್ರವಾದಿಗಳಾದ ಅದ್ವೈತಿ ಶೈವರ ಮತ.

ಪ್ರಕಾಶವಿಮರ್ಶಾತ್ಮನೂ ಸಂವಿತ್ಸ್ವಭಾವನೂ ಆದ ಪರಶಿವನು ತನ್ನ ಸ್ವಾತಂತ್ರ್ಯದಿಂದಲೇ ಮಂತ್ರ-ಮಂತ್ರೇಶ-ಮಂತ್ರಮಹೇಶ. ಅಕಲ, ಸಕಲ ಮೊದಲಾದ ವಿವಿಧಪ್ರಮಾತೃವರ್ಗವನ್ನು ಸ್ವಾತಂತ್ರ್ಯಮಹಿಮೆಯಿಂದ ಪ್ರಕಾಶಪಡಿಸುತ್ತಾನೆ.

"ಸ್ವೇಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ" ಎಂಬ ಉಕ್ತಿ ಈ ಅರ್ಥವನ್ನೇ ಸಮರ್ಥಿಸುತ್ತದೆ. ಇದಕ್ಕೆ ಮೂಲ ಇಚ್ಛಾಶಕ್ತಿ ; ಯೋಗಿಯು ತನ್ನ ಇಚ್ಛಾಶಕ್ತಿಯಿಂದ ಸ್ವತಂತ್ರವಾಗಿ ಅನೇಕ-

---

[1] ಶೈವದರ್ಶನ ಬಿಂದು (ಪು. ೬೦).

ಪದಾರ್ಥಗಳನ್ನು ತೋರಬಲ್ಲನು. ಯೋಗಿಗೆ ಗ್ರಾಹ್ಯ-ಗ್ರಾಹಕಗಳಿಗೆ ಭೇದವು ತೋರುವುದಿಲ್ಲ. ಆತನಿಗೆ ಎಲ್ಲೆಡೆಯೂ 'ಶಿವಾಭೇದ'ದೃಷ್ಟಿ ಸ್ಥಿರಪಟ್ಟಿರುತ್ತದೆ. [1]

ಚಿದಾತ್ಮನಾದ ಪ್ರಮಾತೃವು ಯಾವ ಸಾಧನವೂ ಇಲ್ಲದೆ ತನ್ನಲ್ಲಿರುವ ವಿಶ್ವವನ್ನು ತೋರ್ಪಡಿಸುತ್ತಾನೆ. ಇದು ಆತನ ಇಚ್ಛಾಶಕ್ತಿಯ ವಿಲಾಸ.

**ಆಭಾಸವಾದ–**

ಆಭಾಸಶಬ್ದವು ಅದ್ವೈತವೇದಾಂತದಲ್ಲಿಯೂ ಬಳಕೆಯಲ್ಲಿದೆ. ಆದರೆ ಅದ್ವೈತವೇದಾಂತದಲ್ಲಿರುವ ಆಭಾಸಶಬ್ದದ ಅರ್ಥವು ಕಾಶ್ಮೀರ-ಅದ್ವೈತಶೈವದಲ್ಲಿರುವುದಕ್ಕಿಂತ ಬೇರೆ. ಅದ್ವೈತ ವೇದಾಂತದಲ್ಲಿ ಆಭಾಸವು ಸತ್-ಅಸತ್ತುಗಳಲ್ಲದ ಅನಿರ್ವಚನೀಯಮಾಯೆಯಿಂದ ಕಲ್ಪಿಸಿದ್ದು. ಅದು ಜಡಮಾಯಾಕಲ್ಪಿತವಾದ್ದರಿಂದ ಜಡ ; ಹಾಗೂ 'ಅನಿರ್ವಚನೀಯ'. ಆಭಾಸವು ಈಶ್ವರನಲ್ಲ, ಜಡಾಜಡಗಳಿಗೆ ಅಭೇದ ಕೂಡುವುದಿಲ್ಲ. ಇನ್ನು ಅದನ್ನು ಜಡವಲ್ಲ ; ಎಂದೂ ಹೇಳಲಾಗುವುದಿಲ್ಲ ; ಏಕೆಂದರೆ– ಅದಕ್ಕೆ ಸ್ವತಂತ್ರಸತ್ತಾಸ್ಫೂರ್ತಿಯೇ ಇಲ್ಲ.

ಆಭಾಸಶಬ್ದವು ಮಿಥ್ಯಾಜ್ಞಾನ ಎಂಬ ಅರ್ಥದಲ್ಲಿಯೂ ಇದೆ. ಶುಕ್ತಿಯನ್ನು 'ರಜತ' ಎಂದು ತಿಳಿದಾಗ ಆ ಜ್ಞಾನದಲ್ಲಿ 'ಅವಿದ್ಯೆ'ಯಿಂದ ಅದು ರಜತದಂತೆ ತೋರುತ್ತದೆ ; ಎಂಬುದು ವೇದಾಂತಿಗಳ ಮತ. ಒಟ್ಟಿನಲ್ಲಿ ವೇದಾಂತಿಗಳು ವಾಸ್ತವಿಕವಲ್ಲದ, ಅವಿದ್ಯಾಕಾರ್ಯವಾದ ತಪ್ಪು ತಿಳುವಳಿಕೆಯನ್ನೇ 'ಆಭಾಸ' ಎನ್ನುತ್ತಾರೆ. ಈ ಅರ್ಥವೇ ವೈಭಾಷಿಕ-ವೈಶೇಷಿಕ-ಸೌತ್ರಾಂತ್ರಿಕ-ಯೋಗಾಚಾರ-ವಿಜ್ಞಾನಪಂಥಗಳಲ್ಲಿ ಬಳಕೆಯಲ್ಲಿದೆ.

ಅದ್ವೈತ ಶೈವದರ್ಶನದಲ್ಲಿ ಆಭಾಸಶಬ್ದವು 'ಭಾದೀಪ್ತೌ' ಎಂಬ ಧಾತು ನಿಷ್ಪನ್ನ. 'ಭಾ' ಎಂಬ ಧಾತುವಿಗೆ 'ಬೆಳಗುವುದು' 'ಪ್ರಕಾಶಿಸುವುದು' ಎಂದು ಅರ್ಥ. ಇಲ್ಲಿ ಪ್ರಕಾಶವಾಗಲಿ, ಪದಾರ್ಥಜ್ಞಾನವಾಗಲಿ ತನ್ನ ವ್ಯಕ್ತಿತ್ವದ ಪರಿಪೂರ್ಣತೆಯಿಂದಲೇ ಪ್ರಕಾಶಿಸುತ್ತದೆ. ಇದನ್ನೇ 'ಆಭಾಸ' ಎನ್ನುವುದು. ಇಲ್ಲಿ ನಾವು ಎರಡು ಅಂಶಗಳನ್ನು ಗಮನಿಸಬೇಕು.

(೧) ನಮ್ಮಲ್ಲಿರುವ ಅನುಭವ. ಹೊರಗಿನ ಪ್ರಪಂಚದಲ್ಲಿ ಬಾಹ್ಯ-ಜ್ಞಾನಾನುಭವವಾಗಿ ಬದಲಾವಣೆ ಹೊಂದುತ್ತದೆ.

(೨) ನಾವು ಒಂದು ಪದಾರ್ಥವನ್ನು ಹೆಸರು ಹೇಳಿ ತರಿಸಿದಾಗ ಮೊದಲು ನಮ್ಮಲ್ಲಿದ್ದ ಜ್ಞಾನವೇ ಹೊರಗಿನ ವಿಷಯವಾಗಿ ಪರಿಣಮಿಸುತ್ತದೆ, ಈ ವಿಶ್ವವು ಇಂಥ ಅಂತರ ಮತ್ತು ಬಾಹ್ಯವೆನಿಸುವ ಅನೇಕ ಆಭಾಸಗಳಿಂದ ಕೂಡಿದ್ದು. ಈ ಆಭಾಸಗಳು ಶಿವನ ಸ್ವರೂಪಕ್ಕೆ ಚ್ಯುತಿಯಿಲ್ಲದಂತೆ ಒಂದನ್ನೊಂದು ಬೆರೆಯದೆ ಇರುತ್ತವೆ.

---

[1] ಚಿದಾತ್ಮೈವ ಹಿ ದೇವೋಽಂತಸ್ಥಿತಮಿಚ್ಛಾವಶಾದ್ಬಹಿಃ ।
ಯೋಗೀವ ನಿರುಪಾದಾನಂ ಅರ್ಥಜಾತಂ ಪ್ರಕಾಶಯೇತ್ ॥

–[ಈ. ಪ್ರ. ಅ. ೫. ೧೭]

ಗ್ರಾಹ್ಯಗ್ರಾಹಕ ಸಂವಿತ್ತಿಃ ಸಾಮಾನ್ಯಾ ಸರ್ವದೇಹಿನಾಂ ।
ಯೋಗಿನಾಂ ತು ವಿಶೇಷೋಽಯಂ ಸಂಬಂಧೇ ಸಾವಧಾನತಾ ॥

[ವಿಜ್ಞಾನ ಭೈರವ]

ಅದ್ವೈತ-ಶೈವದರ್ಶನದಲ್ಲಿ ವಿಭಾಗದೃಷ್ಟಿಯಿಂದ ಪರತತ್ತ್ವವು ಎರಡು ವಿಧ- 'ವಿಶ್ವೋತ್ತೀರ್ಣ' ಮತ್ತು 'ವಿಶ್ವಮಯ' ಎಂದು. ಅವು ಯಾವರೀತಿಯಿಂದಲೂ ಬೇರೆ ಬೇರೆ ಅಲ್ಲ ; ಎರಡೂ ಅಭಿನ್ನ.

ವಿಶ್ವೋತ್ತೀರ್ಣ ಎಂದರೆ ಅನುತ್ತರ ನೆನಸಿದ ಶಿವನೇ. ಈ ಸಿದ್ಧಾಂತದಲ್ಲಿ ಜಗತ್ತು ಪಾರಮಾರ್ಥಿಕ ; ಅನುಭವಸಿದ್ಧ, ಹಾಗೂ ಪ್ರಮಾಣಬದ್ಧ. ಯಾವ ತತ್ತ್ವದಿಂದ ಜಗತ್ತು ಉದಿಸಿತೋ ಆ ತತ್ತ್ವವು ಮೋಕ್ಷದಲ್ಲಿಯೂ ತೋರುತ್ತದೆ. ಜ್ಞಾನ-ಸ್ಮೃತಿಗಳು ಅದನ್ನೇ ಅವಲಂಬಿಸಿವೆ. ಆದರೆ ಅದು ವೇದಾಂತಿಗಳ ಮಿಥ್ಯೆಯಲ್ಲ. ಆ ಮೋಕ್ಷವು ಮಾಯೆಯ ನಾಶವೂ ಅಲ್ಲ ; ಅದು ಮಾಯೋತ್ತೀರ್ಣ. ಶೈವಾದ್ವೈತದಲ್ಲಿ ಶಕ್ತಿ ಮತ್ತು ಶಕ್ತಿಮತ್‌ಗಳಿಗೆ ಅಭೇದವುಂಟು. ಅಲ್ಲಿ-

ನ ಶಿವಃ ಶಕ್ತಿರಹಿತೋ ನ ಶಕ್ತಿಃ ಶಿವವರ್ಜಿತಾ ।
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ ॥

ಆ ಐಕ್ಯವು ಸರ್ವಶಕ್ತಿಸಾಮರಸ್ಯರೂಪ. ಅಲಂಕಾರಶಾಸ್ತ್ರದಲ್ಲಿ ಹೇಗೆ ವಿಭಾವ-ಅನುಭಾವ-ವ್ಯಭಿಚಾರಿಭಾವ-ಸ್ಥಾಯಿಭಾವಗಳು ಪಾನಕರಸನ್ಯಾಯದಿಂದ ಸಮರಸಹೊಂದಿ ಸಹೃದಯರ ಹಾಗೂ ಪ್ರೇಕ್ಷಕರ ಅನುಭವಗೋಚರವಾಗಿರುವ ರಸವು ಒಂದೆಯೊ, ಅದರಂತೆ ಸರ್ವಶಕ್ತಿ-ಸಾಮರಸ್ಯಾತ್ಮಕನಾದ ಪರಶಿವನೊಬ್ಬನೇ ಪರತತ್ತ್ವ ; ಆತ ಪ್ರಕಾಶವಿಮರ್ಶಾತ್ಮಕ ; ಸ್ವಪ್ರಕಾಶ-ಸ್ವಪ್ರಕಾಶ ವಿಶ್ರಾಂತ : ಪರಾನಪೇಕ್ಷ, ಪರಿಪೂರ್ಣ. ಆನಂದರೂಪ ಮತ್ತು ವಿಶ್ವೋತ್ತೀರ್ಣ.

ಇನ್ನು ಸಂವಿದದ್ವಯವಾದ ಮುಂತಾದವು ಇದರಲ್ಲಿಯೇ ಅಂತರ್ಭಾವವಾಗುತ್ತವೆ.

### ಭರ್ತೃಹರಿಯ ಮತ

ಭರ್ತೃಹರಿಯು ಕೇವಲ ಕಾಶ್ಮೀರ-ಶೈವಾದ್ವೈತ-ಸಹಜವಾದ ಸ್ವಾತಂತ್ರ್ಯವಾದವನ್ನೇ ಅಲ್ಲದೆ ದ್ವೈತಶೈವಾಗಮಪ್ರತಿಪಾದಿತವಾದ ಇತರ ಸಿದ್ಧಾಂತಗಳನ್ನು ಅನುಸರಿಸಿದ್ದಾನೆ. ಅವು ಮುಖ್ಯವಾಗಿ ಎರಡು ಪ್ರಕಾರವಾಗಿವೆ-

೧) ಈ ಮತದಲ್ಲಿ ಸೃಷ್ಟಿಗೆ ಮೊದಲು ಎಲ್ಲ ವಿಕಾರಗಳೂ ಏಕೀಭಾವದಿಂದ ಪರಸ್ಪರ ಭೇದವನ್ನು ತೊರೆದು ಬ್ರಹ್ಮನಲ್ಲಿರುತ್ತವೆ. ಇದು ಬ್ರಹ್ಮದ ಸಂವರ್ತಾವಸ್ಥೆ. ವಿವರ್ತಾವಸ್ಥೆಯಲ್ಲಿ ಚರಾಚರವೆಲ್ಲವೂ ಅವನಿಂದಲೇ ಮೊದಲು ಉದಿಸುತ್ತದೆ. ಈ ಅನಾಕೃತ ಮತ್ತು ವ್ಯಾಕೃತ ರೂಪಗಳೆರಡೂ ವಿದ್ಯಾ ಮತ್ತು ಅವಿದ್ಯಾಶಕ್ತಿಯ ಪ್ರಭಾವದಿಂದ ತೋರುತ್ತವೆ. ಹೇಗೆ ಕನಸಿನಲ್ಲಿ ಒಂದೇ ಜ್ಞಾನಕ್ಷಣವು ವಿಭಿನ್ನಜಾತಿಯ ಅನೇಕ-ಪದಾರ್ಥಗಳನ್ನು 'ಪ್ರಕಾಶಪಡಿಸುವುದೋ ಅದರಂತೆ ಸಂವೃತಬ್ರಹ್ಮವು ವಿವರ್ತದಲ್ಲಿ ಅನೇಕ ಪದಾರ್ಥಗಳನ್ನು ಪ್ರಕಾಶಪಡಿಸುತ್ತದೆ.

೨) ಭರ್ತೃಹರಿಯ ಮತದಲ್ಲಿ ಮೂರು ಬಗೆಯ ಪ್ರಕಾಶಗಳಿವೆ- ೧) ಅವು ಕೇವಲ ತಾವು ಮಾತ್ರ ಪ್ರಕಾಶಿಸುವುದಿಲ್ಲ ; ಇತರರನ್ನೂ ಬೆಳಗಿಸುತ್ತವೆ. ದೀಪವು ಕತ್ತಲನ್ನು ಹೋಗಲಾಡಿಸುವುದು ಮಾತ್ರವಲ್ಲದೆ ತನ್ನನ್ನೂ ಮತ್ತು ತನಗೆ ಬೇರೆಯಾದ ಘಟಾದಿಗಳನ್ನೂ ಬೆಳಗಿಸುತ್ತದೆ.

೨) ಎರಡನೆಯದು ಆಂತರ. ಅದು ಬುದ್ಧಿ. ಅದು ಬಾಹ್ಯಇಂದ್ರಿಯ ಗ್ರಾಹ್ಯ-ಘಟ-ಪಟಗಳನ್ನೂ ಆಂತರಿಕವಾದ ಸುಖಾದಿಗಳನ್ನೂ ಪ್ರಕಾಶಪಡಿಸುತ್ತದೆ. ಮತ್ತು ಸ್ವಯಂವಿದಿತ ; ಆತ್ಮನನ್ನೂ ತಿಳಿಯುತ್ತದೆ.

೩) ಮೂರನೆಯದು ಶಬ್ದರೂಪಪ್ರಕಾಶ. ಅದು ಪ್ರಕಾಶರೂಪವಾದ ಅಗ್ನಿಯನ್ನು, ಬುದ್ಧಿಯನ್ನೂ, ಮತ್ತು ಅಪ್ರಕಾಶ-ಘಟಾದಿಗಳನ್ನೂ ಬೆಳಗಿಸುತ್ತದೆ.

"ಇಹ ತ್ರೀಣಿ ಜ್ಯೋತೀಂಷಿ, ತ್ರಯಃ ಪ್ರಕಾಶಾಃ, ಸ್ವರೂಪಪರರೂಪ-ಯೋರವದ್ಯೋತಕಾಃ। ತದ್ಯಥಾ ಯೋಽಯಂ ಜಾತವೇದಾ ಯಶ್ಚ ಪುರುಷೇಷ್ವಾಂತರಃ ಪ್ರಕಾಶೋ ಯಶ್ಚ ಪ್ರಕಾಶಾಪ್ರಕಾಶಯೋಃ ಪ್ರಕಾಶಯಿತಾ ಶಬ್ದಾಖ್ಯಃ ಪ್ರಕಾಶಃ, ತತ್ರೈತತ್ ಸರ್ವಮುಪನಿಬದ್ಧಂ ಯಾವತ್ ಸ್ಥಾಸ್ನು ಚರಿಷ್ಣು-ಚೇತಿ"

–[ವಾಕ್ಯಪದೀಯ ಚಾ. ಸಂ. 24]

## ಅದ್ವೈತ ಮತ್ತು ಶೈವವೇದಾಂತ ಮತಗಳಿಗೆ ಇರುವ ಮೌಲಿಕ ಭೇದ

ಸತ್ತು-ಚಿತ್ತು-ಆನಂದ ಸ್ವರೂಪವೇ ಬ್ರಹ್ಮದ ಸ್ವರೂಪಲಕ್ಷಣ. ಅದ್ವೈತಶೈವದಲ್ಲಿ ಸತ್ವವು ಕೇವಲ ಅಸ್ತಿತ್ವವಲ್ಲ ; ಪ್ರಕಾಶಮಾನವೂ ಆಗಿದೆ. ಚಿತ್ವವು ಸ್ವಪ್ರಕಾಶಮಾತ್ರವೇ ಅಲ್ಲ, ಅದು ಪ್ರತ್ಯವಮರ್ಶವೂ ಆಗಿದೆ. ಇನ್ನು ಆನಂದವೂ ಕೂಡ ಕೇವಲ ದುಃಖಾಭಾವ ಮಾತ್ರವೇ ಅಲ್ಲದೆ ಅದು ತನ್ನಲ್ಲಿ ವಿಶ್ರಾಂತವೂ ಆಗಿದೆ. ಇವೆಲ್ಲವೂ ಮೌಲಿಕ ಭೇದಗಳೇ.

ಅವರಂತೆ ವೇದಾಂತದಲ್ಲಿ ಮಾಯೆ ಸದಸದ್ವಿಲಕ್ಷಣ ; ಅನಿರ್ವಚನೀಯ. ಅದಕ್ಕೆ ಬ್ರಹ್ಮತಾದಾತ್ಮ್ಯವಿಲ್ಲ. ಅದ್ವೈತ-ಶೈವದಲ್ಲಿ ಮಾತ್ರ ಮಾಯೆ ಪರಶಿವನಿಗೆ ಅಭಿನ್ನ. ಪರಶಿವತಾದಾತ್ಮ್ಯ ಅದಕ್ಕೆ ಉಂಟು. ಶಕ್ತಿ-ಶಕ್ತಿಮತ್-ಪದಾರ್ಥಗಳಿಗೆ ತಾದಾತ್ಮ್ಯವನ್ನು ಒಪ್ಪಲಾಗಿದೆ. ಬೆಂಕಿ ಮತ್ತು ದಾಹಕಗಳಿಗೆ ಇರುವಂತೆ ಶಿವ-ಶಕ್ತಿಗಳಿಗೆ ತಾದಾತ್ಮ್ಯ. ಈ ದಿಶೆಯಲ್ಲಿ ವೈಯಾಕರಣರೂ ಅದ್ವೈತಶೈವರೂ ಒಂದೇ ಅಭಿಪ್ರಾಯವುಳ್ಳವರು.

೧೧

# ಶೈವ ದ್ವೈತಾದ್ವೈತದರ್ಶನ

ಮೊದಲನೆಯ ಪ್ರಕರಣದಲ್ಲಿ ದ್ವೈತಶೈವ ಮತ್ತು ಸಿದ್ಧಾಂತ-ಶೈವದರ್ಶನಗಳನ್ನು ಕುರಿತು ವಿವೇಚಿಸಲಾಯಿತು. ಎರಡನೆಯ ಶೈವಅದ್ವೈತ-ಪ್ರಕರಣದಲ್ಲಿ ಪ್ರತ್ಯಭಿಜ್ಞಾದರ್ಶನ ಮತ್ತು ಭರ್ತೃಹರಿಯ ಮತಗಳನ್ನು ಪರಿಶೀಲಿಸಲಾಯಿತು. ಪ್ರಕೃತ ದ್ವೈತಾದ್ವೈತವನ್ನು ಪ್ರತಿಪಾದಿಸುವ ಶೈವದರ್ಶನಗಳ ಸ್ವರೂಪವನ್ನು ವಿಮರ್ಶಿಸಲಾಗುತ್ತದೆ.

ಹಿಂದೆ ಹೇಳಿದ ಶೈವದ್ವೈತವು ದ್ವೈತಾದ್ವೈತ ಪ್ರತಿಪಾದಕವಾದ ಲಕುಲೀಶ ಪಾಶುಪತಕ್ಕಿಂತ ಕೆಲವು ಅಂಶಗಳಲ್ಲಿ ಭಿನ್ನವಾಗಿದೆ. ಲಕುಲೀಶ ಪಾಶುಪತದರ್ಶನ ಪ್ರಭಾವವು ಶ್ರೀಕಂಠನ ವಿಶಿಷ್ಟಾದ್ವೈತದ ಮೇಲೆಯೂ ಬಿದ್ದಿರುವುದಲ್ಲದೆ ಶ್ರೀಕಂಠ ಮತ್ತು ರಾಮಾನುಜರ ವಿಶಿಷ್ಟಾದ್ವೈತಗಳು ತಾತ್ತ್ವಿಕ-ವಿಚಾರದಲ್ಲಿ ನಿಕಟ-ಸಂಬಂಧವನ್ನು ಹೊಂದಿವೆ.

ಲಕುಲೀಶದರ್ಶನದಲ್ಲಿ ಧರ್ಮ ಮತ್ತು ದರ್ಶಗಳು ಬೇರ್ಪಟ್ಟಿಲ್ಲ. ಆದುದರಿಂದ ಇಲ್ಲಿ ಕೇವಲ ದಾರ್ಶನಿಕ ತತ್ತ್ವನಿರೂಪಣ ಮತ್ತು ಆ ಪರತತ್ತ್ವಪ್ರಾಪ್ತಿಗಾಗಿ ಎಸಗುವ ಕರ್ಮ-ಧರ್ಮ ಪ್ರತಿಪಾದನ ವಿಚಾರವನ್ನು ಹೇಳಲಾಗುತ್ತದೆ. ಆದ್ದರಿಂದಲೇ ಪಾಶುಪತಸೂತ್ರವು "ಅಥಾತಃ ಪಶುಪತೇಃ ಪಾಶುಪತಂ ಯೋಗವಿಧಿಂ ವ್ಯಾಖ್ಯಾಸ್ಯಾಮಃ" ಎಂದು ಆರಂಭವಾಗಿದೆ. ಇಲ್ಲಿ 'ವಿಧಿ' ಭಾಗವು ದಾರ್ಶನಿಕವಲ್ಲ ; ಆದರೂ ಈ ದರ್ಶನದ ಪರಿಪೂರ್ಣತೆಗಾಗಿ ವಿಧಿಭಾಗವನ್ನು ವಿವರಿಸಲಾಗಿದೆ.

## ಲಕುಲೀಶ-ಪಾಶುಪತದ ಉದಯ

ಈ ದರ್ಶನದ ಉದಯ ಐತಿಹಾಸಿಕವೇ ಆಗಿದೆ. ಮಥುರಾ ಮತ್ತು ಸೋಮನಾಥದಲ್ಲಿರುವ ಶಿಲಾಲೇಖಗಳು, ವಾಯುಪುರಾಣ, ಲಿಂಗಪುರಾಣ, ಸೂತಸಂಹಿತೆ, ರಾಜಶೇಖರಕೃತ ಷಡ್ದರ್ಶನ ಸಮುಚ್ಚಯಗಳಲ್ಲಿ ಲಕುಲೀಶನ ಶಿಷ್ಯಪರಂಪರೆಯನ್ನು ಅಧಿಕರಿಸಿ ಚಾರಿತ್ರಿಕದೃಷ್ಟಿಯಿಂದ ವಿವೇಚಿಸ ಲಾಗಿದೆ. ಲಕುಲೀಶನು ಕ್ರಿ. ಶ. ಸು. ೨ ನೆಯ ಶತಮಾನದವನೆಂದು ಸಿದ್ಧವಾಗಿದೆ.

ಮಥುರೆಯ ಸ್ತಂಭಲೇಖನ- ಈ ಶಾಸನದ ಕೆಲವು ಭಾಗ ನಷ್ಟವಾಗಿದೆ. ಶಾಸನದಲ್ಲಿ "ಏಕಷಷ್ಠೇ ೬೧೧ (ಪ್ರ) ಥಮೇ ಶುಕ್ಲದಿವಸೇ ಪಂಚಮ್ಯಾಂ" ಎಂಬಲ್ಲಿ ಸಂವತ್ಸರದ ಹೆಸರು ನಷ್ಟ ವಾಗಿದೆಯಾದರೂ ಅದು ಬೇರೆ ಪ್ರಮಾಣಗಳಿಂದ ಊಹಿಸಲ್ಪಟ್ಟಿದೆ. 'ಏಕಷಷ್ಠ' ಶಬ್ದವು ಸಮುದ್ರ ಗುಪ್ತನ ಮಗ ವಿಕ್ರಮಾದಿತ್ಯನೆಂಬ ಚಂದ್ರಗುಪ್ತ (೩೮೯-೩೪೧) ನಿಗೆ ಅನ್ವಯಿಸುತ್ತದೆ ; ಎಂದು ಫ್ಲೀಟ, ಸಿಲ್ವಾಲೇವ್ಯಾ ಮುಂತಾದ ವಿದ್ವಾಂಸರು ನಿರ್ಧರಿಸಿದ್ದಾರೆ. [ಶೈವದರ್ಶನ ಬಿಂದು ಪು. ೩೮]

ಈ ಶಾಸನದಲ್ಲಿ ಮಾಹೇಶ್ವರಗುರುಪರಂಪರೆಯು ವರ್ಣಿತವಾಗಿದೆ. ಉದಿತಾಚಾರ್ಯನ ಗುರು-ಪರಮಗುರು-ಪರಮೇಷ್ಠಿಗುರುಗಳು ಕ್ರಮವಾಗಿ ಉಪಮಿತಾಚಾರ್ಯ-ಕಪಿಲ-ಪರಾಶರರು. ಈ ಉದಿತಾಚಾರ್ಯನು ತನ್ನ ಗುರುಪರಂಪರೆಯಲ್ಲಿ ಕೌಶಿಕನ ತರುವಾಯ ಹತ್ತನೆಯವನು. ಈತ ಗುರುಮಠದಲ್ಲಿ ಕಪಿಲೇಶ್ವರ ಮತ್ತು ಉಪಮಿತೇಶ್ವರಮೂರ್ತಿಗಳನ್ನು ಪ್ರತಿಷ್ಠಿಸಿದ.

ಇದರಿಂದ ಆ ಮಠದಲ್ಲಿ ಪೂರ್ವಗುರುಗಳ ನೆನಪಿಗಾಗಿ ಒಂದೊಂದು ಶಿವಲಿಂಗಗಳು ಸ್ಥಾಪಿತ ವಾಗುತ್ತಿದ್ದುದು ವೇದ್ಯವಾಗುತ್ತದೆ. ಈ ಅಂಶವು ಕಾರವಾನವೆಂಬ ಸ್ಥಳದಲ್ಲಿರುವ ಲಕುಲೀಶ್ವರ ಮತ್ತು ರಾಜರಾಜೇಶ್ವರಮಂದಿರಗಳಿಂದಲೂ ದೃಢಪಡುತ್ತದೆ. ಆಗಿನ ಕಾಲದಲ್ಲಿ ತಮ್ಮ ಗುರುಹಿರಿ ಯರ ನೆನಪಿನಲ್ಲಿ ಮೂರ್ತಿಪ್ರತಿಷ್ಠೆ ಮಾಡುತ್ತಿದ್ದ ವಿಷಯವು ಭಾಸಕವಿಯ 'ಪ್ರತಿಮಾ' ನಾಟಕ ದಲ್ಲಿಯೂ ಉಲ್ಲೇಖಿತವಾಗಿದೆ. ಪ್ರತಿಮಾನಾಟಕದ ಮೂರನೆಯ ಅಂಕದಲ್ಲಿ ರಘುವಂಶರಾಜರ ಮೂರ್ತಿಗಳು ಸಂರಕ್ಷಿಸುತ್ತಿದ್ದ ವಿಚಾರವು ಉಕ್ತವಾಗಿದೆ.

ವಾಯುಪುರಾಣ ಮತ್ತು ಲಿಂಗಪುರಾಣಗಳಲ್ಲಿ– ಲಕುಲೀಶ ಪರಮೇಶ್ವರನ ಕಡೆಯ ಅವತಾರ; ಆತ ಕಾಯಾರೋಹಣ ಅಥವಾ ಕಾಯಾವತಾರ ಎಂಬ ಸ್ಥಳದಲ್ಲಿ ಹುಟ್ಟಿದ ; ಎಂದು ಹೇಳಿರುತ್ತದೆ. ಈ ಸ್ಥಳವು ಇಂದು ಬರೋಡಾ ರಾಜ್ಯದಲ್ಲಿ 'ಕಾರ್ವಾನ್' ಎಂದು ಕರೆಯಲ್ಪಡುತ್ತದೆ.

ಲಕುಲೀಶನಿಗೆ ಕೌಶಿಕ-ಗರ್ಗ-ಮಿತ್ರ-ಕೌರುಷ್ಯ ಎಂಬ ನಾಲ್ವರು ಶಿಷ್ಯರಿದ್ದರು. ಪೌರಾಣಿಕ ವಾದ ಈ ಅಂಶವು ಸೋಮನಾಥಮಂದಿರದ ಸ್ತಂಭಲೇಖನದಿಂದಲೂ ಸಮರ್ಥಿಸಲ್ಪಟ್ಟಿದೆ. ಈ ಶಿಲಾ ಲೇಖದಲ್ಲಿ [1] ಮೇಲೆ ಹೇಳಿದಂತೆ ಲಕುಲೀಶನ ಶಿಷ್ಯರ ಹೆಸರುಗಳು ಕೆತ್ತಲ್ಪಟ್ಟಿವೆ.

ಈ ಶಾಸನವು ಚಾಲುಕ್ಯವಂಶದ ರಾಜ ಶಾರ್ಙ್ಗದೇವನ ಕಾಲದಲ್ಲಿ ಹಾಕಿಸಿದ್ದು. ಇದರಲ್ಲಿ ಲಕುಲೀಶನ ಶಿಷ್ಯರ ಹೆಸರುಗಳು ಉಕ್ತವಾಗಿವೆ. ಲಕುಲೀಶನ ಶಿಷ್ಯ ಕೌಶಿಕ. ಈತನ ವಿಷಯವು ಮೇಲೆ ಹೇಳಿದ ಪುರಾಣಗಳಲ್ಲಿ ಮಾತ್ರವಲ್ಲದೆ ಸೂತಸಂಹಿತೆಯ ಲಕುಲೀಶಕ್ಷೇತ್ರಪ್ರಸಂಗದಲ್ಲಿಯೂ,

---

[1] ಡಾ|| ವ್ಯೂಲರ್ ಅವರ ಎಪಿಗ್ರಾಫಿಕಾ ಇಂಡಿಕಾ ಭಾಗ-೧.(ಪು. ೨೬೧).

ರಾಜಶೇಖರನ ಷಡ್ದರ್ಶನಸಮುಚ್ಚಯ ಹಾಗೂ ಹರಿಭದ್ರಸೂರಿಯ ಷಡ್ದರ್ಶನಸಮುಚ್ಚಯಕ್ಕೆ ಗುಣರತ್ನಸೂರಿ ರಚಿಸಿರುವ ಟೀಕೆಯಲ್ಲಿಯೂ ದೊರೆಯುತ್ತದೆ. ಈ 'ಕೌಶಿಕ' ಪಾಶುಪತಸೂತ್ರದ ಮೊದಲ ಸೂತ್ರವ್ಯಾಖ್ಯಾನದಲ್ಲಿ (ಕೌಂಡಿನ್ಯಕೃತ) 'ಕುಶಿಕ' ಎಂದು ಹೇಳಲ್ಪಟ್ಟಿದ್ದಾನೆ.

ಈ ಕಾರಣಗಳಿಂದ ಕೌಶಿಕ ಲಕುಲೀಶನ ಮೊದಲನೆಯ ಶಿಷ್ಯ. ಈತ ಮಥುರಾಶಾಸನೋಕ್ತವಾದ ಉದಿತಾಚಾರ್ಯನಿಗಿಂತ ಹಿಂದೆ-ಹತ್ತನೆಯವನು. ಶಿಲಾಲೇಖನದ ಕಾಲ ಕ್ರಿ.ಶ. ೩೮೦. ಎಂದಮೇಲೆ ಅಲ್ಲಿಂದ ಹಿಂದೆ ಒಬ್ಬೊಬ್ಬರಿಗೆ ೨೫ ವರ್ಷದಂತೆ ಹಿಂದಕ್ಕೆ ಎಣಿಸಿದರೆ ಕ್ರಿ. ಶ. ೧೩೦ ಆಗುತ್ತದೆ. ಆದ್ದರಿಂದ ಲಕುಲೀಶನು ಸ್ಥಾಪಿಸಿದ ಶೈವ-ದ್ವೈತಾದ್ವೈತದರ್ಶನದ ಉಗಮ ಕ್ರಿ. ಶ. ೨೦೦ ಎನ್ನಲಾಗಿದೆ.

**ಲಕುಲೀಶ.ಪಾಶುಪತದರ್ಶನ-ಪ್ರತಿಪಾದಕ-ಸಾಹಿತ್ಯ**

| | | | |
|---|---|---|---|
| ೧. | ಹದಿನೆಂಟು ಶಿವಾಗಮಗಳು | – | (ಶೈವ ದ್ವೈತಾದ್ವೈತಪ್ರತಿಪಾದಕ) |
| ೨. | ಪಾಶುಪತಸೂತ್ರ | – | ಲಕುಲೀಶಕೃತ. |
| ೩. | ಪಂಚಾರ್ಥಭಾಷ್ಯ | – | ಪಾಶುಪತಸೂತ್ರಟೀಕೆ<br>ಕೌಂಡಿನ್ಯ (ರಾಶೀಕರ) ವಿರಚಿತ |
| ೪. | ಯಮಪ್ರಕರಣ– ಆತ್ಮಸಮರ್ಪಣ | – | ವಿಶುದ್ಧಮುನಿಕೃತ. |
| ೫. | ಗಣಕಾರಿಕೆ | – | ಹರದತ್ತಾಚಾರ್ಯವಿರಚಿತ. |
| ೬. | ಗಣಕಾರಿಕಾಟೀಕೆ | – | ಭಾಸರ್ವಜ್ಞಕೃತ. |

ಇವಲ್ಲದೆ ಇನ್ನೂ ಎಷ್ಟೋ ಗ್ರಂಥಗಳು ಈ ದರ್ಶನದ ಮೇಲೆ ಹೊರಟಿರುವಂತೆ ತಿಳಿದುಬರುತ್ತದೆ.

**ಲಕುಲೀಶ-ಪಾಶುಪತ-ವೇದ**

ಲಕುಲೀಶಪಾಶುಪತಕ್ಕೆ ವೇದಗಳಲ್ಲಿ ಕೃಷ್ಣಯಜುಶ್ಶಾಖೆಗೆ ಸೇರಿದ ಮಹಾ ನಾರಾಯಣೋ-ಪನಿಷತ್ತಿಗೆ ಹೆಚ್ಚು ಸಂಬಂಧವು ಕಂಡುಬರುತ್ತದೆ. ಅಲ್ಲಿ ಬರುವ ಸದ್ಯೋಜಾತ-ವಾಮದೇವ-ಅಘೋರ-ತತ್ಪುರುಷ ಮತ್ತು ಈಶಾನ-ಮುಖಗಳು ಲಕುಲೀಶ-ಪಾಶುಪತ-ಸೂತ್ರದಲ್ಲಿ ಬರುವ ಸಾಯುಜ್ಯಪ್ರಾಪ್ತಿಗೆ ಇರುವ ಧ್ಯೇಯಕೋಟಿಗೆ ಸೇರಿವೆ. ಮಹಾನಾರಾಯಣೋಪನಿಷತ್ತಿನಲ್ಲಿರುವ ದಾರ್ಶನಿಕ-ಸಿದ್ಧಾಂತಕ್ಕೂ ದ್ವೈತಾದ್ವೈತಪ್ರತಿಪಾದಕವಾದ ಲಕುಲೀಶಪಾಶುಪತಸೂತ್ರೋಕ್ತ ಸಿದ್ಧಾಂತಕ್ಕೂ ಸಾಮ್ಯವಿದೆ. ಎರಡೂ ಕಡೆ ಬ್ರಹ್ಮವು ಸಗುಣ ; ಮತ್ತು ಶಕ್ತಿ ವಿಶಿಷ್ಟ ; ಎಂಬ ಬಗ್ಗೆ ಸಮ್ಮತವುಂಟು. ಮಹಾನಾರಾಯಣೋಪನಿಷತ್ತಿಗೆ ವಿಶಿಷ್ಟಾದ್ವೈತಪ್ರತಿಪಾದಕವಾದ ವ್ಯಾಖ್ಯೆಗಳನ್ನು ಶೈವ ಮತ್ತು ವೈಷ್ಣವ ಮತಗಳ ಆಚಾರ್ಯರು ಬರೆದಿದ್ದಾರೆ. ಪಾಶುಪತಸೂತ್ರದ ಐದು ಅಧ್ಯಾಯಗಳಿಗೆ ಸದ್ಯೋಜಾತಾದಿ-ಐದು-ಮಂತ್ರಗಳೇ ಮೂಲ.

ಲಕುಲೀಶ ಪಾಶುಪತೋಕ್ತ-'ಪತಿ'-ತತ್ತ್ವವು ಮಹಾನಾರಾಯಣೋಪನಿಷತ್ತಿನಲ್ಲಿ 'ಬ್ರಹ್ಮ' ಎಂಬ ಅರ್ಥದಲ್ಲಿಯೇ ಇದೆ. ಉಪನಿಷತ್ತಿನಲ್ಲಿ ಬರುವ 'ಬ್ರಹ್ಮ'ವು ಜಗತ್ತಿಗೆ ಕಾರಣನಾದರೆ ಇಲ್ಲಿಯ 'ಪತಿ' 'ಉಪಾದಾನ ಕಾರಣ'ಮಾತ್ರವಲ್ಲವೆ "ಮಾಯಿ". ಮಾಯೆಗೆ ಸ್ವತಂತ್ರಸತ್ತೆ ಇದ್ದರೂ ಅದು ಪತಿಯಿಲ್ಲದೆ ಇರಲಾರದು. ಮಾಯೆ ಪತಿಗೆ ವಿಶೇಷಣ.

ಈ ಕೆಳಗಿನ ಉಕ್ತಿಗಳು 'ಬ್ರಹ್ಮ' ಮತ್ತು 'ಪತಿ'-ತತ್ತ್ವಗಳಿಗೆ ಇರುವ ಸಾಮ್ಯವನ್ನು ಸೂಚಿಸುತ್ತವೆ. 'ಮಾಯಾಂ ತು ಪ್ರಕೃತಿಂ ವಿಂದ್ಯಾತ್ ಮಾಯಿನಂ ತು ಮಹೇಶ್ವರಂ' (ತೈ. ಆರ. ೫. ೬೪)

"ಯೋಽಯಮಾಕಾಶೋ ಮಾಯಾವಿಶಿಷ್ಟಬ್ರಹ್ಮಣ ಉಪಾದಾನಕಾರಣಾದುತ್ಪನ್ನಃ" (ತೈ. ಆರ. ಸಾಯಣಭಾಷ್ಯ ಪು. ೫೭೬) "ಉಪನಿಷತ್ತಿನಲ್ಲಿ ಬ್ರಹ್ಮನಿಗೆ ಸಚ್ಚಿದಾನಂದೈಕರಸತ್ವವು ಸ್ವಭಾವ. ಇಲ್ಲಿಯೂ ಪತಿಗೆ ಸೃಷ್ಟಿ ಮೊದಲಾದ ಪಂಚಕೃತ್ಯಕರ್ತೃತ್ವವುಂಟು"; "ಕರ್ಮಕ್ಕೆ ತಕ್ಕ ಫಲಕೊಡುವವನು ಈಶ್ವರನೇ ಹೊರತು ಕರ್ಮವಲ್ಲ". "ಸದ್ರೂಪಬ್ರಹ್ಮವು ಜಗತ್ತನ್ನು ಸೃಜಿಸಿ ಅದನ್ನೇ ಪ್ರವೇಶಿತು". "ಜೀವನ ಮುಕ್ತಿ ಬ್ರಹ್ಮನಲ್ಲಿ ಪ್ರತಿಷ್ಠಿತ".

"ಜೀವಾನಂದವು ಬ್ರಹ್ಮಾನಂದದೊಡನೆ ಅಭೇದ ಹೊಂದುತ್ತದೆ. ಜಿಗಣೆಯು (ಜಲೂಕಾ) ತಾನಿರುವ ಸ್ಥಾನವನ್ನು ಬಿಡದೆ ಹುಲ್ಲಿನ ಮತ್ತೊಂದು ತುದಿಗೆ ವ್ಯಾಪಿಸುವಂತೆ ಪಶುವು (ಜೀವ) ತನ್ನ ಪಶುತ್ವವನ್ನು ಬಿಡದೆಯೇ ಬ್ರಹ್ಮ ಸಾಯುಜ್ಯವನ್ನು ಪಡೆಯುತ್ತದೆ. ಮುಕ್ತಿ ಎಂದರೆ ಜೀವನಲ್ಲಿ ಬ್ರಹ್ಮಶಕ್ತಿಯ ಪ್ರವೇಶ. "ಮುಕ್ತಿ ಎಂದರೆ ಬ್ರಹ್ಮ ಮಹತ್ವವನ್ನು ಹೊಂದುವಿಕೆ". "ದ್ವೈತ ಮತ್ತು ಅದ್ವೈತಗಳಿಗೆ ವಿರೋಧವಿಲ್ಲ. ಏಕೆಂದರೆ- ಬ್ರಹ್ಮತ್ವಾಕಾರದಿಂದ ಅದ್ವೈತವೂ ಭೋಕ್ತೃ-ಭೋಗ್ಯಾಕಾರದಿಂದ ದ್ವೈತವೂ ಸಮನ್ವಯವಾಗುತ್ತದೆ.

"ಸದ್ಯೋಜಾತಾದಿ ಐದು ಮಂತ್ರಗಳು ಪಂಚಮುಖನಾದ ಶಿವನ ವರ್ಣನಪರ".

"ಶಕ್ತಿ ಪತಿಗಿಂತ ಬೇರೆ ಅಲ್ಲ ; ಪತಿ ಅನನ್ಯ ; ಸ್ವತಂತ್ರ. ಎರಡೂ ಸಂಪ್ರದಾಯಗಳಲ್ಲಿ ನಿಷ್ಠೆ, ಸಾಮೀಪ್ಯ, ಸಾಯುಜ್ಯ ಇವುಗಳು ಬೇರೆಬೇರೆಯಾದರೂ ಸಾಯುಜ್ಯದಲ್ಲಿ ಪತಿಯ ಶಕ್ತಿಗಳು ಪಶುವಿನಲ್ಲಿ ಸಂಕ್ರಮವಾಗುತ್ತವೆ.

**ಲಕುಲೀಶ ಪಾಶುಪತ ಮತ್ತೆ ಇತರ ದರ್ಶನಗಳಲ್ಲಿನ ಸಾಮ್ಯ-ವೈಷಮ್ಯಗಳು**

೧. ಈ ಮತದಲ್ಲಿ ಮೋಕ್ಷವು ನೈಯಾಯಿಕರು ಹೇಳುವಂತೆ ದುಃಖಾಂತವಲ್ಲ ; ಅದು ಸುಖಾಂತ ; ಎಂದರೆ- ಪತಿಯಲ್ಲಿರುವ ಸರ್ವಜ್ಞತ್ವ-ಸರ್ವಶಕ್ತಿಮತ್ತ್ವಾದಿಗಳು ಲಭಿಸಿ ಪರಮ-ಐಶ್ವರ್ಯವನ್ನು ಪಡೆಯುವಿಕೆ.

೨. ಲಕುಲೀಶಪಾಶುಪತವು ಸತ್ಕಾರ್ಯವಾದವನ್ನು ಒಪ್ಪಿದೆ. ವೈಶೇಷಿಕರ ಅಸತ್ಕಾರ್ಯವಾದವನ್ನು ಇದು ಒಪ್ಪುವುದಿಲ್ಲ. ಏಕೆಂದರೆ- ಈ ಮತದಲ್ಲಿ ಕಾರಣದಲ್ಲಿ ಕಾರ್ಯವು ಸದಾ ಉತ್ಪನ್ನವಾಗುತ್ತಿರುವುದರಿಂದ ಕಾರ್ಯವು ಅಸತ್ ಅಲ್ಲ.

೩. ವೈಶೇಷಿಕದರ್ಶನದಲ್ಲಿ ಸೃಷ್ಟಿಯು ಪರಮಾಣುಕರ್ಮಕ್ಕೆ ಅಧೀನ. ಇಲ್ಲಿ ಜಗತ್ಸೃಷ್ಟಿಯಲ್ಲಿ ಈಶ್ವರನು ಸ್ವತಂತ್ರ.

೪. ಲಕುಲೀಶ-ಪಾಶುಪತದಲ್ಲಿ ವಿಧಿಯು ಅನುಷ್ಠಾನದಿಂದ ಪಶುವು ಪತಿಸ್ವರೂಪವನ್ನು ಪಡೆಯುವನು: ಅವನು ಮತ್ತೆ ಪಶುತ್ವವನ್ನು ಪಡೆಯನು; ಮೀಮಾಂಸಕರಲ್ಲಿನ ವಿಧಿ-ಅನುಷ್ಠಾನಗಳು,

ಕರ್ತನಿಗೆ ಸ್ವರ್ಗವನ್ನು ಕೊಡುವುದಾದರೂ, ಆ ಸ್ವರ್ಗ ಅನಿತ್ಯ ; ಪುಣ್ಯ ಮುಗಿದಮೇಲೆ ಮತ್ತೆ ಅವನು ಮರ್ತ್ಯಕ್ಕೆ ಹಿಂದಿರುಗಲೇಬೇಕು. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ.'

೫. ರಾಮಾನುಜರು ಮತ್ತು ಆನಂದತೀರ್ಥರು ಮತ್ತು ಅವರ ಹಿಂದಿನ ಆಚಾರ್ಯರು ಒಪ್ಪಿರುವ "ದಾಸತ್ವ" ಮತ್ತು "ತದ್ರೂಪತ್ವ" ಗಳನ್ನು ಲಕುಲೀಶಪಾಶುಪತ ಒಪ್ಪುವುದಿಲ್ಲ. ಏಕೆಂದರೆ ಯಾವ ಬಗೆಯ ದಾಸ್ಯವಾದರೂ ಅದು ದುಃಖರೂಪವೇ. ಅದಕ್ಕಾಗಿಯೇ ಇಲ್ಲಿ ಪರಮೈಶ್ವರ್ಯ ಪ್ರಾಪ್ತಿ ಎಂಬ ಮೋಕ್ಷವನ್ನು ಒಪ್ಪಿರುವುದು.

೬. ದ್ವೈತಪಾಶುಪತದಲ್ಲಿ ಪತಿಯು ಸೃಷ್ಟಿಯಲ್ಲಿ ಕರ್ಮಕ್ಕೆ ಅಧೀನ ; ಇಲ್ಲಿ ಪತಿ ಸ್ವತಂತ್ರ.

೭. ಇಲ್ಲಿ ಸರ್ವಜ್ಞತ್ವ-ಸರ್ವಕರ್ತೃತ್ವಗಳು ಪತಿಗೆ ಸ್ವಾಭಾವಿಕ ; ಪಶುವಿಗೆ ಆಗಂತುಕ.

ದ್ವೈತ ಪಾಶುಪತದಲ್ಲಿ ಇವು ಪಶುವಿಗೆ ಸ್ವಾಭಾವಿಕ. ಅವು ಮಲದಿಂದ ಮುಚ್ಚಿರುತ್ತವೆ. ಸಾಧನೆಯಿಂದ ಮಲವು ಅಳಿದಾಗ ಅವು ಅಭಿವ್ಯಕ್ತವಾಗುತ್ತವೆ.

**ಪಂಚ ಪದಾರ್ಥಗಳು**

ಲಕುಲೀಶಪಾಶುಪತವು ದ್ವೈತಪಾಶುಪತ ಹೇಳಿರುವ ಪತಿ-ಪಾಶ-ಯೋಗ-ವಿಧಿ-ದುಃಖಾಂತ ಎಂಬ ಪಂಚಪದಾರ್ಥಗಳನ್ನು ಒಪ್ಪಿದೆಯಾದರೂ ಅವುಗಳ ಅರ್ಥವಿಕಾಸದಲ್ಲಿ ತುಂಬಾ ವ್ಯತ್ಯಾಸವಿದೆ.

**ಕಾರಣ**–: (ಪತಿ)-ಸದ್ರೂಪ ; ಆದ್ಯ ; ಅನಂತ ; ನಿತ್ಯ : ಕಾರಣಕ್ಕೆ ಕಾರಣ ; ತನಗೆ ಮತ್ತೊಂದು ಕಾರಣವಿಲ್ಲದವ ; ಅಸಂಸಾರಿ ; ಸದ್ಯೋಜಾತಾದಿಪಂಚಬ್ರಹ್ಮಮಂತ್ರವಾಚ್ಯ ; ವಿದ್ಯಾ-ಕಲಾ-ಪಶು ಮುಂತಾದ ಕಾರ್ಯಕ್ಕೆ ಕಾರಣ ; ಬೀಜದಿಂದ ಅಂಕುರೋತ್ಪತ್ತಿಯಾಗುವಂತೆ ಎಲ್ಲವೂ ಅವನಿಂದ ಮೊಳೆಯುವುದರಿಂದ ಆತ-ಭವೋದ್ಭವ ; ಸ್ಥಿತಿ-ಧ್ವಂಸ-ಅನುಗ್ರಹ ಎಂಬ ಲೀಲಾ ಮೂರ್ತಿಯಾದ್ದರಿಂದ 'ದೇವ' ; ಸಿದ್ಧ-ಸಾಧಕ-ಪಶುಗಳಿಗಿಂತ ಪರನಾದ್ದರಿಂದ 'ಜ್ಯೇಷ್ಠ' ; ಸ್ವಾಭಾವಿಕ-ಐಶ್ವರ್ಯವುಳ್ಳವನಾದ್ದರಿಂದ 'ಶ್ರೇಷ್ಠ.' ; ಧರ್ಮ-ಜ್ಞಾನ-ಐಶ್ವರ್ಯ ಮುಂತಾದ ಪ್ರಬಲ ವೃತ್ತಿಗಳನ್ನು ಪಡೆಯುವುದರಿಂದ 'ಬಲಪ್ರಮಥನ' ; ಸಿದ್ಧೇಶ್ವರನ ಹೊರತು ಎಲ್ಲ ಭೂತಗಳಲ್ಲಿ ಹೆಚ್ಚು ಶಕ್ತಿಯನ್ನು ಹುಟ್ಟಿಸುವುದರಿಂದ 'ಸರ್ವಭೂತದಮನ' ; ಕಲಾ-ಕಾರ್ಯಗಳು. ಅಂತಃಕರಣ-ಬಹಿಃಕರಣಗಳು, ಸೂಕ್ಷ್ಮ-ಸ್ಥೂಲಭೂತಗಳು, ಮನಸ್ಸು ಮುಂತಾದವುಗಳಿಂದ ದೂರನಾದ್ದರಿಂದ ನಿಷ್ಕಲ ; ಹಾಗೂ ಅಮನಸ್ಕ. ಈತನೇ ಸದ್ಯೋಜಾತಾದಿ ಐದು ಮಂತ್ರಗಳಲ್ಲಿ ಹಾಗೂ ಪಾಶುಪತ ಸೂತ್ರದಲ್ಲಿ ಪ್ರತಿಪಾದಿತನಾಗಿರುವ ಪತಿ.

ಒಟ್ಟಿನಲ್ಲಿ ಆತ ಒಬ್ಬ ; ಆದರೂ ಆತ ವಿವಿಧ ಕೃತ್ಯಗಳನ್ನು ನಿರ್ವಹಿಸುವಲ್ಲಿ ಅಘೋರ-ಘೋರತರ ಮುಂತಾದ ಪರಸ್ಪರವಿರುದ್ಧರೂಪಗಳಿಂದ ಕೂಡಿ ಬಹುದ್ರವ್ಯಮಿಶ್ರಿತಪಾನಕರಸದಂತೆ ಅನೇಕಕ್ರಿಯೆಗಳಿಗೆ ಆಶ್ರಯನಾದ ಪತಿ ಒಬ್ಬನೆ.

**ಕಾರ್ಯ**: (ಪಶು) ಎರಡನೆಯ ಮುಖ್ಯ ಪದಾರ್ಥ ಕಾರ್ಯ ಅಥವಾ ಪಶು. ಲಕುಲೀಶ ಪಾಶುಪತದಲ್ಲಿ ಒಪ್ಪಿರುವ ಕಾರ್ಯವು (ಪಶು)ವು ಇತರ ದರ್ಶನೋಕ್ತ-ಕಾರ್ಯಕ್ಕಿಂತ ಬೇರೆ. ಈ

ಕಾರ್ಯವು ಸಾಂಖ್ಯರು ಹೇಳುವ ಪ್ರಕೃತಿವಿರುದ್ಧ-ವಿಕೃತಿ-ಸ್ವರೂಪವಲ್ಲ. ಸಾಂಖ್ಯರು ಒಪ್ಪಿರುವ ಪ್ರಕೃತಿ-ವಿಕೃತಿ ಎಂಬ ಎರಡೂ ಅಲ್ಲದ ಪುರುಷನೂ ಈ ಕಾರ್ಯದಲ್ಲಿಯೇ ಸೇರುತ್ತಾನೆ.

ಲಕುಲೀಶ ಪಾಶುಪತದಲ್ಲಿ ಜಡ-ಚೇತನಗಳು ಪತಿಶಕ್ತಿಯಲ್ಲಿ ಸೂಕ್ಷ್ಮರೂಪದಿಂದ ಇದ್ದರೂ ಅವು ಪರಸ್ಪರ ಭಿನ್ನ. ಇಲ್ಲಿ ಅದ್ವೈತಿಗಳು ಹೇಳುವಂತೆ ಕಾರ್ಯರೂಪಪ್ರಪಂಚವು ಮಿಥ್ಯೆಯಲ್ಲ. ಏಕೆಂದರೆ– ಅದ್ವಯವೂ ಅಲ್ಲ ; ದ್ವೈತಾದ್ವೈತ. ಗಗನದಲ್ಲಿ ತಾರೆಗಳೆಲ್ಲ ಅಡಗಿರುವಂತೆ ವಿವಿಧ-ವಸ್ತುಗಳೆಲ್ಲ ಒಂದೇ ಪರತತ್ತ್ವದಲ್ಲಿ ಅಡಗಿವೆ. ವೈಶೇಷಿಕರು ಹೇಳುವಂತೆ ಕಾರ್ಯವು ಹುಟ್ಟುವುದಕ್ಕಿಂತ ಮೊದಲು ಅಸತ್ತಾಗಲಿ, ಅಸದ್ರೂಪವಾಗಲಿ ಅಲ್ಲ. ಕಾರ್ಯವೆಲ್ಲವೂ ಇಲ್ಲಿ ನಿತ್ಯ ಹಾಗೂ ಸದ್ರೂಪ.

**ಕಾರ್ಯಕಾರಣಸಂಬಂಧ :–** ಈ ದರ್ಶನದಲ್ಲಿ ಕಾರ್ಯ-ಕಾರಣಗಳು ಒಟ್ಟಿಗೆ ಇರುತ್ತವೆಯಾದರೂ ಅವು ಪರಸ್ಪರ ಪೃಥಕ್-ಸತ್ತೆಯನ್ನು ಹೊಂದಿರುತ್ತವೆ. ಮೇಲಾಗಿ ಪಶು (ಕಾರ್ಯ) ಇರುವುದರಿಂದಲೇ ಪತಿ (ಕಾರಣ) ಎಂಬ ಹೆಸರು ಸಾರ್ಥಕವಾಗಿದೆ. ಪ್ರಜೆಗಳೇ ಇಲ್ಲದ ಮೇಲೆ 'ಪಾಲಕ'ನು ಹೇಗಾದಾನು ! ನೆಲದಲ್ಲಿ ಬೀಜವಿರುವಂತೆ ಕಾರಣದಲ್ಲಿ ಕಾರ್ಯವು ಪೃಥಕ್ ಸತ್ತೆ ಹೊಂದಿದೆ. ಇವುಗಳಲ್ಲಿ ಕಾರಣ ಸ್ವತಂತ್ರ ; ಕಾರ್ಯ ಅಸ್ವತಂತ್ರ. ಪತಿ (ಕಾರಣ) ಚಿದ್ರೂಪ ; ಪಶು (ಕಾರ್ಯ) ಚಿದಚಿದುಭಯ. ಕಾರ್ಯರೂಪವಾದ ವಿದ್ಯಾ-ಕಲಾ-ಪಶು ಎಂಬ ಈ ಮೂರೂ ಪತಿಯಲ್ಲಿಯೇ ಇವೆ.

೧) **ವಿದ್ಯೆ :–** ವಿದ್ಯೆ ಪಶುವಿನ ಗುಣ. ವಿದ್ಯೆಯೇ ಜ್ಞಾನ. ಜ್ಞಾನವು ಆಗಮ ರಹಸ್ಯಾರ್ಥಗಳನ್ನು ಬೋಧಿಸುತ್ತದೆ ; ಮತ್ತು ಮಲವನ್ನು ಕಳೆಯುವ ಉಪಾಯಗಳನ್ನು ಸೂಚಿಸುತ್ತದೆ. ಇದು ಮಿಥ್ಯಾಜ್ಞಾನಕ್ಕೆ ವಿರೋಧಿ.

ವಿದ್ಯೆಯು ಪಶುವಿನ ಉಪಾಧಿ, ಗುಣ ಹಾಗೂ ವಿಶೇಷಣವಾಗಿ ವರ್ಣಿತವಾಗಿದೆ. ಇದು ಮುಖ್ಯವಾಗಿ– ೧) ಬೋಧಸ್ವಭಾವ ೨) ಅಬೋಧಸ್ವಭಾವ ಎಂದು ಎರಡು ವಿಧ. ಬೋಧಸ್ವಭಾವವು ೧) ವಿವೇಕ ಪ್ರವೃತ್ತಿ ೨) ಸಾಮಾನ್ಯ (ಅವಿವೇಕ) ಪ್ರವೃತ್ತಿ ಎಂದು ಇಬ್ಬಗೆ. ಅಬೋಧಸ್ವಭಾವವು ೧) ಧರ್ಮ ೨) ಅಧರ್ಮ ೩) ಸಂಸ್ಕಾರ ಎಂದು ಮೂರು ವಿಧ. ವಿದ್ಯೆಯ ಈ ವಿಭಾಗಗಳು ಬೇರೆ ಬೇರೆ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿರುವ ಪಶುವಿನ ವಿವಿಧ ವಿದ್ಯಾ-ರೂಪ-ಗುಣ-ಕರ್ಮಗಳನ್ನು ಸೂಚಿಸುತ್ತವೆ. ಧಾರ್ಮಿಕ-ಪರಿಸ್ಥಿತಿಯಲ್ಲಿ ಇದು ಗುರೂಪದೇಶವನ್ನು ಶ್ರದ್ಧೆಯಿಂದ ಕೇಳುವ ಸಾಧಕನಿಗೆ ಹೊಳೆದು ವಿವೇಕವೆನಿಸುತ್ತದೆ.

ಚಿತ್-ಸ್ವರೂಪವಾದ ವಿದ್ಯೆ ಸ್ವಪ್ರಕಾಶ. ಕೆಲವುಸಲ ಮಾತ್ರ ಇದು ಪರಪ್ರಕಾಶಕ. ವಿಷಯವನ್ನು ಪ್ರವೇಶಿಸಿದಾಗ ಇದು ಬೋಧಸ್ವಭಾವ ಎನಿಸುತ್ತದೆ. ವಿಷಯವನ್ನು ಪ್ರಕಾಶಮಾಡದೆ ಇರುವಾಗ ಅಬೋಧಸ್ವಭಾವ. ಪುರುಷನು ಸ್ವಪ್ರಕಾಶವಾದ ಧರ್ಮಾಧರ್ಮಗಳನ್ನು ತನ್ನಂತೆಯೇ ಬಗೆಯುತ್ತಾನೆ.

ಅಬೋಧಸ್ವಭಾವವಿದ್ಯೆಯ ಮೂರನೇ ವಿಭಾಗವೇ ಸಂಸ್ಕಾರ. ಲಕುಲೀಶನ ಜ್ಞಾನ-ಮೀಮಾಂಸೆಯು ಈ ಸಂಸ್ಕಾರವನ್ನು ಆಶ್ರಯಿಸಿದೆ.

ಬೋಧಸ್ವಭಾವವಿದ್ಯೆಯ ವಿವೇಕಪ್ರವೃತ್ತಿಯನ್ನು ಈ ಹಿಂದೆ ವಿವರಿಸಲಾಯಿತು. ಈಗ ಸಾಮಾನ್ಯ (ಅವಿವೇಕ) ಪ್ರವೃತ್ತಿಯನ್ನು ಕುರಿತು ವಿಚಾರ ಮಾಡೋಣ. ಇಲ್ಲಿ ಅವಿವೇಕ

(ಸಾಮಾನ್ಯ) ಪ್ರವೃತ್ತಿಯೇ ಚಿತ್ತ. ಚಿತ್ತವು ವೇದಾಂತಿಗಳು ಹೇಳುವಂತೆ ಅಂತಃಕರಣಗಳಲ್ಲಿ ಒಂದಲ್ಲ ; ಇದು ಪುರುಷನ ಗುಣವೂ ಬೋಧರೂಪವೂ ಆದ ವಿದ್ಯೆಯ ವ್ಯಾಪಾರ. ವಿದ್ಯೆ ಸ್ವಪ್ರಕಾಶ ಮತ್ತು ಪರಪ್ರಕಾಶರೂಪ. ಇದು ವಿಷಯವನ್ನು ದೀಪದಂತೆ ಪ್ರಕಾಶಗೊಳಿಸುತ್ತದೆ. ವಿಷಯ ಪ್ರಕಾಶವಾದರೆ ಅಂತಃಕರಣ-ಬಹಿಃಕರಣಗಳು ಕ್ರಿಯೆಯಲ್ಲಿ ತೊಡಗಿ ಪ್ರತ್ಯಕ್ಷಜ್ಞಾನವುಂಟಾಗುತ್ತದೆ. ಪ್ರತ್ಯಕ್ಷವು ಸವಿಕಲ್ಪ ಮತ್ತು ನಿರ್ವಿಕಲ್ಪ ಎಂದು ಎರಡು ವಿಧ.

ಪ್ರಮಾಣತ್ರಯ :– ಲಕುಲೀಶಪಾಶುಪತವು ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂದು ಮೂರು ಪ್ರಮಾಣಗಳನ್ನು ಒಪ್ಪಿದೆ. ಇನ್ನುಳಿದ ಅರ್ಥಾಪತ್ತಿ, ಸಂಭವ ಐತಿಹ್ಯ ಮತ್ತು ಅಭಾವಗಳು ಇವುಗಳಲ್ಲಿಯೇ ಅಂತರ್ಭಾವ.

೨) ಕಾರ್ಯದಲ್ಲಿ ಅಂತರ್ಗತವಾಗಿರುವ ಎರಡನೆಯ ಮುಖ್ಯ ತತ್ತ್ವ ಕಲೆ. ಇದು ಜಡ. ಇದಕ್ಕೂ ಸಾಂಖ್ಯರ ಪ್ರಧಾನಕ್ಕೂ (ಪ್ರಕೃತಿ) ತುಂಬಾ ಸಾಮ್ಯವಿದೆ. ಇದರಲ್ಲಿ ಸಾಂಖ್ಯರ ಮಹತ್ತು ಮುಂತಾದ ಇಪ್ಪತ್ತು ತತ್ತ್ವಗಳೂ ಸೇರಿವೆ. ಇದು ಪರಿಮಿತಪ್ರಮಾತೃವಿನ ಮಾನಸಶರೀರಕ್ಕೆ ಉಪಾಧಿ. ಇದು ಸ್ವಯಂ ಅಚೇತನ ; ಆದರೂ ಚೇತನವನ್ನು ಆಶ್ರಯಿಸಿದೆ.

ಕಲೆಯೂ ಕಾರಣ ಮತ್ತು ಕಾರ್ಯ ಎಂದು ಇಬ್ಬಗೆ; ಕಾರಣದಲ್ಲಿ ಪಂಚಜ್ಞಾನೇಂದ್ರಿಯ ಮತ್ತು ಪಂಚ-ಕರ್ಮೇಂದ್ರಿಯ ಮತ್ತು ಮೂರು ಅಂತಃಕರಣಗಳೂ ಅಂತರ್ಭಾವ ಹೊಂದಿವೆ. ಕಾರ್ಯದಲ್ಲಿ ಪಂಚಭೂತಗಳು ಪಂಚತನ್ಮಾತ್ರಗಳು ಸೇರ್ಪಡೆಯಾಗಿವೆ.

೩) ಪಶು– ಚೇತನ ಪ್ರಮಾತೃವೇ ಪಶು. ಈತ ಕಾರ್ಯದಲ್ಲಿನ ಮೂರನೆಯ ಪದಾರ್ಥ. ಪಶುವಿನ ವಿಶಿಷ್ಟಸತ್ತೆಯು ಈಶ್ವರಕೃತವಾದ್ದರಿಂದ ಕಾರ್ಯದಲ್ಲಿಯೇ ಸೇರುತ್ತದೆ. ಸಿದ್ಧೇಶ್ವರನ ಹೊರತು ಎಲ್ಲ ಚೇತನ ಪ್ರಮಾತೃವೂ ಪಶುವೇ. ಅನಾದಿಪಾಶಬದ್ಧನಾದ ಇವನು ಕಲೆ ಮತ್ತು ಅದರಲ್ಲಿ ಅಂತರ್ಗತವಾಗಿರುವ ಇಪ್ಪತ್ತಮೂರು ತತ್ತ್ವಗಳಿಂದ ಕೂಡಿರುವುದರಿಂದ ಪರಿಮಿತ, ಕಿಂಚಿಜ್ಞ, ಕಿಂಚಿತ್ಕರ್ತೃ; ಸರ್ವಶಕ್ತ. ಈತನು ಸಾಂಸಾರಿಕಾವಸ್ಥೆಯಲ್ಲಿ ಪತಿಗಿಂತ ಬೇರೆ. ಮೋಕ್ಷದಲ್ಲಿ ಈ ಭೇದ ಇರುವುದಿಲ್ಲ.

ಪಶುವು ಸಾಂಜನ ಮತ್ತು ನಿರಂಜನ ಎಂದು ಇಬ್ಬಗೆ. ಶರೀರ ಮತ್ತು ಇಂದ್ರಿಯಸಂಬಂಧವುಳ್ಳದ್ದು ಸಾಂಜನ. ಅದು ಎಂಟು ಬಗೆಯ ದೈವ, ಐದು ಬಗೆಯ ತಿರ್ಯಗ್ಯೋನಿ ಮತ್ತು ಮಾನುಷ್ಯವೂ ಸೇರಿ ಒಟ್ಟು ಹದಿನಾಲ್ಕು ಬಗೆ.[1]

ನಿರಂಜನವು ಶರೀರ-ಇಂದ್ರಿಯಸಂಬಂಧವಿಲ್ಲದ್ದು. ಅದು ಸಂಹೃತ-ಕೈವಲ್ಯಗತ-ನಿಷ್ಠಾ-ಯೋಗಯುಕ್ತ ಎಂದು ಮೂರು ಬಗೆ. ೧) ಪ್ರಳಯ ಕಾಲದಲ್ಲಿಯೂ ಪಶುವಾಗಿರುವವನು ಸಂಹೃತ. ೨) ಪ್ರಕೃತಿವಿಯುಕ್ತನಾದ ಪುರುಷ ಕೈವಲ್ಯಗತ. ೩) ಶಿವಸಾಯುಜ್ಯದಲ್ಲಿ ಸರ್ವಜ್ಞತ್ವ ಮುಂತಾದುವನ್ನು ಅಳವಟ್ಟವನು ನಿಷ್ಠಾಯೋಗಯುಕ್ತ.

---

[1] ದೈವಮಷ್ಟವಿಧಂ ಪ್ರೋಕ್ತಂ ತೈರ್ಯಗ್ಯೋನಂ ತು ಪಂಚಧಾ ।
ಸರ್ವಮೇಕಂ ತು ಮಾನುಷ್ಯಮೇತತ್ಸಂಸಾರಮಂಡಲಮ್ ॥

**ಮಲಸ್ವರೂಪ**

ಮಲಗಳು ಮಿಥ್ಯಾಜ್ಞಾನ, ಅಧರ್ಮ, ಸಕ್ತಿಹೇತು, ಚ್ಯುತಿ, ಪಶುತ್ವಮೂಲ ಎಂದು ಐದು ವಿಧ.

೧) ತಪ್ಪು ತಿಳುವಳಿಕೆಯೇ ಮಿಥ್ಯಾಜ್ಞಾನ. ಮನಸ್ಸಿನ ಕಲುಷತೆಯೇ ಇದು. ಕಾಮ-ಕ್ರೋಧ ಮುಂತಾದ ಅಂತಃಶತ್ರುಗಳು ಇದರಲ್ಲಿ ಸೇರುತ್ತವೆ.

೨) ಮಾಡಬಾರದ ಕೆಲಸ ಮಾಡುವುದು ಮತ್ತು ಅದರಿಂದ ದೊರೆಯುವ ಫಲ– ಇವುಗಳು ಅಧರ್ಮ.

೩) ವಿಷಯಗಳಲ್ಲಿನ ಆಸಕ್ತಿಯೇ ಸಕ್ತಿಹೇತು.

೪) ರುದ್ರಧ್ಯಾನವನ್ನು ಕೆಡಿಸುವುದು ಚ್ಯುತಿ.

೫) ಪಶುತ್ವಮೂಲ– ಪಶುಪತಿಯಿಂದ ಬೇರ್ಪಡುವುದಕ್ಕೆ ಕಾರಣ. ಎಲ್ಲ ಮಲಗಳಿಗಿಂತ ಪ್ರಧಾನವಾದ್ದರಿಂದ ಪಶುತ್ವಮೂಲ ಎಂಬ ಹೆಸರು ಇದಕ್ಕೆ ಸಾರ್ಥಕ.

**ಮಲವನ್ನು ಕಳೆವ ಉಪಾಯಗಳು**

ಮೇಲೆ ಹೇಳಿದ ಮಲಗಳನ್ನು ತೊಳೆಯುವ ಉಪಾಯಗಳು ಐದು ಬಗೆ.[1] ಅವು ಕ್ರಮವಾಗಿ ವಾಸ, ಚರ್ಯಾ, ಜಪಧ್ಯಾನ, ಸದಾರುದ್ರಸ್ಮೃತಿ, ಪ್ರಸಾದ ಎಂದು.

ಅ) ವಾಸ– ಈ ದರ್ಶನದಲ್ಲಿ 'ವಾಸ' ಎಂಬುದು ಪಾರಿಭಾಷಿಕಪದ. ಗುರು ಒಮ್ಮೆ ಉಚ್ಚರಿಸಿದ ವಾಕ್ಯದ ಸಂಪೂರ್ಣಾರ್ಥವನ್ನು ಗ್ರಹಿಸುವ ಸಾಮರ್ಥ್ಯ; ಗ್ರಹಿಸಿದುದನ್ನು ನೆನಪಿಡುವ ಶಕ್ತಿ ; ಅದರಲ್ಲಿ ಯುಕ್ತವಾದುದನ್ನು ಸ್ವೀಕರಿಸಿ ಆಚರಿಸುವುದು, ಅಯುಕ್ತವಾದುದನ್ನು ಬಿಡುವುದು, ಒಳ್ಳೆಯ ನಡೆ ನುಡಿಗಳಿಂದ ಗುರುವನ್ನು ತೃಪ್ತಿಪಡಿಸುವಿಕೆ, ಗುರುಸೇವೆ, ಗುರುವಚನ ಪರಿಪಾಲನೆ ಇವುಗಳೆಲ್ಲವೂ 'ವಾಸ' ಎನಿಸುತ್ತದೆ.

ಆ) ಚರ್ಯೆ– ಇದು ೧) ದಾನ ೨) ಯಾಗ ೩) ತಾಪ ಎಂದು ಮೂರು ಬಗೆ. ೧) ಹತ್ತುನಮಸ್ಕಾರಗಳಿಂದ ತನ್ನನ್ನು ಪರಮೇಶ್ವರನಿಗೆ ಸಮರ್ಪಿಸಿಕೊಳ್ಳುವುದು ದಾನ. ೨) ವಿಧ್ಯುಕ್ತವಾಗಿ ಭಸ್ಮಸ್ನಾನಾದಿಕ್ರಿಯೆಗಳನ್ನು ಮಾಡುವುದು ಯಾಗ. ೩) ವಿಧಿಪೂರ್ವಕವಾಗಿ ಅನುಷ್ಠಾನ ಮಾಡುವಾಗ ಬರುವ ಅನಿವಾರ್ಯವಾದ ತಾಪತ್ರಯಗಳನ್ನು ಸಹಿಸುವುದು ತಾಪ.

---

[1] ವಾಸಶ್ಚರ್ಯಾ ಜಪಧ್ಯಾನಂ ಸದಾ ರುದ್ರಸ್ಮೃತಿಸ್ತಥಾ ।
ಪ್ರಸಾದಶ್ಚೈವ ಲಾಭಾನಾಮುಪಾಯಾಃ ಪಂಚ ನಿಶ್ಚಿತಾಃ ॥

[ಗಣಕಾರಿಕಾ. ಪು ೭]

ಚರ್ಯೆಯು ಮತ್ತೆ ೧) ವೃತ್ತ, ೨) ದ್ವಾರ ಎಂದು ಎರಡು ಬಗೆಯಾಗಿದೆ. ೧) ವೃತ್ತ ಎಂದರೆ ದೈನಂದಿನ ಆಚರಣೆ. ಅದು ೧) ಭಸ್ಮಸ್ನಾನ, ೨) ಭಸ್ಮಶಯನ, ೩) ಮಂದಿರದಲ್ಲಿ ಅಭಿನಯದ ಮೂಲಕ ಶಿವತಾದಾತ್ಮ್ಯವನ್ನು ಅನುಸಂಧಾನಮಾಡುವುದು, ೪) ಮನಸ್ಸನ್ನು ಕೇಂದ್ರೀಕರಿಸುವ ಜಪ, ೫) ಮೂರ್ತಿ ಪ್ರದಕ್ಷಿಣೆ ಎಂದು ಐದು ವಿಧ.

೨) ದ್ವಾರ– ಕ್ರಾಥನ, ಸ್ಪಂದನ, ಮಂಡನ, ಶೃಂಗಾರಣ, ಅಪಿತತ್ಕರಣ, ಅಪಿತದ್ಭಾಷಣ ಎಂದು ಅನೇಕ ವಿಧ. ಇವುಗಳ ವಿವರಣವನ್ನು ಯೋಗ ಎಂಬ ಮೂರನೆಯ ವಿಭಾಗದಲ್ಲಿ ಕೊಡಲಾಗುತ್ತದೆ.

೩) **ಜಪಧ್ಯಾನ–** ಚರ್ಯೆ ಶಾರೀರಕ ಕ್ರಿಯೆ. ಜಪಧ್ಯಾನವು ಮಾನಸಿಕ ಕ್ರಿಯೆ. ಆದ್ದರಿಂದ ಇವೆರಡಕ್ಕೆ ಬಹಳ ಸಂಬಂಧವಿದೆ. ಮಂತ್ರಪುರಶ್ಚರಣವೇ ಜಪ. ಅದು ಪ್ರತ್ಯಾಹಾರಫಲ ಮತ್ತು ಸಮಾಧಿ ಫಲ ಎಂದು ಎರಡು ಬಗೆ. ಪ್ರತ್ಯಾಹಾರಫಲವೂ ಕೂಡ ಅಪರ ಮತ್ತು ಪರ ಎಂದು ಇಬ್ಬಗೆ. ೧) ಮನಸ್ಸನ್ನು ಬಾಹ್ಯವಿಷಯಗಳಿಂದ ಹಿಂದಿರುಗಿಸಿ ಧ್ಯೇಯ ವಸ್ತುವಿನಲ್ಲಿ ಕೇಂದ್ರೀಕರಿಸುವುದು ಅಪರ-ಪ್ರತ್ಯಾಹಾರ. ೨) ನಿರ್ಮಲಚಿತ್ತವು ಪ್ರಯತ್ನವಿಲ್ಲದೆಯೇ ಬ್ರಹ್ಮನಲ್ಲಿ ನೆಲೆಸುವಿಕೆ ಪರಪ್ರತ್ಯಾಹಾರ. ಇದರಿಂದ ಅನೇಕ ಜನ್ಮಗಳಲ್ಲಿ ಮಾಡಿದ ಕರ್ಮವು ನಷ್ಟವಾಗುವುದು.

ಧ್ಯಾನವೆಂದರೆ– ರುದ್ರತತ್ತ್ವದಲ್ಲಿ ಸದೃಶಚಿಂತಾಪ್ರವಾಹ. ಅದು ಜಪಪೂರ್ವಕ ಮತ್ತು ಧ್ಯಾನಪೂರ್ವಕ ಎಂದು ಎರಡು ವಿಧ ೧) ಜಪಪೂರ್ವಕವಾದ ಧ್ಯಾನವು ಸವಿಷಯಕ. ೨) ಪ್ರಮಾತೃವಿನ ಚಿತ್ತವು ನಿರಾಲಂಬಸ್ಥಿತಿಯಲ್ಲಿ ವಿಷಯಸಂಸರ್ಗವಿಲ್ಲದ ಅವಸ್ಥೆ ಪಡೆವುದು ಧ್ಯಾನಪೂರ್ವಕ. ಇದೆಲ್ಲವೂ ಪ್ರತ್ಯಾಹಾರ ಫಲ.

ಸಮಾಧಿಫಲ ಎಂಬುದು ಅಂತಿಮಸ್ಥಿತಿ.

ಈ) **ಸದಾ ರುದ್ರಸ್ಮೃತಿ–** ನಿರಂತರವೂ ರುದ್ರ ಸ್ಮರಣ. ಮನಸ್ಸು ಇತರವಿಷಯಗಳ ಕಡೆ ಹೋಗದಂತೆ ಇದು ತಡೆಯುತ್ತದೆ.

೫) **ಪ್ರಸಾದ–** ಪತಿಯು ಸಾಧಕನಿಗೆ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವಗಳನ್ನು ಅನುಗ್ರಹಿಸುವಿಕೆ. ಇದು ಸಿದ್ಧಿ ಅಥವಾ ಮುಕ್ತಿಪಡೆಯುವ ಮುಖ್ಯ ಉಪಾಯ.

**ಪಂಚ ದೇಶಗಳು :–** ಮುಮುಕ್ಷುವು ಸಿದ್ಧಿಪಡೆಯಬೇಕಾದರೆ ಈ ಐದು ಪ್ರದೇಶಗಳಲ್ಲಿ ತನ್ನ ಸಾಧನೆಯನ್ನು ಮುಂದುವರಿಸಬೇಕು. ಅವು– ಶಿವಮಂದಿರ, ಶಿವಭಕ್ತರು ಇರುವ ಸ್ಥಾನ, ಗುಹೆ, ಶ್ಮಶಾನ ಮತ್ತು ರುದ್ರಸನ್ನಿಧಿ.

**ಪಂಚ ಅವಸ್ಥೆಗಳು :–** ಮೇಲೆ ಹೇಳಿದ ಸ್ಥಳಗಳಲ್ಲಿ ಕುಳಿತು, ಅನುಷ್ಠಾನ ಮಾಡುವುದರಿಂದ ವ್ಯಕ್ತ, ಅವ್ಯಕ್ತ, ಜಯ, ಛೇದ ಮತ್ತು ನಿಷ್ಠೆ ಎಂಬ ಅವಸ್ಥೆಗಳು ಸಿದ್ಧಿಸುತ್ತವೆ.

**೩. ಯೋಗ :–** ಯೋಗವು ಮೂರನೆಯ ಮುಖ್ಯತತ್ತ್ವ. ಇಲ್ಲಿಯ ಯೋಗವು ಪಾತಂಜಲರು ಹೇಳುವ ಚಿತ್ತವೃತ್ತಿನಿರೋಧರೂಪವಲ್ಲ. ಅದು ಮುಖ್ಯವಾಗಿ ಆತ್ಮ ಮತ್ತು ಈಶ್ವರಸಂಯೋಗರೂಪ. "ಆತ್ಮೇಶ್ವರಸಂಯೋಗೋ ಯೋಗಃ" (ಪಾ. ಸೂ. ಟೀ. ೨೪) "ಚಿತ್ತ-

ದ್ವಾರೇಣೇಶ್ವರಸಂಬಂಧಃ ಪುರುಷಸ್ಯ ಯೋಗಃ" (ಗ. ಕಾ. ೧೪) ಎಂಬ ಉಕ್ತಿಗಳು ಇದನ್ನು ಸಮರ್ಥಿಸುತ್ತವೆ. ಪಾತಂಜಲದ ಯೋಗವು ಕೇವಲ ಉಪಾಯ ; ಇಲ್ಲಿಯ ಯೋಗ ಉಪೇಯ. (ಹೋದ ಜೇಕಾದದ್ದು)

ಆತ್ಮ ಮತ್ತು ಈಶ್ವರ ಸಂಯೋಗವು ಹಕ್ಕಿಯು ಮರದ ಹತ್ತಿರ ಹೋಗುವಂತೆ ; ಇದು ಪಾತಂಜಲಯೋಗದ ಸ್ವರೂಪ. ಲಾಕುಳರ ಯೋಗಕ್ಕೆ ಜೀವ ಈಶ್ವರರಿಬ್ಬರ ಕ್ರಿಯೆಯೂ ಅಗತ್ಯ ; ಅದು ಎರಡು ಟಗರುಗಳು ಜಗಳಕ್ಕೆ ನಿಂತ ಹಾಗೆ. ಏಕೆಂದರೆ ಈಶ್ವರಾನುಗ್ರಹವಿಲ್ಲದೆ ಮುಕ್ತಿ ದೊರೆವುದಿಲ್ಲ : ಎಂಬುದು ಲಾಕುಳ-ಪಾಶುಪತಸಿದ್ಧಾಂತ.

ಈ ಮತದಲ್ಲಿ ಜೀವನು ವಿಭು. ಇವನಿಗೆ ಸದಾ ಈಶ್ವರ ಸಂಯೋಗವಿದ್ದೇ ಇದೆ. ಆದರೂ ಅನಾದಿಪಶುತ್ವಮಲದಿಂದ ಜ್ಞಾನ-ಕ್ರಿಯಾಶಕ್ತಿಗಳ ಸಂಕೋಚವುಂಟಾಗಿ ಈಶ್ವರನಿಂದ ಜೀವನಿಗೆ ವಿಯೋಗವಾಗಿದೆ. ಯೋಗದಿಂದ ಮಲನಷ್ಟವಾಗಬೇಕಾದರೆ ಪಾಶುಪತದಲ್ಲಿನ ವಿಧಿಯ ಆಚರಣೆ ಅಗತ್ಯ.

ಯೋಗವು ಎರಡು ವಿಧ. ಕ್ರಿಯೆ ಮತ್ತು ಕ್ರಿಯೋಪರಮ ಎಂದು. ಶಾರೀರಕ ಕ್ರಿಯೆಯಿಂದ ಮಾನಸಕ್ರಿಯೆ ಸಿದ್ಧಿಸುವುದರಿಂದ ಕ್ರಿಯಾ ಎಂದು ಹೆಸರು. ಲಕುಲೀಶ-ಪಾಶುಪತವು ಆಂಗಿಕ-ವಾಚಿಕ-ಆಹಾರ್ಯ ಮತ್ತು ಸಾತ್ವಿಕ ಎಂಬ ನಾಲ್ಕು ಬಗೆಯ ಅಭಿನಯಗಳನ್ನೂ ನೃತ್ಯ-ಗೀತಗಳನ್ನೂ ಶಿವಸಾಯುಜ್ಯಪ್ರಾಪ್ತಿಗೆ ಉಪಾಯಗಳೆಂದು ಒಪ್ಪಿದೆ. ಇವು ನಾಟಕದಲ್ಲಿ ಬರುವ ಆರಂಭ ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಫಲಾಗಮ ಎಂಬ ಪಂಚಕಾರ್ಯಾವಸ್ಥೆಗಳನ್ನು ಹೋಲುತ್ತವೆ.

**ಮೊದಲನೆಯ ಅವಸ್ಥೆ :–** ಪಾಶುಪತವಿಧಿಯಂತೆ ಅನುಷ್ಠಾನ ಮಾಡುವುದರಿಂದ ಕಾಮ ಕ್ರೋಧ ಮುಂತಾದವುಗಳು ಅಳಿದು ತತ್ತ್ವಜ್ಞಾನ ಮೂಡುವುದು. ಆಗ ಅವನು ತನ್ನಲ್ಲಿರುವ ಕಲಂಕ ಕಳೆದಿದೆಯೊ ಇಲ್ಲವೊ ಎಂದು ಪರೀಕ್ಷಿಸಲು ಮುಂದಿನ ಅಭಿನಯಗಳನ್ನು ಕೈಗೊಳ್ಳುತ್ತಾನೆ. "ಅನೇನ ವಿಧಿನಾ ರುದ್ರಸಮೀಪಂ ಗತ್ವಾ" (ಪಾ. ಸೂ. ೧೦೬) ಎಂಬ ಸೂತ್ರವು ಈ ಕ್ರಮವನ್ನು ಹೇಳಿದೆ. ಹಿಂದೆ ಚರ್ಯಾವಿಭಾಗವೆನಿಸಿದ ದ್ವಾರದಲ್ಲಿ ಹೇಳಿರುವ ಕ್ರಾಥನಾದಿಗಳೇ ಆ ವಿಧಿಗಳು.

೧) ದರಿದ್ರಪುರುಷನು ಸ್ನಾನ ಮಾಡಿದ ಕೊಳೆ ನೀರನ್ನು ಸುರಿದುಕೊಳ್ಳುವುದು, ಗಡ್ಡ ಮೀಸೆ ಕೂದಲನ್ನು ಸಂಸ್ಕರಿಸದಿರುವುದು ಜನರ ದೃಷ್ಟಿಗೆ ಬೀಳುವಂತೆ ನಿದ್ರಿಸುವ ನಟನೆ ಇವುಗಳೇ **ಕ್ರಾಥನ.**

೨) ಭೂತ ಹಿಡಿದವನಂತೆ ನಟಿಸುವುದು **ಸ್ಪಂದನ.**

೩) ಕೈಕಾಲು ಬಿದ್ದವನಂತೆ ನಟಿಸುವುದು **ಮಂಟನ.**

೪) ರೂಪಯೌವನಸಂಪನ್ನೆಯನ್ನು ಕಂಡು ಕಾಮಿಸಿದವನಂತೆ ನಟಿಸುವುದು **ಶೃಂಗಾರಣ.**

೫) ಶುಚಿ-ಅಶುಚಿ; ಕಾರ್ಯ-ಅಕಾರ್ಯ ಇವುಗಳ ಅಂತರವನ್ನೇ ಅರಿಯನೆಂಬಂತೆ ನಟಿಸುವುದು **ಅಪಿತತ್ಕರಣ.**

೬) ಬಾಯಿಗೆ ಬಂದಂತೆ ಹರಟುವ ನಟನೆ ಅಪಿತದ್ಭಾಷಣ.

ಇವುಗಳಿಂದ ಅಪಹಾಸ್ಯಕ್ಕೆ ಗುರಿಯಾಗುವಂತೆ ನಡೆಯುವುದು– ಇದೆಲ್ಲವೂ ಸುಖ ದುಃಖ, ಮಾನ-ಅಪಮಾನಾದಿಗಳಿಂದ ಮನಃಕ್ಲೇಶವಾಗದಂತೆ ಪರೀಕ್ಷಿಸಿಕೊಳ್ಳುವುದಕ್ಕಾಗಿ. ಈ ಸಂದರ್ಭ ದಲ್ಲಿ ಲಕುಲೀಶನು– 'ಹಿಂದೆ ದೇವೇಂದ್ರನು ಪಾಶುಪತಾಚರಣವನ್ನು ಮಾಡಿ ಅಸುರರ ಪುಣ್ಯವನ್ನು ಅಪಹರಿಸಿ ತನ್ನ ಪಾಪವನ್ನು ಅವರಿಗೆ ಕೊಟ್ಟನು.' ಎಂಬ ಕತೆಯನ್ನು ಉದಾಹರಿಸಿದ್ದಾನೆ. (ಪಾ. ಸೂ. ೧೦೧–೧೦೩)

**ಎರಡನೆಯ ಅವಸ್ಥೆ :**– ಸಾಧಕನು 'ವಾಮದೇವಾಯ ನಮಃ' ಎಂಬ ಮಂತ್ರವನ್ನು ಜಪಿಸುತ್ತಾ ಪತಿಯ ಸಮೀಪವನ್ನು ಹೊಂದುವನು. ಇದೇ ಹಿಂದೆ ಹೇಳಿದ ಶಾರೀರಕಕ್ರಿಯಾಸಹಿತ ಮಾನಸ-ಕ್ರಿಯೆಯಿಂದ ಹೊಂದುವ ಪ್ರಥಮಯೋಗ. ಇದೇ 'ಕ್ರಿಯಾ' ಎಂಬ ಯೋಗದ ಒಂದು ವಿಭಾಗ.

**"ಕ್ರಿಯೋಪರಮ" :**– ಇದು ಯೋಗದ ಎರಡನೆಯ ವಿಭಾಗ ಇದು ಯಾವ ಶಾರೀರಕ ಕ್ರಿಯೆಯನ್ನೂ ಅಪೇಕ್ಷಿಸುವುದಿಲ್ಲ. ಇದು ಕೇವಲ ಮಾನಸಿಕ ನಿಯೋಗ-ಸಾಧ್ಯ. ಮುಂದೆ ಹೇಳುವ ಮೂರು ಅವಸ್ಥೆಗಳೂ ಇದರಲ್ಲಿ ಸೇರುತ್ತವೆ.

**ಮೂರನೆಯ ಅವಸ್ಥೆ :**– ಸಂಸಾರದ ಎಲ್ಲ ಜಂಜಡವನ್ನೂ ದೂರಮಾಡಿದ ವಿರಕ್ತ-ಸಾಧಕ 'ಗುಹೆ'ಯನ್ನು ಸೇರಿ "ಅಘೋರೇಭ್ಯಃ" ಎಂಬ ಮಂತ್ರೋಕ್ತವಾದ ಶಿವರೂಪಧ್ಯಾನಮಾಡುವುದರಿಂದ ಆರಂಭವಾಗುತ್ತದೆ ಈ ಅವಸ್ಥೆಯಲ್ಲಿ 'ಜಪ-ಧ್ಯಾನ'ವೆಂಬ ಗುಲಕ್ಷಣ-ಉದಾಯವು ಉಕ್ತವಾಗಿದೆ. [1] ಜಪ-ಧ್ಯಾನಗಳಿಂದ ಸಾಧಕನ ಮನಸ್ಸು ಧ್ಯೇಯವನ್ನು ಹೊಂದುವನ್ನಿ ಆಸಕ್ತವಾದರೂ ಅದು ವಿಷಯಾಂತರಗಳ ಕಡೆ ಹೋಗದೆ ಮತ್ತೆ ಧ್ಯೇಯಕ್ಕೇ ಹಿಂದಿರುಗುತ್ತದೆ. ಆದರಿಂದ ವಿಷಯಾಂತರಸಂಪರ್ಕವಿಲ್ಲದ ಧ್ಯೇಯವನ್ನು ಮಾತ್ರ ವಿಷಯೀಕರಿಸಿದ ಸಾಧಕನ ಮನಸ್ಸು ಅವಿಚ್ಛಿನ್ನವಾಗಿ ಬ್ರಹ್ಮದಲ್ಲಿದ್ದಂತೆ ತೋರುತ್ತದೆ. ವೇಗವಾಗಿ ತಿರುಗಿಸುವ ಕೊಳ್ಳಿಯು ಚಕ್ರದಂತೆ ಕಾಣುವಂತೆ, [2]

**ನಾಲ್ಕನೆಯ ಅವಸ್ಥೆ :**– ಇದು ಶ್ಮಶಾನದಲ್ಲಿ ವಾಸಿಸುವ ಸಾಧಕನ ಧಾರಣಪೂರ್ವಕ 'ತತ್ಪುರುಷ'ಮಂತ್ರೋಕ್ತಬ್ರಹ್ಮಧ್ಯಾನದಿಂದ ಆರಂಭವಾಗುತ್ತದೆ. ಇಲ್ಲಿ ಧ್ಯಾನ-ಧ್ಯಾತೃತ್ವಗಳು ಒಂದಾಗುತ್ತವೆ. ಸಂಸಾರದೆಶೆಯಾಗಲಿ ಮೂರ್ಛಾವಸ್ಥೆಯಾಗಲಿ ಪ್ರಮಾತೃವಿನ ಮನಸ್ಸು ವಿಷಯ ಸಂಸರ್ಗವನ್ನು ಬಿಡುವುದೇ ಧಾರಣ. [3] ಈ ಅವಸ್ಥೆಯಲ್ಲಿ ಯತಿಯು ತನ್ನ ಪಾತ್ರೆಗೆ ಬಿದ್ದ ಎಮ್ಮೆ ಹಂದಿ ಇತ್ಯಾದಿಗಳ ಮಾಂಸವನ್ನಾದರೂ ತಿನ್ನುತ್ತಾನೆ. ಇವನಿಗೆ "ಮಾಂಸಮದುಷ್ಟಂ" (ಪಾ. ಸೂ. ಪು. ೧೧೯) ಎಂಬುದು ಸಮ್ಮತ.

---

[1] "ತೃತೀಯಚತುರ್ಥಕಸ್ಯ ಮಂತ್ರಸ್ಯಾವರ್ತನಂ ಜಪಃ" (ಗ. ಕಾ. ಟೀ. ೧೯)
"ರುದ್ರೇ ಸದೃಶಚಿಂತಾಪ್ರವಾಹೋ ಧ್ಯಾನಮ್" (ಗ. ಕಾ. ಟೀ. ೨೦)

[2] "ಬ್ರಹ್ಮಣ್ಯೇವ ಅಲಾತಚಕ್ರವದವತಿಷ್ಠತೇ" (ಗ. ಕಾ. ಟೀ. ಪು. ೨೦)

[3] ನಿರಾಲಂಬನಂ ಚಿತ್ತಮಮೂಢಸ್ಯ ಧಾರಣಮ್ (ಗ. ಕಾ. ಪು. ೨೦)

**ಐದನೆಯ ಅವಸ್ಥೆ** :– ಇದೇ ಕಡೆಯ ಅವಸ್ಥೆ. ಇದಕ್ಕೆ ಸಾಯುಜ್ಯವೆಂದು ಹೆಸರು. "ಈಶಾನಃ ಸರ್ವವಿದ್ಯಾನಾಂ" ಎಂಬ ಮಂತ್ರವನ್ನು ಅನುಷ್ಠಿಸುವುದರಿಂದ ಬ್ರಹ್ಮದಲ್ಲಿ ಸಮಾಧಿಸ್ಥಿತಿಯು ಸಿದ್ಧಿಸುತ್ತದೆ. "ಲಭತೇ ರುದ್ರಸಾಯುಜ್ಯಂ" (ಪಾ. ಸೂ. ೧೪೩) ಎಂಬಂತೆ ಇದರಲ್ಲಿ ಸರ್ವಜ್ಞತ್ವ ಮುಂತಾದ ಪತಿಶಕ್ತಿಗಳು ಪಶುವನ್ನು ಸೇರುತ್ತವೆ. ಆಗ ಪಶುವಿನಲ್ಲಿ "ಸದಾಶಿವ" ಭಾವ, (ಪಾ. ಸೂ. ೧೪೭) ಉದಿಸುತ್ತದೆ. ಆದರೆ ಈ ಸ್ಥಿತಿಯು ಶರೀರವನ್ನು ಬಿಟ್ಟಮೇಲೆಯೇ ಲಭಿಸುವುದು. ಇದಕ್ಕೆ ಸಾಧಕವಾಗಿ ಪಾತಂಜಲರು ಹೇಳುವ ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧ್ಯಾನ-ಧಾರಣ-ಸಮಾಧಿ ಎಂಬ ಅಷ್ಟಾಂಗಯೋಗದ ಅನುಷ್ಠಾನವೂ ಇವರಿಗೆ ಸಮ್ಮತ. [1]

೪. **ವಿಧಿ** :– ನಾಲ್ಕನೆಯ ಮುಖ್ಯಪದಾರ್ಥ ವಿಧಿ. ಧರ್ಮಾರ್ಥವಾದ ಸಾಧಕನ ವ್ಯಾಪಾರವೇ ವಿಧಿ. ಅದು ಪ್ರಧಾನ ಮತ್ತು ಗೌಣ ಎಂದು ಎರಡು ವಿಧ. ಮಲವನ್ನು ಕಳೆಯುವ ಉಪಾಯಗಳನ್ನು ಹೇಳುವ ಚರ್ಯೆಯಲ್ಲಿಯೇ ಇದು ಸ್ಪಷ್ಟವಾಯಿತು. ಚರ್ಯೆಗೆ ಸಾಧಕವಾದ ಭಸ್ಮಸ್ನಾನ, ನಿರ್ಮಾಲ್ಯಧಾರಣ ಮುಂತಾದವು ಗೌಣ. ಉಪಸ್ಪರ್ಶನ-ಪ್ರಾಣಾಯಾಮ-ಜಪಗಳು ಮತ್ತು ಅಹಿಂಸೆ ಮೊದಲಾದ ಹತ್ತು ಯಮಗಳೂ ಚರ್ಯೆಗೆ ಪೋಷಕಗಳಾದ್ದರಿಂದ ಅವೂ ಈ ವಿಧಿಯಲ್ಲಿಯೇ ಸೇರುತ್ತವೆ. ಭೈಕ್ಷ್ಯ-ಉತ್ಸೃಷ್ಟ-ಯಥಾಲಬ್ಧ ಎಂಬ ಮೂರು ವೃತ್ತಿಗಳೂ ಇಲ್ಲಿಯೇ ಅಂತರ್ಭಾವವಾಗುತ್ತವೆ.

ಮೊದಲ ಅವಸ್ಥೆಯವನಿಗೆ ವೃತ್ತಿ– ಭಿಕ್ಷೆ. ಎರಡನೆಯವನಿಗೆ ಉತ್ಸೃಷ್ಟ ; ಎಂದರೆ– ಉತ್ತಮ-ಜಾತಿಯವರು ಶಿವಾರ್ಪಿತಬುದ್ಧಿಯಿಂದ ನೀಡಿದ ಪವಿತ್ರ ಆಹಾರ. ಮೂರನೆಯವನಿಗೆ ಭಿಕ್ಷಾಟನವೇ ಜೀವನ. ಈತ ಪರಮಯೋಗಿಯಾದ್ದರಿಂದ ಈತನಿಗೆ ಪ್ರಾಯಶ್ಚಿತ್ತ-ನಿವೇದನ-ಪಂಚಬ್ರಹ್ಮಮಂತ್ರಜಪಗಳ ಅನುಷ್ಠಾನವಿಲ್ಲ. ನಾಲ್ಕನೆಯ ಅವಸ್ಥೆಯಲ್ಲಿ ಈತನಿಗೆ 'ಯಥಾಲಬ್ಧ' ಎಂದರೆ ದೊರೆತಷ್ಟರಿಂದಲೇ ತೃಪ್ತಿ. ಐದನೆಯ ಅವಸ್ಥೆಯಲ್ಲಿ ಶರೀರವೇ ಇಲ್ಲದ್ದರಿಂದ ಯಾವ ವೃತ್ತಿಯೂ ಇಲ್ಲ.

೫. **ದುಃಖಾಂತ** :– ತಾಪತ್ರಯಗಳ ಕಟ್ಟಕಡೆಯ ಧ್ವಂಸವೇ ದುಃಖಾಂತ. ಈ ಸ್ಥಿತಿ ಕೇವಲ ಜ್ಞಾನ-ವೈರಾಗ್ಯಗಳಿಂದ ದೊರೆತದ್ದಲ್ಲ ; ಈಶ್ವರನ ಅನುಗ್ರಹದಿಂದ ಲಭ್ಯವಾದದ್ದು. ಇದು ಅನಾತ್ಮಕ ಮತ್ತು ಸಾತ್ಮಕ ಎಂದು ಎರಡು ವಿಧ. ಕೇವಲ ದುಃಖಾಂತರೂಪವಾದದ್ದು ಅನಾತ್ಮಕ. ನ್ಯಾಯವೈಶೇಷಿಕರು ಇದನ್ನೇ 'ಮೋಕ್ಷ' ಎನ್ನುತ್ತಾರೆ. [2]

---

[1] ಅಹಿಂಸಾ ಬ್ರಹ್ಮಚರ್ಯಂ ಚ ಸತ್ಯಾಸಂವ್ಯವಹಾರಕೌ ।
ಅಸ್ತೇಯಂ ಗುರುಶುಶ್ರೂಷಾ ಶೌಚಮಾಹಾರಲಾಘವಮ್ ॥

ಅಕ್ರೋಧೋಽಪ್ರಮಾದ ಉಕ್ತಾಃ ಪಾಲ್ಯಂತ ಇತಿ ಶಂಭುನಾ ।
ದಶೈವಾ ದೇಹಪತನಾತ್ ಪಂಚಾರ್ಥೇ ಯೋಗಿನಾಂ ಯಮಾಃ ॥

(– ವಿಶುದ್ಧಮುನಿಕೃತ– ಯಮಪ್ರಕರಣ. ಶ್ಲೋ. ೩. ೪.)

[2] "ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪವರ್ಗಃ" ನ್ಯಾಯವೈಶೇಷಿಕ ಸೂತ್ರ)

ಸಾತ್ಮಕದುಃಖಾಂತವು ಕೇವಲ ತಾಪತ್ರಯಗಳ ವಿನಾಶವಲ್ಲ ; ಅದು-ಸರ್ವಜ್ಞತ್ವ-ಸರ್ವ ಕರ್ತೃತ್ವಪ್ರಾಪ್ತಿರೂಪವಾದದ್ದು.

**ಸಿದ್ಧ :**– ಸರ್ವಜ್ಞನೂ ಸರ್ವಕರ್ತೃವೂ ಆದವನೇ ಸಿದ್ಧ. ಈತ ಸ್ವತಂತ್ರ. ಈತನಿಗೆ ಸೃಷ್ಟಿ-ಸಂಹಾರಶಕ್ತಿಗಳೂ ಉಂಟು. ಈ ದರ್ಶನವಲ್ಲಿ ಬಂಧನದಿಂದ ಬಿಡಿಸಿಕೊಂಡುದು ಮಾತ್ರವೇ ಮೋಕ್ಷವಲ್ಲ ; ಆತ ಪತಿಸಾಯುಜ್ಯವನ್ನೂ ಸೇರಬೇಕು. ಇಲ್ಲಿ ಸಾಯುಜ್ಯಕ್ಕೆ ಮಹತ್ವವಿದೆ. ಏಕೆಂದರೆ– ಸಾಂಖ್ಯ-ಯೋಗ-ಬೌದ್ಧ-ವೇದಾಂತಿಗಳು ಹೇಳುವ ಮೋಕ್ಷಸ್ವರೂಪಕ್ಕೂ ಲಕುಲೀಶರ ಮೋಕ್ಷಸ್ವರೂಪಕ್ಕೂ ಈ ಅಂಶದಲ್ಲಿ ಅಂತರವುಂಟು.

ಸಾಯುಜ್ಯವನ್ನು ಹೊಂದಿದ ಆತ್ಮನಿಗೆ "ಯುಕ್ತ" ನೆಂದು ಹೆಸರು. ಪತಿಯಂತೆ ಆತ್ಮನೂ ವಿಭು. ಆದರೂ ಆತ ಸಂಸಾರದೆಶೆಯಲ್ಲಿ ಮಾನಸಿಕವಾಗಿ ಬೇರೆ ಎನ್ನಿಸಿ, ವಿಷಯಗಳ ಕಡೆ ಧಾವಿಸುತ್ತಾನೆ : ವಿಷಯಾನುಭವ ಮಾಡುತ್ತಾನೆ. ಇವನೇ ಮುಂದೆ ವಿಷಯವಿಮುಖನಾಗಿ, ಪರಿಚ್ಛೇದಗಳನ್ನು ತೊರೆದು ವಿರಕ್ತನಾಗಿ, ಇಚ್ಛಾದ್ವೇಷಾದಿಪ್ರವೃತ್ತಿಗಳಿಲ್ಲದೆ ಈಶ್ವರಸಂಯೋಗದಿಂದ ಶರೀರ ಸಂಬಂಧವಿದ್ದರೂ "ಯುಕ್ತ" ನೆನಿಸುತ್ತಾನೆ.

**ಲಕುಲೀಶ ಪಾಶುಪತದ ಭೇದಾಭೇದ ಮತ್ತು ಇತರರ ಭೇದಾಭೇದಗಳಿಗೆ ಇರುವ ವ್ಯತ್ಯಾಸ**

ಭೇದಾಭೇದವಾದವು ಶೈವಾಗಮಪರಂಪರೆಗೆ ಮಾತ್ರವೇ ಮೀಸಲಲ್ಲ ; ಅದು ವೈದಿಕ ಪರಂಪರೆಯಲ್ಲಿಯೂ ಉಂಟು. ವೈದಿಕಭೇದಾಭೇದವಾದಿಗಳಾದ 'ಅಶ್ಮರಥ್ಯ' ಮತ್ತು "ಔಡುಲೋಮಿ"ಗಳ ಮತಗಳನ್ನು ಕುರಿತು ಬಾದರಾಯಣರು ತಮ್ಮ ಬ್ರಹ್ಮಸೂತ್ರದಲ್ಲಿ ಪ್ರಸ್ತಾಪಿಸಿಯೇ ಇದ್ದಾರೆ. ಇವರು ಭೇದಾಭೇದವಾದಿಗಳೆಂಬುದು ಬ್ರಹ್ಮಸೂತ್ರವ್ಯಾಖ್ಯಾನಕಾರರ ಉಕ್ತಿಗಳಿಂದ ವೇದ್ಯವಾಗುತ್ತದೆ. ಇವರ ಅಭಿಪ್ರಾಯದಂತೆ ಜೀವ-ಬ್ರಹ್ಮರಿಗೆ ಒಂದು ಅವಸ್ಥೆಯಲ್ಲಿ ಪೃಥಕ್-ಸತ್ತೆಯೂ ಮತ್ತೊಂದು ಅವಸ್ಥೆಯಲ್ಲಿ ಐಕ್ಯವೂ ಉಕ್ತವಾಗಿದೆ. ಅಶ್ಮರಥ್ಯನ ಮತದಲ್ಲಿ ಕಾರಣರೂಪದಿಂದ ಅವರಿಬ್ಬರಿಗೆ ಅಭೇದ (ಐಕ್ಯ) ; ಕಾರ್ಯರೂಪದಿಂದ ಭೇದ. ಇದನ್ನೇ ಶಾಂಕರ ಭಾಷ್ಯವೂ (ಪು. ೩೩೩) ಮತ್ತು ವಾಚಸ್ಪತಿಮಿಶ್ರನ ಈ ಸೂತ್ರಟೀಕೆಯಲ್ಲಿ "ತಸ್ಮಾತ್ ಕಥಂ ಚಿದ್ಭೇದೋ ಜೀವಾತ್ಮನಾಮಭೇದಶ್ಚ" ಎಂಬ ಉಕ್ತಿಯಿಂದ ಸೂಚಿಸಲಾಗಿದೆ.

ಸುದರ್ಶನಸೂರಿಯ 'ಶ್ರೀಭಾಷ್ಯ' ಟೀಕೆ– ಶ್ರುತಪ್ರಕಾಶಿಕೆ. ಅದರಲ್ಲಿ ಆಶ್ಮರಥ್ಯನ ಭೇದಾಭೇದವಾದವು ರಾಮಾನುಜರ ಗುರು ಯಾದವಪ್ರಕಾಶರಿಂದ ಅಂಗೀಕೃತವಾಗಿರುವುದು ಸ್ಪಷ್ಟವಾಗಿದೆ.

ಔಡುಲೋಮಿಯು– ಸಂಸಾರದೆಶೆಯಲ್ಲಿ ಜೀವರು ಅನೇಕ ; ಬ್ರಹ್ಮ ಅಖಂಡ. ಆದುದರಿಂದ ಅವರು ಬ್ರಹ್ಮನಿಗಿಂತ ಬೇರೆ. ಮುಕ್ತಿದೆಶೆಯಲ್ಲಿ ಇವರಿಬ್ಬರಿಗೆ ಅಭೇದ ಎನ್ನುತ್ತಾನೆ. ನದೀಸಮುದ್ರ ನ್ಯಾಯದಿಂದ ಈ ಭೇದಾಭೇದವು ಸಮರ್ಥಿಸಲ್ಪಟ್ಟಿದೆ.

ಕಾಶಕೃತ್ಸ್ನನು ಭೇದಾಭೇದವಾದಿಯೆ ಅಥವಾ ಅಭೇದವಾದಿಯೆ ಎಂಬ ಬಗ್ಗೆ ಮತ ಭೇದವುಂಟು. ಶಾಂಕರಮತದಂತೆ ಆತ ಅಭೇದವಾದಿ. ನಿಂಬಾರ್ಕನ ಶಿಷ್ಯ ಶ್ರೀನಿವಾಸಾಚಾರ್ಯ.

ಆತ ತನ್ನ ವೇದಾಂತ ಕೌಸ್ತುಭದಲ್ಲಿ ಕಾಶಕೃತ್ಸ್ನನನ್ನು "ಭೇದಾಭೇದವಾದಿ" ಎಂದಿದ್ದಾನೆ. "ತದೇವಂ ಮುನಿತ್ರಯದ್ವಾರಾ ಪ್ರಸಂಗಾತ್ ಭೇದಾಭೇದಪ್ರಕಾರೋ ಭಗವತಾ ದರ್ಶಿತಃ" ಎಂಬ ಮಾತು ಈ ಅರ್ಥವನ್ನು ಸೂಚಿಸುತ್ತದೆ.

ಭರ್ತೃಪ್ರಪಂಚನು ಶಂಕರರಿಗಿಂತ ಹಿಂದೆ ಇದ್ದವನು. ಈತ ಭೇದಾಭೇದವನ್ನು ಕಾರ್ಯ-ಕಾರಣ ಗಳಿಗೆ ಇರುವ ಅವಸ್ಥಾ ಭೇದವನ್ನು ಆಶ್ರಯಿಸಿ ಸಮುದ್ರ-ತರಂಗ ನ್ಯಾಯವನ್ನು ಉದಾಹರಿಸಿ ಸಮರ್ಥಿ ಸಿದ್ಧಾನೆ. ಭರ್ತೃಪ್ರಪಂಚ ಬ್ರಹ್ಮ ಪರಿಣಾಮವಾದಿ. ಆತ ಜೀವ-ಜಗತ್ತುಗಳ ಸತ್ತೆಯು ಕಾಲ್ಪ ನಿಕವಲ್ಲ ; ಅದು ವಾಸ್ತವಿಕ. ಅದರಂತೆ ಜೀವಬ್ರಹ್ಮರ ಅಂಶಾಂಶಿಭಾವವೂ ಸಹ ವಾಸ್ತವಿಕ ಎನ್ನು ತ್ತಾನೆ.

ಶಂಕರರ ತರುವಾಯ ಬಂದವನು ಭಾಸ್ಕರ. (ಕ್ರಿ. ಶ. ೯೦೦) ಆತ ತನ್ನ ಬ್ರಹ್ಮಸೂತ್ರ ಟೀಕೆಯಲ್ಲಿ "ಭೇದಾಭೇದ"ವಾದವನ್ನು ಒಪ್ಪಿದ್ದಾನೆ.[1]

ರಾಮಾನುಜರ ಗುರು ಯಾದವಪ್ರಕಾಶರು. ಅವರ ಬ್ರಹ್ಮಸೂತ್ರ ಟೀಕೆ ಮತ್ತು ಭಗ ವದ್ಗೀತಾ ಟೀಕೆಗಳಲ್ಲಿ ಭೇದಾಭೇದವು ಸಾಧಿಸಲ್ಪಟ್ಟಿದೆ. ರಮಾನುಜರ "ವೇದಾರ್ಥಸಂಗ್ರಹ"ದಲ್ಲಿಯೂ ವೇದಾಂತದೇಶಿಕರ "ಪರಮತಭಂಗ" ಪ್ರಸಂಗದಲ್ಲಿಯೂ, ವ್ಯಾಸತೀರ್ಥರ "ತಾತ್ಪರ್ಯ ಚಂದ್ರಿಕೆ" ಯಲ್ಲಿಯೂ ಸಹ ಭೇದಾಭೇದವನ್ನು ಸಮರ್ಥಿಸಿರುವ ಅಂಶವು ಸ್ಪಷ್ಟವಾಗಿದೆ.

ಶ್ರೀಪತಿಪಂಡಿತಾರಾಧ್ಯರು ಶ್ರೀಕರಭಾಷ್ಯದ ವಾಕ್ಯಾನ್ವಯಾಧಿಕರಣದಲ್ಲಿ ಆಶ್ಮರಥ್ಯನು ಜೀವ-ಬ್ರಹ್ಮರ ಭೇದವಾದಿಯೆಂದೂ, ಔಡುಲೋಮಿಯು ಅದ್ವೈತವಾದಿಯೆಂದೂ, ಕಾಶಕೃತ್ಸ್ನನು "ಭೇದಾಭೇದ"ವಾದಿಯೆಂದೂ ಹೇಳಿ, ಅದೇ ಸೂತ್ರಕಾರರಿಗೆ ಸಮ್ಮತವಾದ ಮುಖ್ಯಸಿದ್ಧಾಂತ ಎಂದಿ ದ್ದಾರೆ.

"ಯ ಆತ್ಮನಿ ತಿಷ್ಠನ್ನಿ"ತ್ಯಾದೌ ವಿಜ್ಞಾನಾತ್ಮನಿ ಪರಮಾತ್ಮಾವಸ್ಥಾನವ್ಯಪದೇಶಾಜ್ಜೀವ ಬ್ರಹ್ಮಣೋರ್ಭೇದಸ್ಸಿದ್ಧ ಇತಿ ಮಧ್ಯವಾಕ್ಯಪ್ರಮಾಣಮಾದಾಯ ಆಶ್ಮರಥ್ಯಃ ತತ್ತ್ವಮಸ್ಯಾದ್ಯಭೇದ ಶ್ರುತಿವೈರುಧ್ಯಂ ಸಾವೃಶ್ಯೇನ ವಾರಯತಿ. ಔಡುಲೋಮಿಸ್ತು "ನೇಹ ನಾನಾಸ್ತಿ ಕಿಂಚನ" ಇತ್ಯಾದಿ ವಾಕ್ಯಪ್ರಮಾಣಮಾದಾಯ "ರಜ್ಜುಸರ್ಪವದದ್ವೈತಬ್ರಹ್ಮಣ್ಯವಿರೋಧತಯಾ ಅದ್ವೈತಪ್ರಪಂಚ ಭಾನಮುಪದಿಶತಿ ; ಕಾಶಕೃತ್ಸ್ನಸ್ತು ಸರ್ವವೇದಾಂತಪೂರ್ವಾಪರಮಧ್ಯಪರಾಮರ್ಶವಿಚಾರ ಬುದ್ಧ್ಯಾ ಷಡ್ವಿಧತಾತ್ಪರ್ಯಲಿಂಗೈಃ ಭೇದಾಭೇದಮೇವ ಮನುತೇ. ಏತದೇವ ಮುಖ್ಯವೇದಾಂತಿ-ಮತಮಿತಿ ವೇದಿತವ್ಯಂ" –[ಬ್ರಂ. ಸಂ. ಭಾ. ೧.೪. ೬-೨೨]

---

[1] ಕಾರ್ಯರೂಪೇಣ ನಾನಾತ್ವಮಭೇದಃ ಕಾರಣಾತ್ಮನಾ ।
ಹೇಮಾತ್ಮನಾ ಯಥಾಭೇದಃ ಕುಂಡಲಾದ್ಯಾತ್ಮನಾ ಭಿದಾ ॥

[ಭಾಸ್ಕರಭಾಷ್ಯ]

ಕ್ರಿಯಾಸಾರಕರ್ತೃ ಶ್ರೀಮನ್ನೀಲಕಂಠ ಶಿವಾಚಾರ್ಯರೂ ಭೇದಾಭೇದವನ್ನೇ ಸಮರ್ಥಿಸಿದ್ದಾರೆ. ಅವರ ಈ ಕಾರಿಕೆಗಳು

ನ ಜೀವ ಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿ ವ್ಯಾಚಕ್ಷತೇ ಶಕ್ತಿವಿಶಿಷ್ಟಂ ವಿಷಯಸ್ತ್ವಿತಿ ॥
ಯಥಾ ಘಟ ಇತಿ ಜ್ಞಾನೇ ಘಟತ್ವಂ ಸ್ಯಾದ್ವಿಶೇಷಣಮ್ ।
ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತಿರಿತ್ಯಭಿಧಾರ್ಯತಾಮ್ ॥
ಅಗ್ನಿಸ್ಫುಲಿಂಗಯೋರ್ನಾಸ್ತಿ ಯಥಾ ಭೇದಃ ಸ್ವರೂಪತಃ ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್ ॥
ಯಥಾಹಿಕುಂಡಲಮಿತಿ ಭೇದಾಭೇದೌ ತಥಾತ್ರ ಚ ।
ತಸ್ಮಾತ್ ಶಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್ ॥
(– ಕ್ರಿಯಾಸಾರ. ಉ. ೧. ೬೨-೬೫)

ಎಂದು ಭೇದಾಭೇದವನ್ನು ಸಮರ್ಥಿಸಿವೆ. ಸ್ವಪ್ರಭಾನಂದಶಿವಾಚಾರ್ಯರ (ಕ್ರಿ. ಶ. ಸು. ೧೬೦೦) "ಶಿವಾದ್ವೈತಮಂಜರಿ"ಯಲ್ಲಿಯೂ, ಮರಿತೋಂಟದಾರ್ಯರ (ಕ್ರಿ. ಶ. ೧೬೦೦) "ವೀರಶೈವಾನಂದ ಚಂದ್ರಿಕೆ"ಯಲ್ಲಿಯೂ ಸಹ ದ್ವೈತಾದ್ವೈತವನ್ನು ಪ್ರಧಾನವಾಗಿ ಪರಿಗಣಿಸಲಾಗಿದೆ.

## ಲಾಕುಳ ಅಥವಾ ಕಾಳಾಮುಖ ಶೈವ

ಲಕುಲೀಶ-ಪಾಶುಪತದ ತರುವಾಯ ದಕ್ಷಿಣಭಾರತದಲ್ಲಿ ಪ್ರಭಾವಶಾಲಿಯಾಗಿದ್ದ ಶೈವ ಪಂಥಗಳಲ್ಲಿ ಕಾಳಾಮುಖ-ಶೈವಪಂಥವು ಮುಖ್ಯವಾದುದು. ಕಾಳಾಮುಖ ಅಥವಾ ಲಾಕುಳಶೈವವೆಂದು ಪ್ರಖ್ಯಾತವಾಗಿದ್ದ ಈ ಪಂಥವು ಹಿಂದೆ ಹೇಳಿದ ಪಂಚಾರ್ಥಲಾಕುಳ ಅಥವಾ ಲಕುಲೀಶ-ಪಾಶುಪತಕ್ಕಿಂತ ಬೇರೆ. ಏಕೆಂದರೆ– ಕಾಳಾಮುಖರಲ್ಲಿ ಪಾಶುಪತಸೂತ್ರಾಚರಣೆಯ ವಿಧಿವಿಧಾನಗಳಾಗಲಿ ವೇದವಿರುದ್ಧವಾದ ಕ್ರಾಥನ, ಮಂಟನ, ಶೃಂಗಾರಣ. ಅಪಿತತ್ಕರಣ, ಅಪಿತದ್ಭಾಷಣಗಳ ಆಚರಣೆಗಳಾಗಲಿ ಇರುವುದಿಲ್ಲ. ಮೇಲಾಗಿ– ಕಪಾಲಪಾತ್ರಭೋಜನ, ಶವಭಸ್ಮಸ್ನಾನ, ತತ್ಪ್ರಾಶನ, ಲಗುಡಧಾರಣ, ಸುರಾಕುಂಭಸ್ಥಾಪನ ಮುಂತಾದ ಆಚರಣೆಗಳಾಗಲಿ ಕಾಳಾಮುಖ-ಮುನಿಗಳಲ್ಲೆಲ್ಲಿಯೂ ವರ್ಣಿತವಾಗಿಲ್ಲ ; ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. [1]

ಈ ಪಂಥವು ಕ್ರಿ. ಶ. ಏಳನೆಯ ಶತಮಾನದಿಂದ ಹದಿನಾಲ್ಕನೆಯ ಶತಮಾನದ ಕಡೆಯವರೆಗೆ ಕರ್ನಾಟಕದಲ್ಲಿ ಉನ್ನತ ಸ್ಥಿತಿಯಲ್ಲಿತ್ತು.

## ಕಾಳಾಮುಖಪಂಥದ ಉದಯ ಮತ್ತು ಪ್ರಗತಿ

ಕಾಳಾಮುಖ ಪಂಥದ ಬಗೆಗೆ ಪರಿಷ್ಕೃತವಾದ ಯಾವ ಪ್ರಾಚೀನ ಸಾಹಿತ್ಯವೂ ಉಪಲಬ್ಧವಿಲ್ಲ. ಆದರೆ ಶಿಲಾಶಾಸನಗಳಲ್ಲಿಯ ಉಲ್ಲೇಖಗಳ ಆಧಾರದಿಂದ ಈ ಪಂಥವು ಕ್ರಿ. ಶ. ೭ ನೆಯ

---

[1] ದರ್ಶನ ದೀಪ್ತಿ: ಪು. ೧೪೨-೧೯೮. ಶ್ರೀಮಲ್ಲನಗೌಡ ಪಾಟೀಲ (ಎಂ. ಪಿ. ಪಾಟೀಲ್) ಬೆಳಗಾಂ.

ಶತಮಾನದಿಂದಲೇ ಕರ್ಣಾಟಕ ಹಾಗೂ ಆಂಧ್ರಪ್ರಾಂತದ ಕೆಲವು ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದಂತೆ ತಿಳಿದು ಬರುತ್ತದೆ. ಬಾಣವಂಶದ ಒಬ್ಬ ರಾಜನ ತಾಯಿ 'ರತ್ನಾವಳಿ' ಎಂಬುವಳು ಒಂದು ದೇವಾಲಯಕ್ಕೆ ಬರೆಯಿಸಿಕೊಟ್ಟಿರುವ ದಾನ-ಪ್ರಶಸ್ತಿಯಲ್ಲಿ ಕಾಳಾಮುಖಮುನಿ "ಕಾಲಶಕ್ತಿ" ಮತ್ತು ಅವನ ಶಿಷ್ಯ "ಈಶ್ವರದೇವ" ಇವರ ಉಲ್ಲೇಖವಿದೆ. ಈ ಪ್ರಶಸ್ತಿಯ ಕಾಲ ಕ್ರಿ. ಶ. ಸು. ೬೮೦. Karnataka Through the Ages ಪು. ೧೭೫) ವಿಜಾಪುರಜಿಲ್ಲೆಯ ಮಹಾಕೂಟ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ಕಾಳಾಮುಖಮುನಿಗಳ ಹಲವು ಮೂರ್ತಿಗಳು ಕಂಡು ಬರುತ್ತವೆ. ಅವು ಕ್ರಿ. ಶ. ೭ ಅಥವಾ ೮ ನೆಯ ಶತಮಾನದ ಶಿಲ್ಪವೆಂದು ವಿದ್ವಾಂಸರು ಊಹಿಸಿದ್ದಾರೆ. ಮುಂದೆ ಹತ್ತನೆಯ ಶತಮಾನದಿಂದ ಈ ಸಂಘವು ರಾಜ-ಪ್ರಜೆಗಳ ವಿಶೇಷ ಭಕ್ತಿ-ವಿಶ್ವಾಸಗಳಿಗೆ ಪಾತ್ರವಾಗಿದ್ದಂತೆ ತಿಳಿದುಬರುತ್ತದೆ. ಈ ಕಾಲಕ್ಕೆ ಸೇರಿದ ಹೇಮಾವತಿ (ತುಮಕೂರುಜಿಲ್ಲೆ) ಯಲ್ಲಿಯ ಶಿಲಾಲೇಖನದಲ್ಲಿ (Sira No. 28. of 943 A. D ; E. C. vol xii) "ಚುಳುಕ ಮುನಿ" ಎಂಬ ಕಾಳಾಮುಖಮುನಿಯನ್ನು ಲಕುಲೀಶನ ಪರಾವತಾರವೆಂದು ವರ್ಣಿಸಲಾಗಿದೆ. ಸುಮಾರು ಅದೇ ಕಾಲದ "ತಾಂದಿಕೊಂಡ" ತಾಮ್ರಶಾಸನದಲ್ಲಿ (No. 35 of 958 A. D ; E. i. VOL. xxiii) "ಲಕಶಿಪು" ಹಾಗೂ "ಪ್ರಭೂತರಾಶಿ" ಮುಂತಾದ ಕಾಳಾಮುಖಮುನಿಗಳ ಉಲ್ಲೇಖ ಕಂಡುಬರುತ್ತದೆ.

ಶಾಸನಗಳಲ್ಲಿ ಕಂಡುಬರುವ ಕಾಳಾಮುಖರ ಚರಿತ್ರೆಯನ್ನು ನೋಡಿದರೆ, ಸ್ಥಾವರ-ಲಿಂಗಗಳನ್ನು ಸ್ಥಾಪಿಸುವುದು, ಅಲ್ಲಿ ಗುಡಿಗಳನ್ನೂ ಮಠಗಳನ್ನೂ ಕಟ್ಟಿಸುವುದು, ಸಮಯಾಚಾರ್ಯರನ್ನು ನೆಲೆಗೊಳಿಸುವುದು ಕಂಡುಬರುತ್ತದೆ. ಕ್ರಿ. ಶ. ೧೦೦೩ ರಲ್ಲಿ ಕೆತ್ತಿಸಿದ ಗದುಗಿನ ಒಂದು ಶಾಸನದಲ್ಲಿ "ಬೆಳ್ವಲನಾಡೊಳಗಣ ಅಗ್ರಹಾರ ಕರ್ದುಗಿನ ಸ್ವಯಂಭುದೇವರ ದೇಗುಲದ ಪೂಲಿಯ ಪಂಡಿತರ ವಿದ್ಯಾಭ್ಯಸ್ಯರ್ ಕೋಪಿನ ವಖ್ಖಾಣಜೀಯರ ಶಿಷ್ಯರಪ್ಪ ವಖ್ಖಾಣಜೀಯರ್ಗೆ ಧಾರಾಪೂರ್ವಕಂ ವಿದ್ಯಾದಾನಮಾಗೆ" ದತ್ತಿಯನ್ನು ಬಿಟ್ಟ ಉಲ್ಲೇಖವಿದೆ. ಅದೇ ಊರಿನ ಸ್ವಯಂಭೂ-ತ್ರಿಕೂಟೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಕ್ರಿಯಾಶಕ್ತಿ ಪಂಡಿತಾಚಾರ್ಯರೆಂಬ ಸಾವಾಸಿ (ಸಮಯಾಚಾರ್ಯರು) ಗಳಿದ್ದರೆಂದೂ ಅವರ ಪಾದವನ್ನು ಕರ್ಚಿ ದತ್ತಿ ಬಿಟ್ಟಂತೆ ಆ ದೇವಾಲಯದಲ್ಲಿನ (ಕ್ರಿ. ಶ. ೧೧೦೩) ಶಾಸನದಿಂದ ವೇದ್ಯವಾಗುತ್ತದೆ. (Bombay Karnatak Inscriptions Vol. I Part) ಲಕ್ಷ್ಮೇಶ್ವರದ ಮತ್ತೊಂದು ಶಾಸನದಲ್ಲಿ (Three Inscriptions of puligere-E P. Ind. Vol. xvi PP. 48) ಪುಲಿಗೆರೆಯ ಸೋಮನಾಥದೇವಾಲಯದಲ್ಲಿ ಸ್ಥಾನಾಚಾರ್ಯರಾದ "ದೇವ ಸೋಮವ್ರತಿ," "ಮಹೇಂದ್ರಸೋಮವ್ರತಿ", "ಜ್ಞಾನಸೋಮವ್ರತಿ"ಗಳೆಂಬ ಯತಿಗಳಿಗೆ ಅವರ ಕಾಲಂ ಕರ್ಚಿ ದತ್ತಿಗಳನ್ನು ಬಿಟ್ಟ ಉಲ್ಲೇಖಗಳಿವೆ. ವಿಜಯನಗರ ಸಾಮ್ರಾಜ್ಯೋದಯಕ್ಕೆ ಶೈವಧರ್ಮ ಗುರುಗಳಾದ ಕ್ರಿಯಾಶಕ್ತಿ-ಪಂಡಿತಾಚಾರ್ಯರ ತಪಃಪ್ರಭಾವವು ಪ್ರೇರಕಶಕ್ತಿಯಾಗಿದ್ದ ಅಂಶವು ಸುಪ್ರಸಿದ್ಧ. ಇನ್ನು ಕ್ರಿ. ಶ. ೧೪೦೦ ರಲ್ಲಿ ಓರಂಗಲ್ಲಿನ ರಾಜಾಸ್ಥಾನವನ್ನು ಅಲಂಕರಿಸಿದ್ದ ಮಲ್ಕಾಪುರ ಶಾಸನೋಕ್ತ-ವಿಶ್ವೇಶ್ವರ ಶಂಭುವು "ವೀರಶೈವಶತೈರ್ವೃತಃ" ಎಂದು ವರ್ಣಿತನಾಗಿದ್ದಾನೆ.

ಕಾಳಾಮುಖರ ಮುಖ್ಯಕೇಂದ್ರಗಳಲ್ಲಿ– **ಶ್ರೀಶೈಲ, ಹೂಲಿ, ಬಳ್ಳಿಗಾವೆ, ಹಂಪೆಗಳು** ಮುಖ್ಯವಾಗಿದ್ದವು. ಇವುಗಳಲ್ಲಿ ಬಳ್ಳಿಗಾವೆ ಎಂಬ ಗ್ರಾಮದಲ್ಲಿದ್ದ 'ಕೇದಾರೇಶ್ವರ ದೇವಾಲಯ' ಹಾಗೂ ಅದಕ್ಕೆ ಹೊಂದಿಕೊಂಡಿದ್ದ "ಕೋಡೀಮಠ"ದ ಪ್ರಖ್ಯಾತಿಯು ಶಾಸನಗಳಲ್ಲಿ

ಉಲ್ಲಿಖಿತವಾಗಿದೆ. ಹನ್ನೊಂದನೆಯ ಶತಮಾನದ ಆರಂಭದಲ್ಲಿ "ಕೇದಾರ ಶಕ್ತಿಮುನಿ" ಎಂಬ ಪ್ರಖ್ಯಾತ ಕಾಳಾಮುಖಮುನಿಯು ಅದನ್ನು ಕಟ್ಟಿಸಿದನು. ಅವನ ಶಿಷ್ಯಪರಂಪರೆಯಲ್ಲಿ ಆಗಿ ಹೋದ ಮಠಾಧಿಪತಿಗಳು, ವಿದ್ವಾಂಸರೂ, ನೈಷ್ಠಿಕಬ್ರಹ್ಮಚಾರಿಗಳೂ, ತಪೋನಿಷ್ಠರೂ, ಕರ್ತೃತ್ವ ಶಾಲಿಗಳೂ ಆಗಿದ್ದರು. ಈ ಮಠಾಧಿಪತಿಗಳು ಶೈವಧರ್ಮಪ್ರಚಾರವನ್ನು ಮಾತ್ರವಲ್ಲದೆ ವಿದ್ಯಾರ್ಥಿ ಗಳಿಗೆ ಧಾರ್ಮಿಕ ಹಾಗೂ ವ್ಯಾವಹಾರಿಕ ಶಿಕ್ಷಣವನ್ನು ಕೊಡುವ ವಿದ್ಯಾಪೀಠ, ಅತಿಥಿ-ಸೇವಾಗೃಹ ವೈದ್ಯಕೀಯ-ವ್ಯವಸ್ಥೆ ಇವುಗಳನ್ನು ಸಹ ಸುವ್ಯವಸ್ಥಿತವಾಗಿ ಏರ್ಪಡಿಸಿದ್ದಂತೆ ವರ್ಣಿತವಾಗಿದೆ. (S. k. 102. of 1162. A. D. E. C. Vol. VII) ಇದರಂತೆ ಆಗಿನ ಕಾಲದಲ್ಲಿ ಕರ್ಣಾಟಕದ ಮುಖ್ಯಸ್ಥಳಗಳೆನಿಸಿದ್ದ **ಬಂದಳಿಕೆ, ಅರಸೀಕೆರೆ, ಹಳೆಬೀಡು, ಇಂಗಳೇಶ್ವರ, ಬಾಗೇವಾಡಿ, ವಿಜಯಪುರ, ಮುತ್ತಿಗೆ, ಮತ್ತು ಹೂಲಿ** ಮುಂತಾದ ಸ್ಥಳಗಳಲ್ಲಿಯೂ ಕಾಳಾ ಮುಖಪಂಥದ ಶಿವಾಲಯಗಳು ಮಠಗಳು ಸ್ಥಾಪಿತವಾಗಿದ್ದವು. ಇವುಗಳಲ್ಲಿ ಸೊರಬ ತಾಲ್ಲೂಕಿನ ಕುಪ್ಪತ್ತೂರು ಗ್ರಾಮದಲ್ಲಿಯ ಶಿಲಾಶಾಸನದಲ್ಲಿ ಈ ಗ್ರಾಮದ "ಅನಂತಕೋಟಿ-ಭುವನೇಶ-ದೇವಾಲ ಯದ ಅರ್ಚಕರಾದ ಸರ್ವೇಶ್ವರ ಶಕ್ತಿದೇವ" ಎಂಬ ಕಾಳಾಮುಖಮುನಿಗಳು ರಾಜಗುರುಗಳಾಗಿದ್ದ ರಲ್ಲದೆ ಅವರು ೭೭ ಶಿವಾಲಯಗಳಿಗೆ ಅಧಿಪತಿಗಳಾಗಿದ್ದರೆಂದು ವರ್ಣಿತರಾಗಿದ್ದಾರೆ. (M G. 1930. Vol. II Part II P. P. 796, 97)

**ದಕ್ಷಿಣದ ಲಕುಲೀಶ (ಕಾಳಾಮುಖ) ಪಾಶುಪತಸ್ವರೂಪ :–** ಹಿಂದೆ ಲಕುಲೀಶ-ಪಾಶುಪತದ ಎರಡು ಪ್ರಮುಖ ಶಾಖೆಗಳು ಭಾರತದಲ್ಲಿ ಪ್ರಖ್ಯಾತವಾಗಿದ್ದವು. ಇವುಗಳಲ್ಲಿ ಕರ್ಣಾ-ಟಕ ಮತ್ತು ಆಂಧ್ರಪ್ರಾಂತಗಳಲ್ಲಿ ನೆಲೆಸಿದ್ದ ಲಕುಲೀಶಪಾಶುಪತವು "ಕಾಳಾಮುಖ" ಎಂಬ ಹೆಸರಿ ನಿಂದ ಪ್ರಸಿದ್ಧವಾಗಿತ್ತು. ಎರಡನೆಯದು ಪಂಚಾರ್ಥ-ಲಾಕುಳಪಾಶುಪತ. ಇದರ ಸ್ವರೂಪ ವನ್ನು ಈ ಹಿಂದೆ ನಿರೂಪಿಸಲಾಯಿತು.

ಕಾಳಾಮುಖ ಸಂಪ್ರದಾಯವು ಗಣಸಹಸ್ರದಲ್ಲಿ ಉಕ್ತವಾಗಿರುವ ಇಪ್ಪತ್ತೆಂಟು ಯೋಗಾ ಚಾರ್ಯರಲ್ಲಿ ಒಬ್ಬನಾದ ಲಕುಲೀಶನಿಂದ ಆರಂಭವಾಯಿತು. ಯೋಗಾಚಾರ್ಯರು ಸ್ವಯಂಭು ಲಿಂಗ ದಂತೆ ಸ್ವಯಂಭುಗಳು. ವಾಯವೀಯಸಂಹಿತೆಯಲ್ಲಿ ಯೋಗಾಚಾರ್ಯರ ಅವತಾರವರ್ಣನವಿದೆ-[1] ಈ ಪಾಶುಪತಪಂಥವು ಮಹಾಭಾರತ-ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದಂತೆ (ಶಾಂತಿಪರ್ವ ೩೪೯, ೬೪) ತಿಳಿದುಬಂದಿದೆ. ಶೈವಾಗಮ, ಶೈವಪುರಾಣಗಳನ್ನು ಪ್ರಮಾಣವಾಗಿ ಸ್ವೀಕರಿಸಿರುವ ಈ ಪಂಥವು ಶ್ರೌತಪಾಶುಪತ. ಐತಿಹಾಸಿಕ-ದೃಷ್ಟಿಯಿಂದ ಇದು ಕ್ರಿ' ಶ. ೭ ನೆಯ ಶತಮಾನದಿಂದ ಕರ್ಣಾಟಕ ದಲ್ಲಿ ಶ್ರೌತಲಕುಲೀಶ ಅಥವಾ ಕಾಳಾಮುಖವೆಂದು ಹೆಸರಾಂತಿತ್ತು. ಈ ಪಂಥವು ಸೋದರ ಧರ್ಮ-ಗಳೆನಿಸಿರುವ ಶೈವಸಿದ್ಧಾಂತ, ವೀರ ಮಾಹೇಶ್ವರ ಪಂಥಗಳ ಧರ್ಮ ಗುರುಗಳ ಉಲ್ಲೇಖವಿರುವ ಅನೇಕ ಶಿಲಾಶಾಸನಗಳಲ್ಲಿ ಕಂಡುಬರುತ್ತದೆ. ಇವುಗಳಲ್ಲಿ ಒಂದಾದ ತಾಂದಿಕೊಂಡ ತಾಮ್ರ ಶಾಸನದಲ್ಲಿ ಈ ಪಂಥದ ಸ್ವರೂಪವು ಕಂಡುಬರುತ್ತದೆ.

---

[1] ಮಮಾವತಾರಾಣಿ ಶುಭೇ ಯೋಗಾಚಾರ್ಯಚ್ಛಲೇನ ತು ।
ಯುಗಾಂತರೇಷು ಸಂತಿ ಆರ್ಯೇ ಸಂತತಿಶ್ಚ ಸಹಸ್ರಶಃ ॥

(– ವಾ. ಸಂ. ಉತ್ತರಭಾಗ. ೧೧–೨೬)

ಆಗಿನಕಾಲದ ಆಂಧ್ರಪ್ರಾಂತದ ಅಮ್ಮರಾಜನು ಕೊಟ್ಟ ದತ್ತಿಯೊಂದರಲ್ಲಿ– "ಪ್ರಭುರಾಶಿ" ಎಂಬ ಕಾಳಾಮುಖಮುನಿಯು ಮೂರು ಅಂತಸ್ತಿನ ಶಿವಾಲಯ ಮತ್ತು ಮಠವನ್ನು ಕಟ್ಟಿಸಿದ್ದನು; ಅವುಗಳ ವ್ಯವಸ್ಥೆಗಾಗಿ ಅಮ್ಮರಾಜ ಮೂರು ಹಳ್ಳಿಗಳ ಆದಾಯವನ್ನು ತಾಮ್ರಶಾಸನದಲ್ಲಿ ಬರೆದು ಕೊಟ್ಟಿದ್ದಾನೆ; ಎಂದಿದೆ. ಈ ಶಾಸನದಲ್ಲಿ ಸಾಕ್ಷಾತ್ ಶಿವನನ್ನೇ "ಲಕುಲೀಶ್ವರ" ನೆಂದು ಕರೆಯಲಾಗಿದೆ.[1] "ವೇದರೂಪದಂಡ ಧಾರಣಮಾಡಿದ ಯಾವ ನಟನು ಧರ್ಮಸ್ವರೂಪಿಣಿಯಾದ ನಟಿಯನ್ನು (ಸರ್ವಧರ್ಮಗಳನ್ನು) ನಿಯಂತ್ರಿಸುವನೋ ಮತ್ತು ಯಾವನು ತ್ರಿಲೋಕವಂದ್ಯನೊ ಆ ಲಕುಲೀಶ (ಶಿವ)ನ ಶಾಸನ ರೂಪ ಧರ್ಮಕ್ಕೆ ಜಯವಾಗಲಿ."

ಈ ಪಂಥವು ವೇದಪ್ರಾಮಾಣ್ಯವನ್ನು ಮನ್ನಿಸುತ್ತದೆ. ಶೈವಾಗಮೋಕ್ತಜ್ಞಾನ-ಕ್ರಿಯಾ-ಚರ್ಯಾ-ಯೋಗಪಾದಗಳಲ್ಲಿಯ ಧರ್ಮಾಚರಣವು ಈ ಪಂಥದಲ್ಲಿದೆ. ಲಾಕುಳಾಗಮವು ಶಿವ ಮುಖದಿಂದ ಹೊರಟ ಧರ್ಮಶಾಸ್ತ್ರ. ಶಾಸನಗಳಲ್ಲಿ ಕಂಡುಬರುವ "ಪರಮಾತ್ಮಾಗಮವೇದಿ" ಮುಂತಾದ ಶಬ್ದಗಳು ಈ ಅರ್ಥವನ್ನು ಸಮರ್ಥಿಸುತ್ತವೆ.

ಕಾಳಾಮುಖರ ಮೂಲಸ್ಥಾನ ಶ್ರೀಶೈಲ ಹಾಗೂ ಅದರ ಪರಿಸರ. ಈ ಪಂಥದಲ್ಲಿ 'ಶಕ್ತಿ ಪರಿಷೆ' ಮತ್ತು 'ಸಿಂಹ ಪರಿಷೆ" ಎಂಬ ಎರಡು ಪಂಗಡಗಳಿವೆ. ಪ್ರಮುಖ-ಮುನಿಗಳ ಗುರು-ಶಿಷ್ಯ ಪರಂಪರೆಯಲ್ಲಿ ಕೆಲವು ಶಾಖೆಗಳು ನಿರ್ಮಾಣವಾದಂತೆ ತೋರುತ್ತದೆ. ಅವುಗಳಿಗೆ 'ಸಂತತಿ' ಅಥವಾ 'ಸಂತಾನ' ಎಂದು ಹೆಸರು. ಶಕ್ತಿ ಪರಿಷೆಯ ಮೂಲಧರ್ಮಗುರು 'ಕೇದಾರೇಶ್ವರಮುನಿ,' ಈತನೇ ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯವನ್ನು ಸ್ಥಾಪಿಸಿದವನು. ಅಬಲೂರು ಶಾಸನದಲ್ಲಿ (E.D. VOL. V.) "ಇಟ್ಟಿಗೆ ಭುಜಂಗಾವಳಿಯ ಸಂತತಿ– ಶಕ್ತಿ ಪರಿಷೆ" "ಪರ್ವತಾವಳಿಯ ಶಿವಲಿಂಗಿ ಸಂತಾನ– ಶಕ್ತಿ ಪರಿಷೆ" "ಪರ್ವತಾವಳಿಯ ಬೆಳ್ಳಿಯ ಸಂತಾನ– ಸಿಂಹಪರಿಷೆ" "ಅಮರಾವತಿಯ ಅಮರವಟೇಶ್ವರ ದೇವಾಲಯ ಸಂತತಿ– ಸಿಂಹಪರಿಷೆ" "ಶ್ರೀಶೈಲ ಪಶ್ಚಿಮದ್ವಾರ-ತೋರಣದ ಕಿಟ್ಟಿಗಾವೆಯ ಸಂತತಿ– ಶಕ್ತಿಪರಿಷ" "ಶ್ರೀಪರ್ವತದ ಮಲ್ಲಿಕಾರ್ಜುನ-ಕಲ್ಮಠದ ಸಂತತಿ– ಸಿಂಹಪರಿಷ" "ಮುದಿನೀರ ತೀರ್ಥದ ರಾಮೇಶ್ವರದ ಮಲಿಯಾಳ ಪಂಡಿತದೇವರ ಸಂತತಿ– ಸಿಂಹಪರಿಷೆ" ಮುಂತಾದ ಸಂತತಿಗಳು ಮುಖ್ಯವಾಗಿದ್ದವು.

ಶ್ರೀಶೈಲ, ಅಲ್ಲಿಯ ಕದಳೀವನಗಳು ಈ ಮುನಿಗಳಿಗೆ ವಿಪುಲ ಆಶ್ರಯ ನೀಡಿದ್ದುದು ಕಂಡು ಬರುತ್ತದೆ. ಶೈವ ಪಾಶುಪತಮುನಿಗಳು ಕೈಕೊಂಡ ಶ್ರೌತ-ಶೈವಧರ್ಮದ ಪ್ರಚಾರವೇ ರೂಪುಗೊಂಡು ಕಾಳಾಮುಖ ಪಂಥವಾಗಿರಬೇಕೆಂದು ತೋರುತ್ತದೆ. ಕಾಳಾಮುಖಪಂಥವು ಕಾಶ್ಮೀರ ಅಥವಾ ಉತ್ತರ ಹಿಂದೂಸ್ಥಾನದಿಂದ ಬಂದಿರಬೇಕೆಂಬ ಕೆಲವರ ಊಹೆ ಸರಿಯಾದುದಲ್ಲ. ಉತ್ತರ ಭಾರತದ ಯಾವ ಶೈವ-ಪಂಥಗಳೊಡನೆಯೂ ಈ ಕಾಳಾಮುಖಪಂಥದ ಸಂಬಂಧವಿರುವುದಿಲ್ಲ. ಅದು ದಕ್ಷಿಣಭಾರತದಲ್ಲಿಯೇ ನಿರ್ಮಾಣವಾಗಿ ಅಲ್ಲಿಯೇ ಬೆಳೆದು, ಕೊನೆಗೆ ವೀರಶೈವ ಧರ್ಮದಲ್ಲಿ

---

[1] ಶ್ರೀಮತ್ತ್ರೈಲೋಕ್ಯವಂದ್ಯಸ್ಯ ಲಕುಲೀಶಸ್ಯ ಶಾಸನಂ ।
ಜಯತ್ಯ ಅನುಗತಾತ್ಮೇಷ್ಟದೃಷ್ಟಾದೃಷ್ಟಫಲಪ್ರದಂ ॥
ಯೋ ಧರ್ಮಾಳಿನಟೀಂ ಶಾಸ್ತಿ ವೇದದಂಡಧರೋ ನಟಃ ।
ತಚ್ಛಾಸನಂ ಜಯತ್ಯೇತತ್ ತ್ರಿಲೋಕೇ ಮಂಗಲಪ್ರದಂ ॥

ಸಮಾವೇಶಗೊಂಡ ಶೈವಪಂಥ. ಕಾಶ್ಮೀರದೇವಮುನಿ ಹಾಗೂ ಕೇದಾರ ಶಕ್ತಿಮುನಿಗಳು ಪ್ರಾಯಃ ಕಾಶ್ಮೀರ ಮತ್ತು ಕೇದಾರಗಳಿಂದ ಬಂದಿರಬಹುದೆಂದು ಅವರ ಹೆಸರುಗಳಿಂದ ಕಂಡು ಬರುತ್ತದೆ ಯಾದರೂ ಅವರ ಶಾಖಾವಳಿಯ ಹೆಸರು 'ಪರ್ವತಾವಳಿ' ಎಂದಿರುವುದರಿಂದ ಅವು ಶ್ರೀಶೈಲದಿಂದಲೇ ನಿರ್ಮಾಣವಾಗಿರಬೇಕೆಂದು ವಿದ್ವಾಂಸರು ತರ್ಕಿಸಿದ್ದಾರೆ.

**ಕಾಳಾಮುಖಶೈವ-ಪಂಥದಲ್ಲಿ ಲಿಂಗಧಾರಣ**

ಹನ್ನೆರಡನೆಯ ಶತಮಾನಕ್ಕೆ ಹಿಂದೆಯೇ ಪಾಶುಪತ-ಲಾಕುಳ-ಕಾಳಾಮುಖಾದಿಗಳಲ್ಲಿ ಲಿಂಗಧಾರಣವಿತ್ತು. ಶಾಸನಗಳಲ್ಲಿ ಅವರನ್ನು 'ಲಿಂಗಿ'ಗಳೆಂದು ಕರೆಯಲಾಗಿದೆ.

ಕ್ರಿ. ಶ. ೧೧೬೮ ರಲ್ಲಿ ಬರೆದ ಬಳ್ಳಿಗಾವೆಯ ೯೪ ನೇ ಶಾಸನದಲ್ಲಿ–

ಇವನೀಯಂದದೊಳೆಯ್ದೆ ರಕ್ಷಿಸಿದವಂಗಿಷ್ಟಾರ್ಥಸಂಸಿದ್ಧಿ ಸಂ
ಭವಿಕುಂ ಪೂಣ್ದಳಿದಂತೆ ಗಂಗೆ-ಗಯ-ಕೇದಾರಂ ಕುರುಕ್ಷೇತ್ರಮೆಂ ।
ಬಿವರೊಳ್ ಪೇಸದೆ ಪಾರ್ವರಂ ಕವಿಲೆಯಂ ಸ್ತ್ರೀಬಾಳರಂ ಲಿಂಗಿಯು
ಪ್ಪವರಂ ಕೊಂದನಪಂ ಸ್ವಗೋತ್ರಸಹಿತಂ ಬೀಳ್ಗುಂ ಮಹಾಘೋರದೊಳ್ ॥

ಕ್ರಿ. ಶ. ೧೧೧೩ ರ ಬೆಳಗಾವಿಯ ೯೯ ನೆಯ ಶಾಸನಗಳು–

ಗಂಗಾಯಮುನಾಸಾಗರ । ಸಂಗಮದೊಳ್ ಕೋಟಿಪಾರ್ವರುಂ ಕವಿಲೆಗಳುಂ
ಲಿಂಗಿಗಳುಂ ಬೆರಸಳಿದಂ । ಲಿಂಗಮನೀಧರ್ಮಮಂ ಕರುತ್ತಳಿದಧಮಂ ॥
ಕವಿಲೆಗಳಂ ಕೋಟಿಯನೋಸೆ । ದವನೀಸುರಕೋಟಿಗಿತ್ತನೀ ಧರ್ಮಕ್ಕು ।
ದ್ಧವಮಂ ಪಡೆದವನೀ ಕೀ । ರ್ತಿವಿತತಿಯೊಳ್ ಲಿಂಗಲಿಂಗಿಜನಸನ್ನಿಧಿಯೊಳ್ ॥

ಈ ಪದ್ಯಗಳಲ್ಲಿ ಶಾಸನಧರ್ಮಗಳನ್ನು ಕೆಡಿಸಿದವರಿಗೆ, ಪಾರ್ವರಂ, ಕವಿಲೆಯಂ, ಸ್ತ್ರೀ ಬಾಳರಂ ಲಿಂಗಿಯಪ್ಪವರಂ ಕೊಂದರೆ ಪಾಪ ಬರುವುದೆಂದು ಹೇಳಿದೆ.

"ಲಿಂಗಿಗಳೆಂದು ಶಾಸನಗಳಲ್ಲಿ ಹೇಳಲ್ಪಟ್ಟಿರುವ ಕಾಳಾಮುಖರನ್ನೊಳಗೊಂಡ ಲಕುಲೀಶ ಪಾಶುಪತಾದಿಗಳೆಲ್ಲರೂ ಲಿಂಗಧಾರಿಗಳೇ. ಅವರೆಲ್ಲರೂ ಶಿವನಲ್ಲಿ ಅವ್ಯಭಿಚರಿತ-ಭಕ್ತಿಯನ್ನಿಟ್ಟವ ರಾದುದರಿಂದ ಲಿಂಗವನ್ನು ಧರಿಸಿ, ಪೂಜಿಸಿ, ಶಿವಯೋಗದಿಂದ ಮೋಕ್ಷವನ್ನು ಪಡೆಯುವ ಧರ್ಮದ ಮತಾನುಯಾಯಿಗಳೇ. ಹಾಗೆಯೇ "ಭುಜದ್ವಯಲಿಂಗಧರಾಃ ಶೈವಾಃ .. ....ಶಿರಸಿ ಪಾಷಾಣ ಲಿಂಗಂ ಚ ಧಾರಿಣಃ ಜಂಗಮಾಃ, ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶು ಪತಾಃ [1] (ಆನಂದಗಿರಿಯ ಶಂಕರದಿಗ್ವಿಜಯ) ಎಂಬ ಉಕ್ತಿಗಳಿಂದ ಲಿಂಗಧಾರಣವು ಪಾಶುಪತ-ಕಾಳಾಮುಖರಲ್ಲಿದ್ದಿತೆಂಬುದು ವ್ಯಕ್ತವಾಗುತ್ತದೆ.

---

[1] ವೀರಶೈವದ ಉಗಮ ಮತ್ತು ಪ್ರಗತಿ– ಶ್ರೀ ಟಿ. ಎಸ್. ಮಲ್ಲಪ್ಪ, ನಿವೃತ್ತ ನ್ಯಾಯ ಮೂರ್ತಿಗಳು (ಪು. ೩೧).

## ಕಾಳಾಮುಖ-ಪಾಶುಪತ ಮತ್ತು ಲಕುಲೀಶ (ಪಂಚಾರ್ಥ) ಪಾಶುಪತಗಳಲ್ಲಿಯ ಕೆಲವು ವ್ಯತ್ಯಾಸಗಳು

೧. ಕಾಳಾಮುಖವು ಶ್ರೌತ. ಈ ಪಂಥದ ಮೂಲಪುರುಷ ಯೋಗಚಾರ್ಯರಲ್ಲಿ ಉಕ್ತನಾದ ಲಕುಲೀಶ.

ಪಂಚಾರ್ಥ-ಲಾಕುಳವು ವೇದೋಕ್ತ-ಈಶನಾದಿ ಪಂಚಬ್ರಹ್ಮಮಂತ್ರಗಳನ್ನು ಸ್ವೀಕರಿಸಿದೆ ಯಾದರೂ ಅದರಲ್ಲಿ ವೇದವಿರುದ್ಧವಾದ ಅನೇಕ ಆಚಾರವಿಚಾರಗಳಿರುವುದರಿಂದ ಅದು ಅಶ್ರೌತ. ಈ ಪಂಥದ ಮೂಲಪುರುಷ ಗುಜರಾತ್‌ನಲ್ಲಿರುವ ಕಾರವಾನದ ಸ್ಮಶಾನದಲ್ಲಿದ್ದ ಒಂದು ಮೃತದೇಹ ದಲ್ಲಿ ಅವತರಿಸಿದ ಲಕುಲೀಶ. ಇವನ ತಂದೆ ಉಲೂಕ.

೨. ಶ್ರೌತ-ಕಾಳಾಮುಖ-ಪಂಥದ ಕಾರ್ಯಕ್ಷೇತ್ರ ಶ್ರೀಶೈಲ ಮತ್ತು ಅದರ ಸುತ್ತು ಮುತ್ತಿನ ಪರಿಸರ. ಪಂಚಾರ್ಥಲಕುಲೀಶನ ಕಾರ್ಯಕ್ಷೇತ್ರ ಮಧ್ಯಭಾರತ.

೩. ಶ್ರೌತ-ಸಂಪ್ರದಾಯದ ಕಾಳಾಮುಖಕ್ಕೆ ಶ್ರುತಿ, ಆಗಮ ಮತ್ತು ಪುರಾಣಾದಿಗಳು ಪ್ರಮಾಣಗ್ರಂಥಗಳು. ಅಶ್ರೌತ-ಲಾಕುಳ-ಸಂಪ್ರದಾಯಕ್ಕೆ ಲಕುಲೀಶನು ಬರೆದ ಪಂಚಾರ್ಥ ಅಥವಾ ಪಾಶುಪತಸೂತ್ರ ಮತ್ತು ಅದರ ಟೀಕೆಗಳು ಪ್ರಮಾಣ.

೪. ಕಾಳಾಮುಖಪಂಥವು ಕ್ರಿ. ಶ. ೭ ನೆಯ ಶತಮಾನದಿಂದ ಪ್ರಸಿದ್ಧಿ ಪಡೆದಿದ್ದು ಕಡೆಗೆ ವೀರಶೈವದಲ್ಲಿ ವಿಲೀನಗೊಂಡಿತು. ತಾಂದಿಗೊಂಡ ಶಿಲಾಶಾಸನದಲ್ಲಿ ಈ ಪಂಥದ ಸ್ವರೂಪು ಕಂಡು ಬರುತ್ತದೆ. ಮಹಾಭಾರತ ಮತ್ತು ವಾಯವೀಯ ಸಂಹಿತೆಗಳು ಇವನ್ನು ಪ್ರಸ್ತಾಪಿಸಿವೆ. ಪಂಚಾರ್ಥ-ಲಾಕುಳ ಸಂಪ್ರದಾಯವು ಕ್ರಿ. ಶ. ೨ ನೆಯ ಶತಮಾನದಿಂದ ಕಂಡಿದೆ. ಬೌದ್ಧಧರ್ಮವನ್ನು ಹಿಮ್ಮೆಟ್ಟಿಸಿದ್ದು ಇದರ ಹಿರಿಮೆ. ಚಿಂತ್ರಾಶಾಸನ, ಕಾಯಾರೋಹಣ ಮಾಹಾತ್ಮ್ಯ, ಕೂರ್ಮ ಪುರಾಣಗಳಲ್ಲಿ ಇದರ ಪ್ರಸ್ತಾಪವುಂಟು.

೫. ಕಾಳಾಮುಖಸಂಪ್ರದಾಯದ ಮುನಿಗಳು ಸಾತ್ವಿಕರು, ಪರೋಪಕಾರಿಗಳು, ಜನ ಸಾಮಾನ್ಯರ ಸಂಪರ್ಕ ಪಡೆದು, ಮಹಾ ವಿದ್ಯಾಪೀಠಗಳು, ವೈದ್ಯಾಲಯ, ಅನ್ನಸತ್ರಾದಿಗಳು ಇವನ್ನು ನಿರ್ಮಿಸಿ ಲೋಕೋಪಕಾರಿಗಳಾಗಿದ್ದರು.

ಲಕುಲೀಶ ಸಂಪ್ರದಾಯದ ಯತಿಗಳು ವಾಮಾಚಾರಿ ಕಾಪಾಲಿಕರಂತೆ ಘೋರಕರ್ಮಿ ಗಳು. ಇವರಲ್ಲಿ ಪಾಶುಪತಸೂತ್ರೋಕ್ತ ಕ್ರಂದನ, ಸ್ಪಂದನ, ಮಂಟನ, ಶೃಂಗಾರಣ, ಅಪಿತತ್ಕರಣ, ಅಪಿತದ್ಭಾಷಣ ಮುಂತಾದ ಅಪರ ನೀತಿಬಾಹ್ಯ ಆಚರಣೆಗಳು ಶ್ರೀ ರಾಮಾನುಜಾದಿ-ಆಚಾರ್ಯ ರಿಂದ ತಿರಸ್ಕರಿಸಲ್ಪಟ್ಟವೆ.

### ನಿಂಬಾರ್ಕ-ಮತದಲ್ಲಿ ಭೇದಾಭೇದ

ಭೇದಾಭೇದವು ಕ್ರಿ. ಶ. ೧೧ ನೆಯ ಶತಮಾನದಲ್ಲಿ ಅವತರಿಸಿದ ನಿಂಬಾರ್ಕನಿಂದ ಆರಂಭ ವಾದ ಕೃಷ್ಣ-ಉಪಾಸಕ ಸಂಪ್ರದಾಯದಲ್ಲಿ ಇಂದಿಗೂ ಬಳಕೆಯಲ್ಲಿದೆ.

ನಿಂಬಾರ್ಕನು ರಾಮಾನುಜರ (ಕ್ರಿ. ಶ. ಸು. ೧೦೦೦) ಚಿತ್-ಅಚಿತ್-ಈಶ್ವರ ಎಂಬ ಮೂರು ಪದಾರ್ಥಗಳನ್ನು ಒಪ್ಪಿದ್ದಾನೆ. ಜೀವ ಚಿದ್ರೂಪ, ಜ್ಞಾನಸ್ವರೂಪ, ಜ್ಞಾನಮಯ, ಪ್ರಜ್ಞಾನಘನ, ಸ್ವಯಂಜ್ಯೋತಿ. ಜ್ಞಾನಮಯನಾದರೂ ಜ್ಞಾನಾಶ್ರಯ, ಜ್ಞಾತಾ, ಸೂರ್ಯನು ಪ್ರಕಾಶಸ್ವರೂಪನಾದರೂ ಪ್ರಕಾಶಾಶ್ರಯನಾಗಿರುವಂತೆ ಜೀವನ ಸ್ವರೂಪವೂ ಗುಣವೂ ಆದ ಜ್ಞಾನಗಳು ಜ್ಞಾನರೂಪದಿಂದ ಪರಸ್ಪರ ಅಭಿನ್ನವಾದರೂ ಧರ್ಮಧರ್ಮಿಭಾವದಿಂದ ಪರಸ್ಪರ ಭಿನ್ನ. ಭೋಗ ಮತ್ತು ಮೋಕ್ಷಪ್ರಾಪ್ತಿಯಲ್ಲಿ ಜೀವನು ಈಶ್ವರನ ಅಧೀನನೇ ಹೊರತು ಸ್ವತಂತ್ರನಲ್ಲ. ಜ್ಞಾನಮಯ ಎಂಬ ವಿಷಯದಲ್ಲಿ ಜೀವ ಮತ್ತು ಈಶ್ವರರಿಗೆ ಅಭೇದವಿದ್ದರೂ ನಿಯಮ್ಯವಾದ್ದರಿಂದ ಈಶ್ವರನಿಗಿಂತ ಬೇರೆ ಎಂದು ನಿಂಬಾರ್ಕನು ಜೀವಸ್ವರೂಪ ಪ್ರತಿಪಾದನೆಯಲ್ಲಿ ಭೇದಾಭೇದವನ್ನು ಅವಲಂಬಿಸಿದ್ದಾನೆ. ಬದ್ಧದೆಶೆಯಲ್ಲಿ ಸರ್ವವ್ಯಾಪಕನೂ ಸರ್ವಜ್ಞನೂ ಬ್ರಹ್ಮನಿಗಿಂತ ಅಣುವೂ ಅಲ್ಪನೂ ಆದ ಜೀವನು ಭಿನ್ನನಾದರೂ ಮರ-ಎಲೆ, ದೀಪ-ಪ್ರಕಾಶಗಳಂತೆ ಪ್ರಾಣಾದಿ-ಇಂದ್ರಿಯ-ಶಕ್ತಿಗಳಂತೆ ಬೇರ್ಪಡದೆ ಇರುವುದರಿಂದ ಅಭಿನ್ನ. ಇದರಂತೆ ಮೋಕ್ಷದಲ್ಲಿಯೂ ಕೂಡ ಭಗವಂತನ ಅನುಗ್ರಹದಿಂದ ಮಾಯಾಕೃತಧರ್ಮವೆನಿಸಿದ ಸಂಕುಚಿತಜ್ಞಾನವು ಅಳಿದು, ಸ್ವರೂಪವು ಲಭಿಸಿದರೂ ವ್ಯಕ್ತಿತ್ವವು ಅಳಿಯದಿರುವುದರಿಂದ ಜೀವನು ಈಶ್ವರನಿಗಿಂತ ಭಿನ್ನನೂ ಅಭಿನ್ನನೂ ಆಗಿರುತ್ತಾನೆ. ಭೋಗ ಮತ್ತು ಮೋಕ್ಷಗಳೆರಡೂ ಭೇದಾಭೇದವಾದವನ್ನು ಆಶ್ರಯಿಸಿವೆ.

### ಚೈತನ್ಯ-ಮತದಲ್ಲಿ ಅಚಿಂತ್ಯಭೇದಾಭೇದ

ಚೈತನ್ಯದೇವನು ಕ್ರಿ. ಶ. ೧೫ ನೆಯ ಶತಮಾನದಲ್ಲಿದ್ದನು. ಈತನ ಮತ ಅಚಿಂತ್ಯ ಭೇದಾಭೇದ ಎಂದು ಪ್ರಸಿದ್ಧವಾಗಿದೆ.

ಈ ಮತದಲ್ಲಿ ಭಗವಂತ ವಿಜ್ಞಾನಾನಂದವಿಗ್ರಹ, ಸತ್ಯಕಾಮ, ಸತ್ಯಸಂಕಲ್ಪ, ಸರ್ವಜ್ಞತ್ವ ಮುಂತಾದ ಅನಂತ-ಅಪರಿಮಿತ-ಗುಣಗಳುಳ್ಳವನು. ಗುಣ ಮತ್ತು ಗುಣಿ (ಗುಣವುಳ್ಳವಸ್ತು) ಗಳಿಗೆ ವಾಸ್ತವ ಭೇದವಿಲ್ಲ. ಆದ್ದರಿಂದಲೇ ಸತ್ಯಕಾಮತ್ವ ಮುಂತಾದ ಗುಣಗಳು ಭಗವಂತನಿಗಿಂತ ಬೇರೆ ಅಲ್ಲ. ಭಗವಂತನ ವಿಗ್ರಹವೂ (ಮೂರ್ತಿ) ಕೂಡ ಭಗವಂತನಿಗಿಂತ ಬೇರೆ ಅಲ್ಲ ; ಅದು ನಿತ್ಯ ಮತ್ತು ಅಪ್ರಾಕೃತ. ಹೀಗಾಗಿ ಭಗವಂತನ ಮೂರ್ತಿ ಮತ್ತು ಗುಣಗಳು ಭಗವಂತನಿಗಿಂತ ಬೇರೆ ಅಲ್ಲ ; ಈ ಭಗವಂತನೇ ಪರಬ್ರಹ್ಮ. ಇಲ್ಲಿ ರಾಮಾನುಜ ಮತದಲ್ಲಿರುವಂತೆ ಬ್ರಹ್ಮನಲ್ಲಿ 'ಸ್ವಗತಭೇದ'ವು ಒಪ್ಪಿರುವುದಿಲ್ಲ. ಅದಕ್ಕೆ ಬದಲಾಗಿ ಶಾಂಕರವೇದಾಂತದಲ್ಲಿರುವಂತೆ ಸ್ವಗತಭೇದಾಭಾವವು ಅಂಗೀಕೃತವಾಗಿದೆ. ಎಂದರೆ ಭಗವಂತನ ಅಚಿಂತ್ಯ-ಅಪರಿಮೇಯ-ಶಕ್ತಿಯಿಂದ ಆತ ಅನೇಕವಾಗಿ ತೋರಿದರೂ ಒಂದಾಗಿ ಉಳಿಯುವಿಕೆಯೇ ಇಲ್ಲಿಯ ವಿಶೇಷ !

ಅನಂತಶಕ್ತಿಯುಳ್ಳ ಭಗವಂತನಲ್ಲಿರುವ ಮುಖ್ಯ ಶಕ್ತಿಗಳು ಮೂರು ; ಸ್ವರೂಪ ಶಕ್ತಿ, ತಟಸ್ಥಶಕ್ತಿ, ಮತ್ತು ಮಾಯಾಶಕ್ತಿ ಎಂದು. ಸ್ವರೂಪಶಕ್ತಿಗೆ ಅಂತರಂಗ ಶಕ್ತಿ ಎಂದೂ ಹೆಸರು. ಜೀವಶಕ್ತಿ ಎಂಬುದೇ ತಟಸ್ಥಶಕ್ತಿ. ಮಾಯಾಶಕ್ತಿ ಪ್ರಾಕೃತ ಜಗತ್ತಿನದು. ಇವೆರಡೂ ಬಹಿರಂಗ. ಸ್ವರೂಪ ಶಕ್ತಿಯಿಂದ ಭಗವಂತನು ಜಗತ್ತಿಗೆ ನಿಮಿತ್ತಕಾರಣ. ಮಾಯೆ ಮತ್ತು ಜೀವಶಕ್ತಿಗಳಿಂದ ಉಪಾದಾನಕಾರಣ. ಆದ್ದರಿಂದ ಭಗವಂತನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣ ; ಜೇಡಹುಳು ಕಟ್ಟುವ ಬಲೆಗೆ ಅದರ ಎಂಜಲು ಉಪಾದಾನವೂ ತಾನು ನಿಮಿತ್ತವೂ ಆಗಿರುವಂತೆ. ಜಗತ್ತು ಭಗವಂತನ ಬಹಿರಂಗಭೂತಮಾಯಾ ಮತ್ತು ಜೀವಶಕ್ತಿಗಳ ವಿಲಾಸಸ್ವರೂಪವಾದ್ದರಿಂದ

ಅದು ಸತ್ಯ. ಪ್ರಳಯವಲ್ಲಿಯೂ ಈ ಜಗತ್ತು ಭಗವಂತನಲ್ಲಿ ಸೂಕ್ಷ್ಮರೂಪದಿಂದ ಅಡಗಿರುತ್ತದೆ. ಅವನ ಅಚಿಂತ್ಯಶಕ್ತಿಯಿಂದ ಜಗತ್ತು ಭಗವಂತನಿಗಿಂತ ಪೂರ್ಣವಾಗಿ ಭಿನ್ನವೂ ಅಲ್ಲ ; ಅಭಿನ್ನವೂ ಅಲ್ಲ. ಆದ್ದರಿಂದಲೇ ಚೈತನ್ಯ-ಮತವು ಅಚಿಂತ್ಯಭೇದಾಭೇದ.

**ದಕ್ಷಿಣದೇಶದ ಸ್ವತಂತ್ರ-ಶಿವಾದ್ವೈತದರ್ಶನ**

ಸ್ಕಂದ-ನಂದಿಪರಂಪರೆಗೆ ಸೇರಿದ ಶೈವದರ್ಶನವು ಭಾರತದ ದಕ್ಷಿಣದಲ್ಲಿ ತಿರುನಾಡುತರ್ಕೈ, ಧರ್ಮಪುರ, ಆದಿತ್ಯಪುರವೇ ಮೊದಲಾದ ದ್ರಾವಿಡ ದೇಶದಲ್ಲಿರುವ ಶೈವಮಠಗಳಲ್ಲಿ ಬಳಕೆಯಲ್ಲಿದೆ.

ಈ ದರ್ಶನಕ್ಕೆ ಕಾಮಿಕಾದಿ-ಶೈವಾಗಮಗಳು ಆಧಾರ. ಶಿವ ಮೊದಲು ಪೃಥಿವಿವರೆಗಿನ ಮೂವತ್ತಾರು ತತ್ತ್ವಬೋಧನದಿಂದ ಪುರುಷನಿಗೆ ಶಿವನಿಗಿಂತ ಬೇರೆಯಲ್ಲವೆಂಬ ಅರಿವಾಗಿ ಶಿವಸ್ವರೂಪ ವನ್ನು ಹೊಂದಿಸುವ ಮತ್ತು ಜಗತ್ಕಾರಣತ್ವಾದಿಗಳಲ್ಲಿ ಸ್ವಲ್ಪ ಸ್ವಲ್ಪ ಶೈವದರ್ಶನಕ್ಕಿಂತ ಭಿನ್ನ ಕ್ರಮ ವನ್ನು ಇದು ಉಪದೇಶಿಸುತ್ತದೆ. [ಭೂಮಿಕೆ ಪು. ೧೦೭-೧೧೦ ನೋಡಿ]

೧೨

## ಶೈವವಿಶಿಷ್ಟಾದ್ವೈತ

ಶೈವ-ವಿಶಿಷ್ಟಾದ್ವೈತಪ್ರವರ್ತಕರು ಶ್ರೀಕಂಠ ಶಿವಾಚಾರ್ಯರು. (ಕ್ರಿ. ಶ. ಸು. ೧೦೦೦) ಇವರು ಭೇದಾಭೇದವನ್ನು ಚೆನ್ನಾಗಿ ಬಲ್ಲವರು ; ಎಂಬ ವಿಷಯವು ಇಲ್ಲಿ ಪ್ರಸ್ತುತವಲ್ಲ. ಏಕೆಂದರೆ– ಅವರು ಭೇದಾಭೇದವನ್ನು ಮುಕ್ತಕಂಠದಿಂದ ಖಂಡಿಸಿದ್ದಾರೆ.

"ಭೇದಾಭೇದಕಲ್ಪನಂ ವಿಶಿಷ್ಟಾದ್ವೈತಂ ಸಾಧಯಾಮಃ" ಎಂಬ ಅವರ ಉಕ್ತಿ ಇದನ್ನು ಸಮರ್ಥಿಸುತ್ತದೆ.

"ನ ಚ ಭೇದಾಭೇದವಾದಿನಃ, ವಸ್ತು ವಿರೋಧಾತ್; ಕಿಂ ತು ಶರೀರಶರೀರಿಣೋರಿವ ಗುಣ-ಗುಣಿನೋರಿವ ವಿಶಿಷ್ಟಾದ್ವೈತವಾದಿನಃ" (ಶ್ರೀಕಂಠಭಾಷ್ಯ. ೨-೨-೩೧) ಎಂಬುದು ಅವರ ದೃಷ್ಟಿ.

ಭೇದಾಭೇದವಾದಿ-ಮತದಲ್ಲಿ ಬ್ರಹ್ಮತ್ವರೂಪದಿಂದ ಅದ್ವೈತವೂ ಭೋಕ್ತೃಭೋಗ್ಯರೂಪ-ದಿಂದ ದ್ವೈತವೂ ಒಪ್ಪಿರುವುದರಿಂದ ಅವುಗಳಿಗೆ ಪರಸ್ಪರ ವಿರೋಧವಿಲ್ಲವೆಂದು ಹಿಂದೆಯೇ ಹೇಳಿದೆ. ಇದನ್ನೇ ಆಶ್ಮರಥ್ಯ, ಭರ್ತೃಪ್ರಪಂಚ ಮತ್ತು ಭಾಸ್ಕರರು ಕಾರಣರೂಪದಿಂದ ಅಭೇದ, ಕಾರ್ಯರೂಪ ದಿಂದ ಭೇದ ಎಂದು ಬೇರೆ ಶಬ್ದಗಳಿಂದ ಹೇಳಿದ್ದು.

**ಶ್ರೀಕಂಠಮತಕ್ಕೂ ಮತ್ತು ಲಕುಲೀಶಪಾಶುಪತಮತಕ್ಕೂ ಇರುವ ಕೆಲವು ಹೋಲಿಕೆಗಳು**

೧. ಪತಿ ಎಂದು ಕರೆಯಲ್ಪಡುವ ಬ್ರಹ್ಮವು ಸಗುಣ ; ಶಕ್ತಿಯು ಬ್ರಹ್ಮದ ಗುಣ ಅಥವಾ ಧರ್ಮ. "ಯದೇತತ್ ಪತ್ಯುಃ ಪತಿತ್ವಂ ಶಕ್ತಿಃ ಸಾಮರ್ಥ್ಯಮೈಶ್ವರ್ಯಂ ಸ್ವಗುಣಃ ಸದ್ಭಾವಃ ಸತತ್ತ್ವಂ ತತ್ತ್ವಧರ್ಮಃ ತತ್ ಆಸನಂ ... ಅತೋಽವ್ಯಯೋಽಮೃತೋ ಭಗವಾನ್ ಕಾಮತಃ ಸ್ವಶ-ಕ್ತಿಸ್ಥಂ ಕಾರ್ಯಂ ಸ್ವಶಕ್ತ್ಯಾಽಧ್ಯಾಸ್ತೇ" [ರಾಶೀಕರನ ಪಾ ಸೂ. ಪು. ೫೮].

೨. **ಸತ್ಕಾರ್ಯವಾದ.** ಶ್ರೀಕಂಠಶಿವಾಚಾರ್ಯರು ಇಷ್ಟತ್ತೆಂಟು ಶಿವಾಗಮಗಳ ಪ್ರಾಮಾಣ್ಯವನ್ನು ಪತಿ-ಪಶು-ಪಾಶ ಎಂಬ ತತ್ತ್ವತ್ರಯವನ್ನು ಸಿದ್ಧಾಂತ ಶೈವದಂತೆ ಒಪ್ಪಿದ್ದಾರೆ. ಆದರೆ ಲಕುಲೀಶ ಮತದಲ್ಲಿ ಕಾರ್ಯವೆನಿಸಿ ಚಿತ್-ಅಚಿತ್ ಎಂದು ಕರೆಯುವ ಚೇತನಾಚೇತನರೂಪ ವಾದ ಜೀವ-ಜಗತ್ತುಗಳಿಗೆ ಪತಿಗಿಂತ ಬೇರೆ ಸ್ವತಂತ್ರಸತ್ತೆಯನ್ನು ಒಪ್ಪುವುದಿಲ್ಲ : ಬದಲಾಗಿ ಲಕುಲೀಶನ ಭೇದಾಭೇದವದಂತೆ ಜೀವ-ಜಗತ್ತುಗಳು ಪತಿಶಕ್ತಿಯಲ್ಲಿರುವುದಾಗಿ ಒಪ್ಪುತ್ತಾನೆ. ಒಟ್ಟಿನಲ್ಲಿ ಚಿದಚಿತ್ತುಗಳೆಂಬ ಪಶು-ಪಾಶಗಳು ಶರೀರಿಗೆ ಹಾರ್ಯ-ಧಾರ್ಯ-ಕಾರ್ಯಗಳು, ಪತಿಗೆ ಪ್ರಧಾನವಲ್ಲ- ಗೌಣ ; ಇದನ್ನು ಸಮರ್ಥಿಸುವ ರಾಶೀಕರನ ಉಕ್ತಿ ಇದು- "ಕಾರ್ಯಸ್ಯ ರುಪ್ರೇ ಹಾರ್ಯ-ಧಾರ್ಯ-ಕಾರ್ಯಖ್ಯಾಪನಾರ್ಥಂ" [ಪಾ. ಸು. ಪು. ೬೪].

೩. **ಕಾರ್ಯ-ಕಾರಣಗಳಿಗೆ ಅಪೃಥಕ್‌ಸಿದ್ಧತ್ವ ;** ಎಂದರೆ- ಶ್ರೀಕಂಠ ಮತದಲ್ಲಿ ಕಾರ್ಯ-ಕಾರಣಗಳಿಗೆ-ಪೃಥಕ್‌ಸಿದ್ಧಿ ಇಲ್ಲ. ಜಗತ್ತಿನ ಜನ್ಮ-ಸ್ಥಿತಿ-ಪ್ರವೃತ್ತಿಗಳು ಬ್ರಹ್ಮನಿಗೆ ಅಪೃಥಕ್-ಸಿದ್ಧವಾದ್ದರಿಂದ ಜಗತ್ತು ಬ್ರಹ್ಮನಿಗಿಂತ ಬೇರೆ ಅಲ್ಲವೆಂಬುದೂ ಲಕುಲೀಶ-ಪಾಶುಪತಮತವನ್ನು ಅನುಸರಿಸಿಯೇ ಇದೆ.

ಪಾಲಕನು ನಿತ್ಯ ; ಪಾಲಕನು ನಿತ್ಯನಾದ್ದರಿಂದ ಅವನು ಪಾಲಿಸುವ ಜೀವ-ಜಗತ್ತುಗಳೂ ನಿತ್ಯವೇ. ಪಾಲ್ಯವೇ ಇಲ್ಲದಲ್ಲಿ ಪಾಲಕನು ಹೇಗಾದಾನು ? [ಪಾ. ಸೂ. ಪು. ೬೦]

೪. **ಅಂತರ್ಗಣಿಕಭೇದ** [1] – ಎಂದರೆ ಶಿವನಲ್ಲಿ ಅಂತರ್ಗತವಾಗಿರುವ ಪಶು-ಪಾಶವೆಂಬ ಗಣಭೇದ. ಇದನ್ನು ಶ್ರೀಕಂಠಶಿವಾಚಾರ್ಯರೂ ಒಪ್ಪಿರುವರು ; ಎಂಬ ಅಂಶವು ಶ್ರೀಕಂಠಭಾಷ್ಯ ಟೀಕೆ (ಅಪ್ಪಯ್ಯ ದೀಕ್ಷಿತ ವಿರಚಿತ ಶಿವಾರ್ಕಮಣಿ ದೀಪಿಕಾ ಪು. ೩೧) ಯಿಂದ ವೇದ್ಯವಾಗುತ್ತದೆ. ಇದನ್ನೇ ರಾಮಾನುಜರು 'ಸ್ವಗತಭೇದ' ಎಂದಿರುವುದು.

## ದ್ವೈತಶೈವ-ಸಿದ್ಧಾಂತದ ಪ್ರಭಾವ

ಹಿಂದೆ ಹೇಳಿದ ಅಂಶಗಳಲ್ಲಿ ಶ್ರೀಕಂಠಶಿವಾಚಾರ್ಯರು ಲಕುಲೀಶ-ದರ್ಶನದಿಂದ ಪ್ರಭಾವಿತ ರಾಗಿರುವರಲ್ಲದೆ ಅವರು ಸಂಪೂರ್ಣವಾಗಿ ದ್ವೈತಶೈವ-ಸಿದ್ಧಾಂತಪ್ರಭಾವಶೂನ್ಯರಾಗಿರಲಿಲ್ಲ; ಏಕೆಂದರೆ ಶ್ರೀಕಂಠದರ್ಶನವು ದ್ವೈತಶೈವಸಿದ್ಧಾಂತದಿಂದ ಪತಿ-ಪಶು-ಪಾಶ ಎಂಬ ಪದಾರ್ಥತ್ರಯವನ್ನು ಮಾತ್ರವೇ ಅಲ್ಲದೆ ಜೀವನ ಅಣುತ್ವ, ಶಿವಸಾಮ್ಯರೂಪ ಮೋಕ್ಷ, ಮೋಕ್ಷದಲ್ಲಿ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವಗಳ ಅಭಿವ್ಯಕ್ತಿವಾದ ಮೊದಲಾದುವನ್ನು ಸ್ವೀಕರಿಸಿದೆ.

ಇದರಿಂದ ಸ್ಪಷ್ಟಪಡುವುದೇನೆಂದರೆ- ಸೃಷ್ಟಿಯಲ್ಲಿ ಸ್ಥೂಲರೂಪದಿಂದಲೂ ಪ್ರಳಯದಲ್ಲಿ ಸೂಕ್ಷ್ಮರೂಪದಿಂದಲೂ ಪತಿಯಲ್ಲಿ ಅಡಗಿ ಹಾರ್ಯ-ಧಾರ್ಯ-ಕಾರ್ಯಗಳಲ್ಲಿ ಅಸ್ವತಂತ್ರವಾಗಿರುವುದ ರಿಂದಲೇ ಗೌಣವೆನಿಸಿರುವ, ಪತಿಗೆ ಅವಿನಾಭೂತವೂ, ಅಪೃಥಕ್ ಸಿದ್ಧವೂ, ಪರಸ್ಪರಭಿನ್ನವೂ ಆದ

---

[1] ಗಣಃ- ಸಮೂಹಃ, ಅಂತರ್ವಿದ್ಯಮಾನೋ ಗಣಃ, ಅಂತರ್ಗಣಃ । ಅಂತರ್ಗಣೇ ವಿದ್ಯತ ಇತಿ ಅಂತರ್ಗಣಿಕಃ । ಅಂತರ್ಗಣಿಕಶ್ಚಾಸೌ ಭೇದಶ್ಚ ಅಂತರ್ಗಣಿಕಬೇದಃ। ಶಿವಾಂತರ್ಗತ ಪಶುಪಾಶ ರೂಪಗಣನಿಷ್ಠಃ ।

ಜಡಚೇತನಗಳಿಗೆ ಮತ್ತು ಪತಿಗೆ ಅವಿನಾಭೂತವಾದ ಶಕ್ತಿಗೆ ವಿಶೇಷಣತ್ವವನ್ನು ಮಾತ್ರ ಹೇಳುವುದರ ಮೂಲಕ ಲಕುಲೀಶ-ಭೇದಾಭೇದಕ್ಕಿಂತ ಶ್ರೀಕಂಠ ವಿಶಿಷ್ಟಾದ್ವೈತವು ವೈಶಿಷ್ಟ್ಯವನ್ನು ಪಡೆದಿದೆ. ರಾಮಾನುಜರ ವಿಶಿಷ್ಟಾದ್ವೈತವೂ ಸಹ ಶ್ರೀಕಂಠರ ಸರಣಿಯನ್ನೇ ಅನುಸರಿಸಿದೆ.

**ರಾಮಾನುಜೀಯವಿಶಿಷ್ಟಾದ್ವೈತದ ಮುಖ್ಯಾಂಶಗಳು**

ರಾಮಾನುಜಾಚಾರ್ಯರು ತಮ್ಮ ಗುರು ಯಾದವಪ್ರಕಾಶರು ಒಪ್ಪಿದ್ದ "ಚಿದಚಿದೀಶ್ವರ ಕಾರಣಂ ಬ್ರಹ್ಮ" ಎಂಬ ವಾದವನ್ನು ಒಪ್ಪಿಲ್ಲವಾದರೂ ರಾಮಾನುಜಮತವು ಚಿತ್-ಅಚಿತ್-ಈಶ್ವರ ಎಂಬ ತ್ರಿಕವನ್ನು ಒಪ್ಪಿದೆ. ಈ ಸಿದ್ಧಾಂತದಲ್ಲಿ ಬ್ರಹ್ಮವು ಈಶ್ವರನಿಗಿಂತ ಬೇರೆ ಅಲ್ಲ; ಈಶ್ವರನೇ ಪರಮಕಾರಣ; ಮತ್ತು ಪರಮದ್ರವ್ಯ. ಸತ್ಕಾರ್ಯವಾದಕ್ಕೆ ಅನುಗುಣವಾಗಿ ಎಲ್ಲ ಕಾರ್ಯವೂ ಕಾರಣದಲ್ಲಿ ಸೂಕ್ಷ್ಮರೂಪದಿಂದ ಇರುತ್ತದೆ. ಅವಸ್ಥಾಂತರಾಪತ್ತಿಯೇ ಪರಿಣಾಮ. ಅದೇ ಕಾರ್ಯತ್ವ; ಸ್ವಗತಭೇದ; ಅಪೃಥಕ್-ಸಿದ್ಧಿಸಂಬಂಧ ಮತ್ತು ವಿಶೇಷಣ ಲಕ್ಷಣ ಎಂಬುದು ರಾಮಾನುಜರ ವಿಶಿಷ್ಟಾದ್ವೈತವಾದ.

### ೧. ಈಶ್ವರ

ಎಲ್ಲ ಅನುಭವವೂ ಸಗುಣ-ಸವಿಶೇಷವಸ್ತುವಿಷಯಕವಾದದ್ದು. ಎಲ್ಲ ಪ್ರಮಾಣಗಳೂ ಸವಿಶೇಷವಿಷಯಕಗಳು. "ನಿರ್ವಿಶೇಷವಸ್ತು" ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ನಿರ್ವಿಕಲ್ಪಕ-ಪ್ರತ್ಯಕ್ಷದಲ್ಲಿಯೂ ಸವಿಶೇಷವಸ್ತುವೇ ತೋರುತ್ತದೆ.

ಸಾಕ್ಷಾತ್ಕಾರಕ್ಷಣೇಽಪ್ಯಸ್ತಿ ವಿಮರ್ಶಃ ಕಥಮನ್ಯಥಾ ।
ಧಾವನಾದ್ಯುಪಪದ್ಯೇತ ಅನುಸಂಧಾನವರ್ಜಿತಮ್ ॥

[ಉತ್ಪಲದೇವ]

ಆದ್ದರಿಂದ ಶ್ರೀರಾಮಾನುಜರು ನಿರ್ಗುಣಬ್ರಹ್ಮಕಲ್ಪನವು ಅನುಭವವಿರುದ್ಧ ಮತ್ತು ಅಪ್ರಮಾಣ ಎಂದು ಹೇಳಿ ಬ್ರಹ್ಮವು ಸಗುಣ ಮತ್ತು ಅದೇ 'ಈಶ್ವರ' ಎಂದಿದ್ದಾರೆ.

ಒಟ್ಟಿನಲ್ಲಿ ಈಶ್ವರ ಪ್ರಾಕೃತಗುಣರಹಿತ. ಕಲ್ಯಾಣಗುಣಾಕರ, ಅನಂತಜ್ಞಾನಾನಂದ ಸ್ವರೂಪ, ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳು ಅವನ ಇಚ್ಛೆಯ ಅಧೀನ. ಅವನು ಸಕಲಸಜಾತೀಯ-ವಿಜಾತೀಯಭೇದಶೂನ್ಯನಾದರೂ ಸ್ವಗತಭೇದವುಳ್ಳವನು. ಅಪೃಥಕ್-ಸಿದ್ಧಿಸಂಬಂಧವುಳ್ಳವುಗಳಾದ್ದರಿಂದಲೇ ತನಗೆ ಶರೀರವಾಗಿರುವ ಚಿದಚಿತ್ತುಗಳಿಗೆ ಪರಸ್ಪರ ಭೇದವನ್ನು ಈ ಸಿದ್ಧಾಂತ ಒಪ್ಪಿದೆ.

### ೨. ಅಪೃಥಕ್-ಸಿದ್ಧಿಸಂಬಂಧ

ಅಪೃಥಕ್ - ಸಿದ್ಧಿಸಂಬಂಧಕಲ್ಪನವೇ ರಾಮಾನುಜೀಯ - ವಿಶಿಷ್ಟಾದ್ವೈತ - ಸಿದ್ಧಾಂತಕ್ಕೆ ಆಧಾರ. ಎಂದರೆ ಈ ಸಿದ್ಧಾಂತದಲ್ಲಿ "ಶರೀರಿ" ಎನಿಸಿರುವ ಚಿತ್ "ಶರೀರ" ದಿಂದ ಎಂದಿಗೂ ಬೇರೆ (ಪೃಥಕ್) ಇರುವುದಿಲ್ಲ. ಸಂಸಾರದಶೆಯಲ್ಲಿ "ಸ್ಥೂಲಶರೀರ" ದೊಡನೆ ಇರುವಂತೆ ಪ್ರಳಯದಲ್ಲಿ "ಸೂಕ್ಷ್ಮಶರೀರ" ದೊಡನೆಯೂ, ಮೋಕ್ಷದಲ್ಲಿಯೂ ಸಹ "ಶುದ್ಧಸತ್ವಶರೀರ" ದೊಡನೆ ಚಿತ್ತಿಗೆ ಸಂಬಂಧವನ್ನು ಒಪ್ಪಲಾಗಿದೆ. ಶರೀರಿಯು ಶರೀರವನ್ನು ಧರಿಸಿದ್ದಾನೆ; ನಿಯಮಿಸುತ್ತಾನೆ; ಮತು

ತನ್ನ ಉಪಭೋಗಕ್ಕಾಗಿ ಅದನ್ನು ಕಾರ್ಯದಲ್ಲಿ ಪ್ರವರ್ತಿಸುತ್ತಾನೆ. ಆದ್ದರಿಂದ ಶರೀರಕ್ಕೆ ಶರೀರಿಯೊಡನೆಯೂ, ಚಿದಚಿತ್ತುಗಳಿಗೆ ಈಶ್ವರನೊಡನೆಯೂ ಸಂಬಂಧವನ್ನು ಒಪ್ಪಲಾಗಿದೆ. ಏಕೆಂದರೆ ಶರೀರಿಯು ಶರೀರವನ್ನು ಧರಿಸಿರುವಂತೆ ಈಶ್ವರನು ಚಿದಚಿತ್ತುಗಳನ್ನು ಧರಿಸಿದ್ದಾನೆ; ನಿಯಮಿಸುತ್ತಾನೆ ಮತ್ತು ಪ್ರೇರಿಸುತ್ತಾನೆ. ಇದೇ ಅಪೃಥಕ್‌ಸಿದ್ಧಿ. "ನಾಸ್ತಿ ಪೃಥಕ್ ಸಿದ್ಧಿರ್ಯಯೋರ್ಯೇಷಾಂ ವಾ ತಯೋಸ್ತೇಷಾಂ ವಾ ಸಂಬಂಧೋಽಪೃಥಕ್-ಸಿದ್ಧಿ ಸಂಬಂಧಃ" ಎಂಬುದು ಈ ಶಬ್ದದ ನಿರ್ವಚನ.

ಈಶ್ವರನು ಎಂದಿಗೂ ಚಿದಚಿತ್ತುಗಳಿಗಿಂತ ಬೇರೆ ಇರುವುದಿಲ್ಲ ; ಅದರಂತೆ ಚಿದಚಿತ್ತುಗಳೂ ಸಹ ಈಶ್ವರನನ್ನು ಬಿಟ್ಟಿರುವುದಿಲ್ಲ. ಈ ಸಂಬಂಧವು ನ್ಯಾಯ-ವೈಶೇಷಿಕರು ಒಪ್ಪಿರುವ ಸಮವಾಯ ಸಂಬಂಧವಲ್ಲ. ಏಕೆಂದರೆ ಸಮವಾಯಸಂಬಂಧವು ಗುಣ-ಗುಣಿಗಳಿಗೆ ಇರುವಂತೆ ಅಯುತಸಿದ್ಧವೃತ್ತಿಯಾದ ನಿತ್ಯಸಂಬಂಧ. ಇಲ್ಲಿ ಗುಣವು ಯಾವಾಗಲೂ ಗುಣಿಯನ್ನು ಬಿಟ್ಟಿರುವುದಿಲ್ಲ ; ಗುಣಿಯೂ ಸಹ ಗುಣದ ಸಂಬಂಧವಿಲ್ಲದಿದ್ದರೆ ಗುಣಿ ಎನಿಸಲಾರದು. ಆದರೆ, ನ್ಯಾಯ-ವೈಶೇಷಿಕಸಿದ್ಧಾಂತದಲ್ಲಿ–ಹುಟ್ಟುವ ದ್ರವ್ಯವು ಮೊದಲ ಕ್ಷಣದಲ್ಲಿ ನಿರ್ಗುಣವೂ ನಿಷ್ಕ್ರಿಯವೂ ಆಗಿರುತ್ತದೆ. ಅದರಂತೆ ಎಂದಿಗಾದರೂ, ಹೇಗಾದರೂ ಈಶ್ವರನಿಗೆ ನಿರ್ಗುಣತ್ವವು ಇರಬಲ್ಲುದೆ ? ಆದ್ದರಿಂದ ಇಲ್ಲಿ ಈಶ್ವರ ಮತ್ತು ಚಿದಚಿತ್ತುಗಳಿಗೆ ಸಮವಾಯ ಸಂಬಂಧವನ್ನು ಒಪ್ಪಿಲ್ಲ. ಹಾಗೆಯೇ ಒಂದೇ ಗುಣಕ್ಕೆ ಅನೇಕಗುಣಿ (ದ್ರವ್ಯ)ಗಳ ಸಂಬಂಧವೂ ಉಂಟು. ಉದಾ– ನೀಲ ಎಂಬ ಗುಣವು ಕೇವಲ ನೈದಿಲೆಯಲ್ಲಿಯೇ ಅಲ್ಲದೆ ಘಟಾದಿಗಳಲ್ಲಿಯೂ ಇರುತ್ತದೆ. ಗುಣಿಯಾದ ಈಶ್ವರನಿಗೆ ಚಿದಚಿತ್ತುಗಳ ವಿಯೋಗವು ಎಂದಿಗೂ ಆಗುವುದಿಲ್ಲ. ಚಿದಚಿತ್ತುಗಳೂ ಸಹ ಈಶ್ವರನ ಹೊರತು ಬೇರೆಯವರೊಡನೆ ಸಂಬಂಧವನ್ನು ಹೊಂದುವುದಿಲ್ಲ ; ಏಕೆಂದರೆ ಬಾಹ್ಯವೆಂಬುದೇ ಇಲ್ಲವಾದ್ದರಿಂದ ಇಲ್ಲಿ ಅಪೃಥಕ್-ಸಿದ್ಧಿ ಸಂಬಂಧವನ್ನು ಒಪ್ಪಲಾಗಿದೆ.

## ೩. ವಿಶೇಷಣ ಸ್ವರೂಪ

ಅಪೃಥಕ್‌ಸಿದ್ಧಿ ಸಂಬಂಧವುಳ್ಳವುಗಳಲ್ಲಿ ಯಾವ ಆಧೇಯವು ನಿಯಮ್ಯವೂ ನಿಯೋಜ್ಯವೂ ಗೌಣವೂ ಆಗಿದೆಯೋ ಅದು ವಿಶೇಷಣ. ಆಧಾರವು ನಿಯಾಮಕವೂ ನಿಯೋಜಕವೂ ಮುಖ್ಯವೂ ಆದ್ದರಿಂದ ಅದು ವಿಶೇಷ್ಯ. ಚಿದಚಿದೀಶ್ವರರಲ್ಲಿ ಈಶ್ವರನು ನಿಯಾಮಕನಾದ್ದರಿಂದ ಅವನು ಪ್ರಧಾನ ಹಾಗೂ ವಿಶೇಷ್ಯ. ಚಿದಚಿತ್ತುಗಳು ನಿಯಮ್ಯವಾದ್ದರಿಂದ ಗೌಣವೂ ವಿಶೇಷಣವೂ ಎನಿಸಿವೆ. ಆದ್ದರಿಂದ ವಿಶೇಷ್ಯಭೂತನಾದ ಈಶ್ವರನಿಗೆ ಚಿದಚಿತ್ತುಗಳು ವಿಶೇಷಣ.

## ೪. ಅದ್ವೈತ

"ಏಕತ್ವಂ ಚ ಅಪೃಥಕ್-ಸಿದ್ಧಿಃ" ಎಂಬುದು ರಾಮಾನುಜೀಯ ಮತ. ಚಿದಚಿದೀಶ್ವರರಿಗೆ ಅಪೃಥಕ್-ಸಿದ್ಧಿಸಂಬಂಧವಿರುವುದರಿಂದ ವಿಶಿಷ್ಟನಾದ ಈಶ್ವರನಿಗೆ ಅದ್ವೈತ ಎಂದರೆ ಏಕತ್ವ (ಅಭೇದ) ವನ್ನು ರಾಮಾನುಜಮತವು ಒಪ್ಪಿದೆ. ಆದ್ದರಿಂದ ಶರೀರಕ್ಕೆ ಶರೀರಿಯೊಡನೆಯೂ, ವಿಶೇಷಣಕ್ಕೆ ವಿಶೇಷ್ಯದೊಡನೆಯೂ ಅಂಶಗಳಿಗೆ ಅಂಶಿಯೊಡನೆಯೂ ಅಪೃಥಕ್-ಸಿದ್ಧಿಸಂಬಂಧ (ಏಕತ್ವ) ವನ್ನು ಒಪ್ಪುವುದರಿಂದ ರಾಮಾನುಜೀಯಮತವು ವಿಶಿಷ್ಟಾದ್ವೈತ.

## ೫. ಸ್ವಗತಭೇದ

ಚಿದಚಿತ್ತುಗಳಾದ ಜಗಜ್ಜೀವರು ನಿತ್ಯರು ಮತ್ತು ಪರಸ್ಪರ ಭಿನ್ನರು. ಆದರೆ ಅವರಿಗಿರುವ ಭೇದವು ಅವರಿಗೆ ಸಮಾನಾಧಾರವಾಗಿರುವ ಈಶ್ವರನಲ್ಲಿ ಅಂತರ್ಗತವಾಗಿರುತ್ತದೆ. ಸ್ವತಂತ್ರನಾದ

ಈಶ್ವರನಿಗಿಂತ ಹೊರಗೆ ಅವರಿಗೆ ಬೇರೆ ಅಸ್ತಿತ್ವ ಇಲ್ಲ. ಈಶ್ವರನಲ್ಲಿಯೇ ಅವರು ಪರಸ್ಪರ ಭಿನ್ನ ರಾಗಿರುತ್ತಾರೆ. ಆದ್ದರಿಂದ ಅವರ ಭೇದವೂ ಸಹ ಈಶ್ವರಾಂತರ್ಗತ. ಇದೇ ಸ್ವಗತಭೇದ. ಆದ್ದರಿಂದ ಈ ಮತದಲ್ಲಿ ಈಶ್ವರನು ಸಜಾತೀಯ ವಿಜಾತೀಯ ಭೇದರಹಿತನಾದರೂ ಸ್ವಗತ ಭೇದರಹಿತನಲ್ಲ.

ಈ ಜಗಜ್ಜೀವರು ಈಶ್ವರನಲ್ಲಿ ಎರಡು ಅವಸ್ಥೆಗಳಲ್ಲಿ ಇರುತ್ತಾರೆ ; ಅವೇ ಸ್ಥೂಲಾವಸ್ಥೆ ಮತ್ತು ಸೂಕ್ಷ್ಮಾವಸ್ಥೆಗಳು. ಸೃಷ್ಟಿಯಲ್ಲಿ ಅವರಿಗೆ ಸ್ಥೂಲಾವಸ್ಥೆ, ಆದ್ದರಿಂದ ಸ್ಥೂಲ ಚಿದಚಿದೀಶ್ವರ ಅಥವಾ ತದ್ವಿಶಿಷ್ಟ ಈಶ್ವರ ಕಾರ್ಯಾವಸ್ಥೆಯ ಬ್ರಹ್ಮ ಎನಿಸುತ್ತಾನೆ. ಪ್ರಳಯದಲ್ಲಿ ಸೂಕ್ಷ್ಮಾವಸ್ಥೆ ; ಆದ್ದರಿಂದ ಸೂಕ್ಷ್ಮ ಚಿದಚಿದೀಶ್ವರನು ಕಾರಣಾವಸ್ಥೆಯ ಬ್ರಹ್ಮ ಎನಿಸುವನು. ಒಟ್ಟಿನಲ್ಲಿ ಈಶ್ವರನು ಎಂದಿಗೂ ವಿಶೇಷಶೂನ್ಯನಲ್ಲ. ಒಟ್ಟನಲ್ಲಿ ಪರಮತತ್ತ್ವವು ಯಾವಾಗಲೂ ಸವಿಶೇಷವಾದ್ದರಿಂದ ರಾಮಾನುಜೀಯ ದರ್ಶನವು ವಿಶಿಷ್ಟಾದ್ವೈತ.

**ಶ್ರೀಕಂಠ ಮತ್ತು ರಾಮಾನುಜ ವಿಶಿಷ್ಟಾದ್ವೈತಗಳಿಗಿರುವ ಹೋಲಿಕೆ**

ಶ್ರೀಕಂಠಶಿವಾಚಾರ್ಯರ ಶೈವವಿಶಿಷ್ಟಾದ್ವೈತದ ಮೇಲೆ ಲಕುಲೀಶನ ದ್ವೈತಾದ್ವೈತದ ಪ್ರಭಾವವು ಬಹಳವಾಗಿ ಕಂಡುಬರುತ್ತದೆ. ಆದ್ದರಿಂದಲೇ ಈ ಮತವು ಬ್ರಹ್ಮನ ಸಗುಣತ್ವ, ಸತ್ಕಾರ್ಯವಾದ, ಕಾರ್ಯಕಾರಣಗಳಿಗೆ ಅಪೃಥಕ್‌ಸಿದ್ಧತ್ವ. ಆಂತರ್ಗಣಿಕಭೇದ, ಪಶು-ಪತಿ ಅಥವಾ ಕಾರ್ಯ-ಕಾರಣಗಳಿಗೆ ಗುಣ-ಪ್ರಧಾನ ಭಾವಗಳನ್ನು ಸ್ವೀಕರಿಸಿ, ಗುಣಭೂತವೂ, ಪತಿಗೆ ಅವಿನಾಭೂತವೂ, ಪತಿಗೆ ಅಪೃಥಕ್‌ಸಿದ್ಧವೂ ಪರಸ್ಪರ ಭಿನ್ನವೂ ಆದ ಪಶು ಪಾಶ ಎನಿಸಿರುವ ಜಡ ಮತ್ತು ಚೇತನಗಳಿಗೆ : ಹಾಗೂ ಪತಿಗೆ ಅವಿನಾಭೂತವಾದ ಶಕ್ತಿಗೆ ಗುಣ ರೂಪತ್ವವನ್ನು ಹೇಳದೆ, ಗುಣವು ವಿಶೇಷಣ ಎಂದು ಭಾವಿಸಿ ವಿಶಿಷ್ಟಾದ್ವೈತವು ಸ್ಥಾಪಿತವಾಯಿತು ಆದ್ದರಿಂದ ಲಕುಲೀಶನ ದ್ವೈತಾದ್ವೈತಕ್ಕೂ, ಚಿದಚಿದ್ರೂಪವಾದ ಪಶು-ಪಾಶಗಳಿಗೆ ಈಶ್ವರನೆಂಬ ಪತಿಯೊಡನೆ ಸಂಬಂಧವುಳ್ಳ ವಿಶಿಷ್ಟಾದ್ವೈತಕ್ಕೂ ಯಾವ ವ್ಯತ್ಯಾಸವೂ ಇಲ್ಲ.

ಇನ್ನು ರಾಮಾನುಜರ ವಿಶಿಷ್ಟಾದ್ವೈತಕ್ಕೂ ಈ ಮಾತು ಅನ್ವಯಿಸುತ್ತದೆ. ಏಕೆಂದರೆ ಶ್ರೀ ರಾಮಾನುಜರು ಶ್ರೀಕಂಠಶಿವಾಚಾರ್ಯರಂತೆ ಸತ್ಕಾರ್ಯವಾದ, ಕಾರ್ಯರೂಪ ಚಿದಚಿತ್ತುಗಳಿಗೆ ಈಶ್ವರನೊಡನೆ ಅಪೃಥಕ್‌ಸಿದ್ಧತ್ವ, ಈಶ್ವರನಲ್ಲಿ 'ಸ್ವಗತಭೇದ' ಎಂಬ ಹೆಸರಿನ ಆಂತರ್ಗಣಿಕ ಭೇದ, ಮತ್ತು ಚಿದಚಿತ್ತುಗಳು ಈಶ್ವರನಿಗಿಂತ ಗೌಣವಾದ್ದರಿಂದ ಅವು ಈಶ್ವರನಿಗೆ ವಿಶೇಷಣ ಎಂದೂ ಒಪ್ಪಿದ್ದಾರೆ. ಎಂದ ಮೇಲೆ ಲಕುಲೀಶಪಾಶುಪತ ಹಾಗೂ ದ್ವೈತ ಶೈವಪಾಶುಪತಗಳ ಪ್ರಭಾವವು ಶ್ರೀಕಂಠ ಹಾಗೂ ರಾಮಾನುಜರ ವಿಶಿಷ್ಟಾದ್ವೈತಗಳ ಮೇಲೆ ಸಾಕಷ್ಟು ಆಗಿಯೇ ಇದೆ ಎಂದು ಬೇರೆ ಹೇಳಬೇಕಾಗಿಲ್ಲ.

೧೩

## ಶೈವ ವಿಶೇಷಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ದರ್ಶನ

ಈ ದರ್ಶನ ಪ್ರತಿಪಾದಕರು ಶ್ರೀಪತಿ ಪಂಡಿತಾರಾಧ್ಯ ಭಗವತ್ಪಾದಾಚಾರ್ಯರು. ವಿದ್ವನ್ಮಾನ್ಯರೂ ಆಚಾರ್ಯ ಶ್ರೇಷ್ಠರೂ ಆದ ಅವರಿಂದ ರಚಿತವಾದ ಬ್ರಹ್ಮಮೀಮಾಂಸಾ ಸೂತ್ರಗಳಿಗೆ ವ್ಯಾಖ್ಯೆಯೆನಿಸಿದ ಶ್ರೀಕರಭಾಷ್ಯವು ಶಿವಧರ್ಮ ಸಿದ್ಧಾಂತ ಸ್ಥಾಪಕವಾದ ಗ್ರಂಥಗಳಲ್ಲಿ ಪ್ರಮುಖವಾದುದು.

ಶ್ರೀಕರಭಾಷ್ಯ ರಚನೆಗೆ ಮೂಲಆಧಾರವಾಗಿರುವುದು "ಅಗಸ್ತ್ಯಸೂತ್ರವೃತ್ತಿ". ಅದನ್ನು ಭಾಷ್ಯಕಾರರು ಗ್ರಂಥದ ಮೊದಲಿನಲ್ಲಿ ಉಲ್ಲೇಖಿಸಿದ್ದಾರೆ-

ಅಗಸ್ತ್ಯಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಮ್ ।
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂಕರಮ್ ॥

ಎಂದೂ ಮುಂದೆ ಭಾಷ್ಯದಲ್ಲಿ "ಅಗಸ್ತ್ಯಮುನಿಸಾರ್ವಭೌಮೇನ ಕೃತ ಲಘುಸೂತ್ರವೃತೌ ಲಿಂಗೇ ಸುಷುಪ್ತಿರಿತ್ಯಾದಿ ಬಹುಶ್ರುತಿಷು [1]" ಎಂಬಲ್ಲಿಯೂ ಸಮರ್ಥಿಸಲಾಗಿದೆ. "ಮುನಿಚಂದ್ರವೃತ್ತಿ [2]" ಎಂಬುದು ಇದಕ್ಕೆ ಮತ್ತೊಂದು ಹೆಸರು. ಈ ವೃತ್ತಿಯು ಇಂದು ದೊರೆತಿಲ್ಲವಾದರೂ ಇದರ ಉಲ್ಲೇಖವು ಹಯವದನರಾಯರ ಶ್ರೀಕರಭಾಷ್ಯದ ಉಪೋದ್ಘಾತದಲ್ಲಿದೆ. ಅಲ್ಲಿ "**Kandūkur Bāla Sūrya prasādarow of Devidi House, Vizagapatam Possesses two palmyra-leaf Copies of this work and one copy on ordinary paper with the Sūtra-vritti**"[3] ಎಂದಿದೆ.

ಶ್ರೀಕರಭಾಷ್ಯದಲ್ಲಿ ಸಾಮಾನ್ಯವಾಗಿ ನಿಗಮ-ಆಗಮ-ಉಪನಿಷತ್-ಪುರಾಣ-ಇತಿಹಾಸ ಮೊದಲಾದ ಪ್ರಮಾಣ ಗ್ರಂಥಗಳು; (ಅವುಗಳಲ್ಲಿ ಇಂದು ಎಷ್ಟೊ ದೊರೆಯದಿರುವ ಗ್ರಂಥಗಳ ಉಲ್ಲೆಖವಿದೆ.) ಅವುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಇದರಿಂದ ಈ ಭಾಷ್ಯಕಾರರ ಬಹು ಶ್ರುತತ್ವ ಮತ್ತು ಅವರಿಗೆ ತಮ್ಮ ಶಾಸ್ತ್ರದಲ್ಲಿದ್ದ ಪ್ರಾವೀಣ್ಯವು ವೇದ್ಯವಾಗುತ್ತದೆ.

ಶಿವಾಗಮ ಪ್ರಸಿದ್ಧರಾದ ಶ್ರೀಮತ್ ರೇಣುಕಾದಿ ಆಚಾರ್ಯರು ಪ್ರಸ್ಥಾನತ್ರಯವನ್ನು ಅಧಿಕರಿಸಿ ಭಾಷ್ಯಗಳನ್ನು ಬರೆದು ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿರುವರೆಂಬ ಬಗ್ಗೆ ಈ ಭಾಷ್ಯದಲ್ಲಿ ಅಲ್ಲಲ್ಲಿ ಉಲ್ಲೇಖಗಳಿವೆ. "ಸಕಲ ಶಾಖಾಧ್ಯೇತೃಭಿಃ ವೇಮಾರಾಧ್ಯ, ಉದ್ಭಟಾರಾಧ್ಯ, ಮರುಲಸಿದ್ಧ, ರೇವಣಸಿದ್ಧಾರಾಧ್ಯಾದಿಭಿರ್ಮಹಾತ್ಮಭಿಃ ಕೃತಾತ್ ವೇದಾಂತ ಭಾಷ್ಯಾದಿಗ್ರಂಥಾತ್"[4] ಎಂಬ ಉಲ್ಲೇಖಗಳಿವೆಯಾದರೂ ಆ ಭಾಷ್ಯಗಳು ಇಂದಿಗೂ ದೊರೆತಿಲ್ಲ.

ಭಟ್ಟಭಾಸ್ಕರ, ಶ್ರೀಕಂಠಾಚಾರ್ಯರ ಸೂತ್ರಭಾಷ್ಯಗಳ ಪ್ರಭಾವ ಮತ್ತು ಶ್ರೀಭಾಷ್ಯಪಂಕ್ತಿಗಳು ಅಲ್ಲಲ್ಲಿ ಕಾಣುತ್ತವೆಯಾದರೂ ಶ್ರೀಪತಿಯ ನಿರೂಪಣಮಾರ್ಗವು ಸ್ವತಂತ್ರವಾಗಿಯೇ ಇದೆ ಎಂಬುದು ಭಾಷ್ಯಗಾಂಭೀರ್ಯದಿಂದ ವೇದ್ಯವಾಗುತ್ತದೆ. ಆದರೆ ಈ ಭಾಷ್ಯದಲ್ಲಿ ವೀರಶೈವಸಿದ್ಧಾಂತ ಪ್ರತಿಪಾದಕವಾದ ನೀಲಕಂಠಭಾಷ್ಯದ ಪ್ರಭಾವವು ಅನೇಕ ಕಡೆ ಕಾಣುತ್ತದೆಯಾದರೂ, ಆ ನೀಲಕಂಠಭಾಷ್ಯವೂ ಈಗ ಕಾಣುತ್ತಿಲ್ಲ.

---

[1] ಶ್ರೀಕರಭಾಷ್ಯ ಅ. ೪. ಪಾ. ೩ ಅಧಿ. ೪. ಸೂ. ೪. (ಪು. ೫೧೦ II)

[2] ಮುನಿಚಂದ್ರವೃತ್ತಿಯು ಕುಂಭಕೋಣದಲ್ಲಿ ದೊರೆಯುತ್ತದೆ ಎಂದು ಡಾ॥ ಜ. ಚ. ನಿ. ಅವರ "ಮಣಿಮುಕುರ" ಪೀಠಿಕೆ ಪು. ೬೭ ರಲ್ಲಿ ಸೂಚಿಸಲಾಗಿದೆ.

[3] Introduction to Srikara Bhāshya Edited by C. HayavadanaRao VOL. I P. 3. 1936.

[4] ಶ್ರೀಕರಭಾಷ್ಯ ಅ. ೩. ಪಾ. ೩. ಅಧಿ. ೧. ಸೂ. ೩. (ಪು. ೨೬೫ II)

ಹಿಂದೆ ಹೇಳಿದಂತೆ ಆನಂದಗಿರಿಯ "ಶಂಕರವಿಜಯ"ದಲ್ಲಿ "ಶಿರೋಲಿಂಗಧಾರಿ ಜಂಗಮ ಪುಂಗವ"[1] ರೆಂದೂ, ಮಾಧವಾಚಾರ್ಯರ 'ಶಂಕರದಿಗ್ವಿಜಯ'[2] ದಲ್ಲಿ "ಶಿವಸೂತ್ರ-ಬ್ರಹ್ಮಸೂತ್ರ ಭಾಷ್ಯಕರ್ತೃ"ರೆಂದೂ ವರ್ಣಿತರಾಗಿರುವ ನೀಲಕಂಠಶಿವಾಚಾರ್ಯರೇ ಹಿಂದೆ ಹೇಳಿದ "ನೀಲಕಂಠ ಭಾಷ್ಯ" ಕರ್ತೃವೆಂಬುದು ವಿದ್ವಾಂಸರ ಅಭಿಪ್ರಾಯ. ವೀರಶೈವ ಸಾಹಿತ್ಯದಲ್ಲಿ "ನೀಲಕಂಠಶಿವಾ ಚಾರ್ಯ"ರೆಂಬ ಹೆಸರಿನ ಇಬ್ಬರು ಆಚಾರ್ಯರು ಇದ್ದಾರೆ. ಅವರಲ್ಲಿ ಮೊದಲನೆಯ ನೀಲಕಂಠಶಿವಾ ಚಾರ್ಯರು ಮೊದಲನೆಯ ಶಂಕರಾಚಾರ್ಯರೊಡನೆ ಶಾಸ್ತ್ರಾರ್ಥ ನಡೆಸಿರುವ ವಿಚಾರವು ಶಂಕರ ದಿಗ್ವಿಜಯದ ಹದಿನೈದನೆಯ ಸರ್ಗದಿಂದ ತಿಳಿದುಬರುತ್ತದೆ.

"ಇತಿಯುಕ್ತಿಶತೈಃ ಸ ನೀಲಕಂಠಃ
ಕವಿರಕ್ಷ್ಣೋಭಯವದ್ವಿತೀಯಪಕ್ಷಮ್ ।
ನಿಗಮಾಂತವಚಃಪ್ರಕಾಶ್ಯಮಾನಂ
ಕೃಭಃ ಪದ್ಮವನಂ ಯಥಾ ಪ್ರಪುಲ್ಲಮ್ ॥

ಎಂಬುದರಿಂದ ಈ ನೀಲಕಂಠಶಿವಾಚಾರ್ಯರು ಆದ್ಯಶಂಕರರ (ಕ್ರಿ. ಶ. ೮೦೦) ಸಮಕಾಲೀನರು ಎಂಬುದು ಸ್ಪಷ್ಟವಾಗುತ್ತದೆ. ಈ ನೀಲಕಂಠಭಾಷ್ಯಾರ್ಥವು ಸುಲಭವಾಗಿ ತಿಳಿಯಲೆಂಬ ಉದ್ದೇಶ ದಿಂದ ಮತ್ತೊಬ್ಬ ನೀಲಕಂಠಶಿವಾಚಾರ್ಯರು (ಕ್ರಿ.ಶ.೧೪೦೦) ಅದಕ್ಕೆ ಸರಲ ಸಂಸ್ಕೃತ ಭಾಷೆಯಲ್ಲಿ ಕಾರಿಕೆಗಳನ್ನು ಬರೆದರು. ಅದೇ ಇಂದು 'ಕ್ರಿಯಾಸಾರ' ಎಂಬ ಹೆಸರಿನಿಂದ ನಮ್ಮ ಮುಂದಿದೆ. ಈ ಗ್ರಂಥದ ಮೊದಲ ನಾಲ್ಕು ಉಪದೇಶಗಳು ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಭಾಷ್ಯಸಂಗ್ರಹ. ಇದರಲ್ಲಿ:-

ನೀಲಕಂಠಶಿವಾಚಾರ್ಯನಾಮ್ನಾ ಭಾಷ್ಯಮಚೀಕರತ್ ।
ವಿಶಿಷ್ಟಾದ್ವೈತಸಿದ್ಧಾಂತಪ್ರತಿಪಾದನಮುತ್ತಮಮ್ ॥ ೩೨ ॥
ಮಯಾಽಪಿ ತಸ್ಯ ತಾತ್ಪರ್ಯಂ ಶ್ರೋತೃಣಾಂ ಸುಖಬುದ್ಧಯೇ ।
ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥ ೩೩ ॥

ಎಂದು ಹೇಳಿದೆ. ಇವರನ್ನು "ನೀಲಕಂಠಶಿವಾಚಾರ್ಯ" "ನೀಲಕಂಠ ಭಗವತ್ಪಾದ" ಮುಂತಾಗಿ ಗೌರವದಿಂದ ಸ್ಮರಿಸಿದ ಶ್ರೀಪತಿಪಂಡಿತಾರಾಧ್ಯರು "ನೀಲಕಂಠಭಾಷ್ಯೇ"[3] ಎಂದು ಅವರ ಭಾಷ್ಯ ಪ್ರಾಮಾಣ್ಯವನ್ನು ಒಪ್ಪಿದ್ದಾರೆ.

ಎರಡನೆಯದಾಗಿ ಶ್ರೀಕರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ವಿಷಯವಾಕ್ಯವಾಗಿ ತೆಗೆದು ಕೊಂಡಿರುವ "ಯಶ್ಛಂದಸಾಂ... ಅಮೃತಸ್ಯ ದೇವಧಾರಣೋ ಭೂಯಾಸಂ"[4] ಎಂಬ ಲಿಂಗಧಾರಣ ಪ್ರತಿಪಾದಕವಾದ ಮಂತ್ರವೇ ನೀಲಕಂಠಭಾಷ್ಯಕಾರಿಕೆ ಎನಿಸಿರುವ ಕ್ರಿಯಾಸಾರದಲ್ಲಿಯೂ

---

[1] 'ಶಂಕರವಿಜಯ' ಪು. ೩೭.

[2] 'ಶಂಕರದಿಗ್ವಿಜಯ' ಸ. ೧೫. ಶ್ಲೋ. ೪೯.

[3] "ಶ್ರೀಕರಭಾಷ್ಯ" ೨. ೨. ೯. ೪೨. (ಪು. ೬೮. II)

[4] ತೈ. ಶಿಕ್ಷಾ ೪. (ಪು. ೧೧.)

"ತತ್ರಾಪ್ಯುತಸ್ಯ ವಾಕ್ಯೋಕ್ತಲಿಂಗಧಾರಣಮೈಭವೇ ।
ಲಿಂಗಾಂಗಸಾಮರಸ್ಯೇ ಚ ಫಲಂ ಮೋಕ್ಷಂ ಪ್ರಚಕ್ಷತೇ ॥"

ಎಂದು ಲಿಂಗಧಾರಣ ಪ್ರತಿಪಾದಕವಾಗಿ ಉದ್ಧೃತವಾಗಿದೆ. [1] ಇವೇ ಮುಂತಾದ ಉದಾಹರಣೆಗಳಿಂದ ಶ್ರೀಕರಭಾಷ್ಯವು ನೀಲಕಂಠಭಾಷ್ಯವನ್ನು ಅನುಸರಿಸಿದೆ ಎಂಬುದು ಸ್ಪಷ್ಟವಾಗುತ್ತದೆ.

ಕೆಲವರು ಶೈವ ವಿಶಿಷ್ಟಾದ್ವೈತ ಪ್ರತಿಪಾದಕವಾದ ಶ್ರೀಕಂಠಭಾಷ್ಯವೇ ನೀಲಕಂಠಭಾಷ್ಯವೆಂದು ವಾದಿಸುತ್ತಾರೆ. ಆದರೆ ಇದು ಸಮಂಜಸವೆನಿಸುವುದಿಲ್ಲ. [2] ಏಕೆಂದರೆ ಶ್ರೀಕಂಠಭಾಷ್ಯದಲ್ಲಿ ವೀರಶೈವ ಆಚಾರ್ಯರ, ಗ್ರಂಥಗಳ, ಮತ್ತು ಕ್ರಿಯಾಸಾರೋಕ್ತ ಲಿಂಗಧಾರಣ, ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಮುಂತಾದವುಗಳ ಗಂಧವೂ ಇಲ್ಲ ; ಆದ್ದರಿಂದ ಶ್ರೀಕಂಠಭಾಷ್ಯವು ಲಿಂಗಧಾರಿ ಶಕ್ತಿವಿಶಿಷ್ಟಾದ್ವೈತ ವೀರಶೈವಭಾಷ್ಯವಾಗಲಾರದು. ಶ್ರೀಕರಭಾಷ್ಯದಲ್ಲಾದರೆ ಶ್ರೀ ರೇಣುಕಾದಿ ಪ್ರಾಚೀನ ಆಚಾರ್ಯರು ರಚಿಸಿರುವ ಭಾಷ್ಯಗಳ ಅವಲಂಬನವೂ, ಶಿವಾಗಮೋಕ್ತ ಧರ್ಮಸ್ಥಾಪನೆಯೂ ವಿಶದವಾಗಿ ಪ್ರತಿಪಾದಿತವಾಗಿದೆ. ಪರಂಪರೆಯಿಂದ ಬಂದಿರುವ ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲ ಮುಂತಾದ ವಿಶಿಷ್ಟತತ್ತ್ವಗಳ ಪ್ರತಿಪಾದನವು ಇಲ್ಲಿ ವಿಸ್ತಾರವಾಗಿ ಕಂಡುಬರುವುದರಿಂದಲೂ ಆಂತರ ಮತ್ತು ಬಾಹ್ಯ ಪ್ರಮಾಣಗಳು ಹೇರಳವಾಗಿರುವುದರಿಂದಲೂ ಶ್ರೀಕರಭಾಷ್ಯವೇ ನೀಲಕಂಠಭಾಷ್ಯದ ತರುವಾಯ ವೀರಶೈವ ಸಿದ್ಧಾಂತ ಸ್ಥಾಪನಮಾಡಲು ಸಮರ್ಥವಾಗಿದೆ ಎಂಬುದು ಸಿದ್ಧವಾಗುತ್ತದೆ.

**ಭಾಷ್ಯಕಾರರ ಕಾಲ ಮತ್ತು ದೇಶ**

ಶ್ರೀಪತಿಪಂಡಿತಾರಾಧ್ಯರ ಕಾಲದ ವಿಷಯದಲ್ಲಿ ಬಹಳ ಸಂದೇಹಗಳು ತಲೆದೋರಿವೆ. ಶ್ರೀಕರಭಾಷ್ಯದ ಜನ್ಮಾದ್ಯಧಿಕರಣದ ಕಡೆಯಲ್ಲಿ ಭಟ್ಟ ಭಾಸ್ಕರನ, ಪ್ರಥಮಾಧ್ಯಾಯದ ಪ್ರಥಮ ಪಾದದ ೨೧ ನೇ ಸೂತ್ರ ಭಾಷ್ಯದಲ್ಲಿ ಶ್ರೀ ನೀಲಕಂಠಭಗವತ್ಪಾದರ, ಎರಡನೇ ಅಧ್ಯಾಯದ ಮೊದಲ ಪಾದದ ೨೨ ನೇ ಸೂತ್ರಭಾಷ್ಯದಲ್ಲಿ ಶ್ರೀಕಂಠಶಿವಾರಾಧ್ಯರ, ಎರಡನೇ ಅಧ್ಯಾಯದ ಎರಡನೇ ಪಾದದ ೪೨ ಸೂತ್ರಭಾಷ್ಯದಲ್ಲಿ ಶ್ರೀ ರಾಮಾನುಜರ ಹೆಸರನ್ನೆತ್ತಿರುವುದರಿಂದ ಈ ಶ್ರೀಪತಿಯು ಶ್ರೀ ನೀಲಕಂಠ, ಭಟ್ಟಭಾಸ್ಕರ, ಶ್ರೀಕಂಠ, ರಾಮಾನುಜರಿಗಿಂತ ಈಚಿನವರು ಎಂಬುದು ನಿಸ್ಸಂದೇಹ. [3] ಭಟ್ಟಭಾಸ್ಕರ ಮೊದಲಾದ ಆಚಾರ್ಯರ ಕಾಲನಿರ್ಣಯವನ್ನು ಕುರಿತ ವಿದ್ವಾಂಸರ ಅಭಿಪ್ರಾಯ ಇದು—

ಭಟ್ಟಭಾಸ್ಕರನು ಕ್ರಿ. ಶ. ೯೦೦ ಶತಮಾನದವನು. ಡಾ॥ ಸರ್. ಎಸ್. ರಾಧಾಕೃಷ್ಣನ್ ಅವರು "ಬ್ರಹ್ಮಸೂತ್ರ ಭಾಷ್ಯವನ್ನು ಬರೆದಿರುವ ಭಾಸ್ಕರನು ಕ್ರಿ. ಶ. ೯೦೦ ರಲ್ಲಿ ಇದ್ದನು. ಏಕೆಂದರೆ ಈತನ ಮತವನ್ನು ಕ್ರಿ. ಶ. ೯೮೦ ರಲ್ಲಿದ್ದ ಕುಸುಮಾಂಜಲಿಕಾರ ಉದಯನಾಚಾರ್ಯನು ವಿಮರ್ಶಿಸಿದ್ದಾನೆ. [4]

---

[1] ಕ್ರಿಯಾಸಾರ ಉ. ೧–೫.

[2] ಶ್ರೀಶೈಲಪೀಠದರ್ಶನ ಪು. ೧೪೦-೧೪೨. ೧೯೪೭, ೪೯, ಹ. ಬ. ಸಮಾಜ ರಸ್ತೆ ಬಸವನಗುಡಿ, ಬೆಂಗಳೂರು.

[3] ಶ್ರೀಕರಭಾಷ್ಯ ಸಂ. I ಪುಟ ೬೭, ೧೪೫, ೪೦೦ ರಲ್ಲಿ ಕ್ರಮವಾಗಿ ಭಟ್ಟಭಾಸ್ಕರ, ನೀಲಕಂಠ, ಶ್ರೀಕಂಠ ಮತ್ತು ರಾಮಾನುಜರ ಹೆಸರುಗಳು ಬಂದಿವೆ.

[4] Indian Philosophy VOL II P. 670, by Dr. S. Radhakrishn. 1956.

ಶ್ರೀಕಂಠಾಚಾರ್ಯರಾದರೊ ಕ್ರಿ. ಶ. ೧೦೬೪ ರಲ್ಲಿದ್ದರು ಎಂದು ತಿಳಿದುಬಂದಿದೆ. ಏಕೆಂದರೆ ಅಘೋರ ಶಿವಾಚಾರ್ಯ (ಕ್ರಿ. ಶ. ೧೧೫೪)ನು ತಾನು ರಚಿಸಿರುವ ಮಹೋತ್ಸವ ವಿಧಿಯಲ್ಲಿ ಶ್ರೀಕಂಠರನ್ನು ತನ್ನ ಪ್ರಪಿತಾಮಹರೆಂದು ಹೇಳಿಕೊಂಡಿದ್ದಾನೆ. ಶ್ರೀ ಎಸ್. ಎಸ್. ಸೂರ್ಯನಾರಾಯಣ ಶಾಸ್ತ್ರಿ ವಿರಚಿತವಾದ "ಶಿವಾದ್ವೈತ ಆಫ್ ಶ್ರೀಕಂಠ" (Shivadwaiat of Sreekantha) ಎಂಬ ಗ್ರಂಥದಲ್ಲಿ ಹೇಳಿದೆ. ರಾಮಾನುಜರು ಕ್ರಿ. ಶ. ೧೦೧೭-೧೧೩೭ ರಲ್ಲಿದ್ದರೆಂಬುದು ಸರ್ವಶ್ರುತ. ಆದುದರಿಂದ ಶ್ರೀಪತಿಪಂಡಿತರು, ನೀಲಕಂಠ, ಭಾಸ್ಕರ, ಶ್ರೀಕಂಠ, ರಾಮಾನುಜರ ತರುವಾಯವೇ ಶ್ರೀಕರಭಾಷ್ಯವನ್ನು ರಚಿಸಿದರೆಂಬುದು ಸಿದ್ಧವಾಗುತ್ತದೆ.

ಪ್ರಾಯಃ ವೀರಶೈವ ಗ್ರಂಥಗಳಲ್ಲಿ ಶ್ರೀಪತಿಪಂಡಿತ-ಮಂಚನಪಂಡಿತ-ಮಲ್ಲಿಕಾರ್ಜುನಪಂಡಿತ ಎಂಬ ಪಂಡಿತತ್ರಯರ ಪ್ರಶಂಸೆ ಬರುತ್ತದೆ. ಕ್ರಿ. ಶ. ೧೧೯೫ ರಲ್ಲಿದ್ದ ಪಾಲ್ಕುರಿಕಿ ಸೋಮನಾಥ ಕವಿಯು ತನ್ನ ಆಂಧ್ರಪಂಡಿತಾರಾಧ್ಯ ಚರಿತ್ರೆಯ ದೀಕ್ಷಾಪ್ರಕರಣದಲ್ಲಿ

"ತಜ್ಜೇತಾ ಶಿವಸದ್ಭಕ್ತಿಜನಿಕರ್ತೇತಿ ಭೂಜನೈಃ ।
ಪೂಜ್ಯಮಾನಃ ಪ್ರಸಿದ್ಧೋಽಭೂತ್ಪುರಾ ಶ್ರೀಪತಿಪಂಡಿತಃ"॥ [1]

ಎಂದು ಮುಂತಾಗಿ ಪಂಡಿತತ್ರಯವನ್ನು ನೆನೆಯಲಾಗಿದೆ. ಮಲ್ಲಿಕಾರ್ಜುನ ಪಂಡಿತನು ಪಾಲ್ಕುರಿಕಿ ಸೋಮನಾಥನಿಗಿಂತ ಹಿಂದಿನವನು ಎಂದು ಕನ್ನಡ-ತೆಲುಗು ಚರಿತ್ರೆಗಳಲ್ಲಿ ನಿರ್ಣಯವಾಗಿದೆ. ಸ್ವಯಂ ಮಲ್ಲಿಕಾರ್ಜುನ ಪಂಡಿತನೂ ಕೂಡ ತಾನು ಬರೆದಿರುವ "ಶಿವತತ್ತ್ವಸಾರಮು" [2] ಎಂಬ ಆಂಧ್ರಪದ್ಯ ಪ್ರಬಂಧದಲ್ಲಿ ಶ್ರೀಪತಿಪಂಡಿತರ ಅಗ್ನಿಸ್ತಂಭನ ಮಹಿಮೆ ಮತ್ತು ಅವರ ಮಹಾಪಾಂಡಿತ್ಯ ಹಾಗೂ ಶಾಸ್ತ್ರಪಾಟನವನ್ನು ಕೊಂಡಾಡಿದ್ದಾನೆ. ಈ ಕಥೆಯನ್ನು ಪಾಲ್ಕುರಿಕಿ ಸೋಮನಾಥನೂ ಉಲ್ಲೇಖಿಸಿದ್ದಾನೆ. ಈ ಐತಿಹ್ಯವು ಗುಬ್ಬಿ ಮಲ್ಲಣಾರ್ಯ ವಿರಚಿತ "ಭಾವಚಿಂತಾರತ್ನ", ಕಾಶೀನಾಥುನಿ ವೀರಾರಾಧ್ಯಕೃತ "ಧರ್ಮಗುಪ್ತಾಭ್ಯುದಯ" ಎಂಬ ಗ್ರಂಥಗಳಲ್ಲಿಯೂ ಬಂದಿದೆ.

ಇನ್ನು ಶ್ರೀಪತಿಪಂಡಿತರು ಅನಂತಪಾಲನ ರಾಜಾಸ್ಥಾನದಲ್ಲಿ ಶಿವಭಕ್ತ ಪ್ರಾಶಸ್ತ್ಯವನ್ನು ಸ್ಥಾಪಿಸಿದರೆಂಬ ಪಾಲ್ಕುರಿಕಿ ಸೋಮನಾಥನ ಬಸವಪುರಾಣೋಕ್ತಿಯು ಹಿಂದಿನ ಇತಿಹಾಸವೊಂದನ್ನು ನೆನಪಿಸುತ್ತದೆ. ಅನಂತಪಾಲನೆಂಬ ಒಬ್ಬ ರಾಜನು [3] ಚಾಲುಕ್ಯತ್ರಿಭುವನ ಮಲ್ಲದೇವ (ಕ್ರಿ. ಶ. ೧೦೭೬) ನ ಸಾಮಂತನಾಗಿ ವಿಜಯವಾಟಿಕೆ (Bezwada) ಎಂದರೆ ಗುಂಟೂರು, ಕರ್ನೂಲು ಮುಂತಾದವುಗಳಿಂದ ಕೂಡಿದ ಆಂಧ್ರದೇಶ ಮತ್ತು ಬನವಾಸಿ ಮುಂತಾದ ಕನ್ನಡ ಪ್ರದೇಶಗಳನ್ನು ಕ್ರಿ. ಶ. ೧೧ನೆಯ ಶತಮಾನದಲ್ಲಿ ಆಳುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ.

---

[1] ಶ್ರೀ ಗುರುರಾಜ ಕವಿಕೃತ ಸಂಸ್ಕೃತ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ "ಭಾಷಾಂತರ"

[2] ಒಕ್ಕಡೆ ದೈವಮು ಶಿವುಡನಿ ನಿಕ್ಕಮುಸೇಯುಟಕು ಮುಡಿಚಿ ನಿಪ್ಪುಲು ಶೀರನ್ ।
ಸ್ರುಕ್ಕಗ ಶ್ರೀಪತಿ ಪಂಡಿತುಂ, ಡಕ್ಕಜಮುಗ ವಿಜಯವಾಡ ನಲಜಮ್ಮಿ ಶಿವಾ ॥
[ಶಿವತತ್ತ್ವಸಾರಮು ೪೦೬]

[3] ಆಂಧ್ರಬಸವ ಪುರಾಣ (ಆ. ೭)

### ಶ್ರೀಪತಿಯ ನಿವಾಸ

ಶ್ರೀಪತಿಪಂಡಿತ ಭಗವತ್ಪಾದಾಚಾರ್ಯರ ನಿವಾಸವು ಬೆಜವಾಡ ಎಂಬುದು ಈ ಶಿಲಾಶಾಸನದಿಂದಲೇ ಸ್ಪಷ್ಟವಾಗುತ್ತದೆ. ಬೆಜವಾಡದಲ್ಲಿನ ಶ್ರೀ ಮಲ್ಲೇಶ್ವರ ದೇವಾಲಯದಲ್ಲಿ ಪಲ್ಲಕೇತರಾಜನು ಬರೆಸಿರುವ [1] ಶಿಲಾಶಾಸನದ [2] ಸಾರವನ್ನು ಹೀಗೆ ಸಂಗ್ರಹಿಸಲಾಗಿದೆ.

ಶಾಸನಸಾರ– ಇಲ್ಲಿರುವ ಮಲ್ಲೇಶ್ವರಸ್ವಾಮಿಗೆ ಪೂರ್ವದಲ್ಲಿ ಅಗಸ್ತ್ಯನು 'ಜಯೇಶಾನ' ಎಂದು ನಾಮಕರಣ ಮಾಡಿದನು. ಆ ತರುವಾಯ ಅರ್ಜುನನೊಡನೆ ಮಲ್ಲಯುದ್ಧ ಮಾಡಿದ ಕಾರಣದಿಂದ ಈ ದೇವರಿಗೆ ಮಲ್ಲೇಶ್ವರ ಎಂಬ ಹೆಸರಾಯಿತು. ಅನಂತರ ವಿಜಯವಾಡ ನಗರದಲ್ಲಿ ಶಾ. ಶಕ. ೫೧೪ (ಕ್ರಿ. ಶ. ೫೯೨) ರಲ್ಲಿ **ಮಾಧವವರ್ಮನೆಂಬ** ಒಬ್ಬ ರಾಜನಿದ್ದನು. ಅವನು ಹುಣಿಸೆಮರದ ಚಿಗುರನ್ನು ತಿಂದು ಜೀವಿಸುತ್ತಿದ್ದ ಒಬ್ಬ ಹೆಂಗಸಿನ ಮಗನ ಪ್ರಾಣವನ್ನು ತೆಗೆದವನು ತನ್ನ ಮಗನಾಗಿದ್ದರೂ ಸಹ ಅವನಿಗೆ ಮರಣದಂಡನೆಯನ್ನು ವಿಧಿಸಿ, ತನ್ನ ನ್ಯಾಯಪಕ್ಷಪಾತಿತ್ವವನ್ನು ಪ್ರಕಟಿಸಿಕೊಂಡನು. ಆಗ ಮಲ್ಲೇಶ್ವರನು ಧರ್ಮಸ್ವರೂಪನಾದ ಮಾಧವವರ್ಮನಿಗೆ ಪ್ರತ್ಯಕ್ಷವಾಗಿ ಸತ್ತ ಆ ಇಬ್ಬರು ಮಕ್ಕಳನ್ನು ಬದುಕಿಸಿ ರಾಜನನ್ನು ಹರಸಿದನು. ಆ ತರುವಾಯ ಶ್ರೀಪತಿ ಪಂಡಿತಾರಾಧ್ಯರೆಂಬ ವೀರಮಾಹೇಶ್ವರರು ದೇವ-ಋಷಿಗಳಿಗಿಂತಲೂ ಶಿವಭಕ್ತರೆ ಶ್ರೇಷ್ಠ ಎಂಬ ತಮ್ಮ ಪ್ರತಿಜ್ಞೆಯನ್ನು ಸಿದ್ಧಪಡಿಸಲು ರೇಷ್ಮೆಬಟ್ಟೆಯಲ್ಲಿ ಬೆಂಕಿಯನ್ನು ಕಟ್ಟಿ ತಮ್ಮ ಮನೆಯ ಅಂಗಳದಲ್ಲಿದ್ದ ಬನ್ನಿಮರಕ್ಕೆ ಕಟ್ಟಿದರು. ಆಗ ಮಲ್ಲೇಶ್ವರನು ಪ್ರತ್ಯಕ್ಷನಾದನು.

ಹೀಗೆಯೇ ಮಲ್ಲೇಶ್ವರಸ್ವಾಮಿಯನ್ನು ಆರಾಧಿಸಿ ಪ್ರಾಚೀನರಾದ ಎಲ್ಲ ರಾಜರೂ ಬೆಳಗಿದರು. ಅನಂತರ ಭಾರದ್ವಾಜಗೋತ್ರದ, ಕಾಂಚೀರಾಜನಾದ ಪಲ್ಲವ ವಂಶದ ಮಹಾರಾಜನ ಪಾದ ಸೇವಕನೂ ವೆಂಗಿ ಚಾಲುಕ್ಯ ಸಾಮಂತನೂ, ಇಕ್ಕನೂಲ್ಲದೇಶ (ಗ್ರಾಮ)ದ ಪರಿಪಾಲಕನೂ, ಬೆಜವಾಡ ಮಲ್ಲೇಶ್ವರ ಪಾದಾರಾಧಕನೂ ಆದ ಕಾರ್ವೇಟವಂಶದ ಪಲ್ಲಕೇತಭೂಪಾಲನು....(ಶ್ರೀಮಲ್ಲೇಶ್ವರನ ನಿತ್ಯಪೂಜಾಭೋಗಾರ್ಥವಾಗಿ ನೆಲತೆರಿಗೆ ಮುಂತಾದವನ್ನು ಬಿಟ್ಟು ಭೂಮಿಯನ್ನು ಸ್ವಾಮಿಗೆ ಒಪ್ಪಿಸಿದನು.) ಈ ಶಾಸನದ ಮೂಲಪಾಠವು ೫–೬ (ಸಂ. I) ನೇ ಅನುಬಂಧದಲ್ಲಿ ಕೊಟ್ಟಿದೆ.

### ಶ್ರೀಕರಭಾಷ್ಯ ಕಾಲದ ಬಗ್ಗೆ ಸಂದೇಹ ಮತ್ತು ಪರಿಹಾರ

ಕೀರ್ತಿಶೇಷರಾದ ಸಿ. ಹಯವದನರಾಯರು ಸಂಪಾದಿಸಿ ಪ್ರಕಟಿಸಿರುವ ಶ್ರೀಕರಭಾಷ್ಯದಲ್ಲಿ "ಭಾಗವತ ಪಾಂಚರಾತ್ರ ಮಧ್ವಾದಿವೈಷ್ಣವಮತೇಷು" (ಪು. ೫೩. II) "ಸ್ಮಾರ್ತ ವೈಷ್ಣವ ಮಧ್ವಾದಿ" (ಪು. ೫೯. ಸಂ. II) "ಮಧ್ವದ್ವೈತಕ್ಷಪಣಕತಾರ್ಕಿಕಾದಯಃ"(ಪು. ೧೧೯. ಸಂ. II)

---

[1] Inscriptions of Madras Presidency VOL. II No. 305 ಗುಂಟೂರು ಶಾಸನಗಳು.

ii) South Indian Inscriptions of Govt of India VOL. IV P. 489.

iii) Epigraphia Carnatica VOL. VII ಶಿಕಾರಿಪುರ No. 13, 98, 99, 131, 149.

[2] Inscription M. E. R. No. 536.

"ತಾರ್ಕಿಕಮಧ್ವಾದಿ ಕೇವಲ ಭೇದವಾದಿನಾಂ" (ಪು. ೧೨೮. ಸಂ. II). ಎಂದು ಮಧ್ವಪದವು ಪ್ರಯುಕ್ತವಾಗಿದೆ. ಆದರೆ ಇದರ ಅಸಾಂಗತ್ಯವನ್ನು ಕುರಿತು ಡಾ|| ಚಿಲಕೂರಿ ನಾರಾಯಣರಾಯರು, ಶ್ರೀ ಹಯವದನರಾಯರಿಗೆ ಈ ಭಾಷ್ಯವನ್ನು ಸಂಪಾದಿಸುವ ಸಮಯದಲ್ಲಿ ಅವರಿಗೆ ಹಸ್ತಪ್ರತಿಗಳನ್ನು ನೀಡಿದ್ದ ದೇವಿಡೀ ಜಮೀನ್ದಾರರಿಗೆ ಪತ್ರವೊಂದನ್ನು ಬರೆದು, ಆಯಾ ಸ್ಥಳಗಳಲ್ಲಿ ಮಧ್ವಪದವಿದೆಯೆ? ಎಂದು ಕೇಳಿದ್ದಕ್ಕೆ ಸದರಿ ಜಮೀನ್ದಾರರು ಮೇಲೆ ಕಾಣಿಸಿದ ಸ್ಥಳಗಳಲ್ಲಿ ತಮ್ಮಲ್ಲಿದ್ದ ಮಾತೃಕೆಗಳಲ್ಲಿ 'ಮಧ್ವ'ಪದವು ಇಲ್ಲವೆಂದು ಉತ್ತರಿಸಿರುತ್ತಾರೆ. [1]

'ಮೇಲಿನ ವಾಕ್ಯಗಳಲ್ಲಿ "ಮಧ್ವದ್ವೈತಕ್ಷಪಣಕ" ಎಂಬಲ್ಲಿ ಮಧ್ವಪದವನ್ನು ತೆಗೆದು "ದ್ವೈತಕ್ಷಪಣಕ" ಎಂದರೂ ವಾಕ್ಯವು ಸ್ವರಸವಾಗಿ ಅನ್ವಯವಾಗುವುದರಿಂದ ಅಲ್ಲಿ ಮಧ್ವಪದವು ಅಪ್ರಕೃತ. "ಭಾಗವತ ಪಾಂಚರಾತ್ರಮಧ್ವಾದಿ" ಎಂಬಲ್ಲಿ ಸಹ ಮಧ್ವಪದವು ಅಪ್ರಕೃತ. [2] ಏಕೆಂದರೆ "ಮಧ್ವತ್ವ"ವು ಭಾಗವತ ಪಾಂಚರಾತ್ರದಂತೆ ಮತವಾಚಕವಲ್ಲ. ಆದ್ದರಿಂದ ಮೇಲೆ ಕಂಡ ಸ್ಥಳಗಳಲ್ಲಿ ಮಧ್ವಶಬ್ದವು ಪ್ರಕ್ಷಿಪ್ತವೆಂದೇ ಹೇಳಬೇಕು'. ಎಂದೂ ಹೇಳಿದ್ದಾರೆ.

ಎರಡನೆಯದಾಗಿ– "ಶಂಕರ-ರಾಮಾನುಜರ ಭಾಷ್ಯವಾಕ್ಯಗಳು ಹೇಗೆ ಶ್ರೀಕರಭಾಷ್ಯದಲ್ಲಿ ಮೂಲದಲ್ಲಿದ್ದಂತೆ ಕಾಣುತ್ತವೆಯೋ ಅದರಂತೆ ಮಧ್ವಭಾಷ್ಯವಾಕ್ಯವು ಒಂದಾದರೂ ಇಲ್ಲಿ ದೊರೆಯುವುದಿಲ್ಲ. ಈ ಭಾಷ್ಯದಲ್ಲಿ ದ್ವೈತಮತ ನಿರಾಕರಣೆಯಿಲ್ಲವೆಂದಲ್ಲ, ಆದರೆ ಅದು ಮಧ್ವೋಪಜ್ಞ ದ್ವೈತಮತವಲ್ಲ. ಬದಲಾಗಿ ಅದು ಪ್ರಾಚೀನ ದ್ವೈತವೆಂಬುದು ಸುಸ್ಪಷ್ಟ."

### ಶ್ರೀಕರಭಾಷ್ಯವು ಶ್ರೀಪತಿ ಕರ್ತೃಕವೆ? ಎಂಬಲ್ಲಿ ಎರಡು ಆಕ್ಷೇಪಗಳು ಮತ್ತು ಅವುಗಳಸಮಾಧಾನ

ಈ ಎರಡು ಆಕ್ಷೇಪಗಳಲ್ಲಿ ಮೊದಲನೆಯದನ್ನು ಎತ್ತಿದವರು ದಿ|| ಡಾ|| ಎಸ್. ಶ್ರೀಕಂಠ ಶಾಸ್ತ್ರಿಗಳು. [3] ಅವರು 'ಶ್ರೀಕರಭಾಷ್ಯದ ಕಾಲನಿರ್ಣಯ' (The date of SrīkaraBhāsya) ಎಂಬ ಇಂಗ್ಲಿಷ್ ಪ್ರಬಂಧದಲ್ಲಿ "....ಆದ್ದರಿಂದ ಶ್ರೀಕರಭಾಷ್ಯವು ಪ್ರಾಯಃ ಮೂಲ ಶ್ರೀಕರಭಾಷ್ಯವಾಗಿರಲಾರದು ; ಕ್ರಿ. ಶ. ೧೨೦೦ ಶತಮಾನದ ಶ್ರೀಪತಿಯಿಂದಲೂ ಬರೆದುದಲ್ಲ. ಆದರೆ ಅದನ್ನು ಯಾರೋ ಅಜ್ಞಾತಕರ್ತೃವು ಕ್ರಿ. ಶ. ೧೫೦೦ ಶತಕದ ಕಡೆಯಲ್ಲಿ ಶ್ರೀಪತಿಯದೆನಿಸಿದ್ದ ಪುರಾತನ ಭಾಷ್ಯವನ್ನು ಪರಿಷ್ಕರಿಸಿ ದ್ವೈತಿಗಳ ಆಕ್ಷೇಪಗಳನ್ನು ನಿರಾಕರಿಸಿರಬೇಕು." ಎಂದು ಬರೆದಿದ್ದಾರೆ.

---

[1] ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರಮು– ಡಾ|| ಚಿ. ನಾರಾಯಣರಾವ್ ಸಂಪಾದಿತ (ಪು. ೫೦. ೧೯೩೯)

[2] ಶ್ರೀಕರಭಾಷ್ಯ ಚತುಸ್ಸೂತೀ ಚಿದರಿಮಠ ವೀರಭದ್ರಶರ್ಮರು, ವಾರಾಣಸೀ ಜಂಗಮವಾಡೀಮಠ ಪ್ರಕಾಶನ, ಪು. ೧೦.

[3] Reprint from the Annals of the Bhandarkar Oriental Research Institute VOL. XIX, Part II P. 147-160 Pub 1938-

ಈ ಆಕ್ಷೇಪಕ್ಕೆ ಉತ್ತರವು ಅಲ್ಲಿಂದ ಮುಂದೆ ಹದಿನಾರು ವರ್ಷಗಳು ಕಳೆದಮೇಲೆ ಅವರೇ ಈ ವಿಚಾರವನ್ನು ಚನ್ನಾಗಿ ವಿಮರ್ಶಿಸಿ ತಾವು ಬರೆದ "ಭಾರತೀಯ ಸಂಸ್ಕೃತಿ" ಎಂಬ ಕನ್ನಡ ಗ್ರಂಥ [1] ದಲ್ಲಿ ಹೀಗೆ ಬರೆದಿದ್ದಾರೆ-

"ಶ್ರೀಪತಿಪಂಡಿತನು ಶ್ರೀಕರಭಾಷ್ಯದಲ್ಲಿ ಅಥ" (ಶಬ್ದದ ವ್ಯಾಖ್ಯಾನಮಾಡುವ ಸಮಯ ದಲ್ಲಿ) ವೀರಶೈವಮತ ತತ್ತ್ವಗಳನ್ನು ಸಂಕ್ಷೇಪವಾಗಿ ನಿರೂಪಿಸಿದ್ದಾನೆ– "ತಾಂತ್ರಿಕ-ತಪ್ತಲಿಂಗ-ಡಮರು-ಶಂಖ-ಚಕ್ರಾಂಕನನಿಷೇಧ ಪೂರ್ವಕ ಶ್ರೌತಭಸ್ಮ-ರುದ್ರಾಕ್ಷಧಾರಣಪೂರ್ವಕ.... ನಿಗಮಾ ಗಮೋಭಯ ಉಭಯವೇದಾಂತ ಪ್ರತಿಪಾದಿತ ಭಕ್ತಿ-ಕ್ರಿಯಾ-ಜ್ಞಾನಕಾಂಡ ತ್ರಿತಯ ವಿಹಿತ ಸ್ಥೂಲ-ಸೂಕ್ಷ್ಮ-ಚಿತ್-ಅಚಿತ್ಪ್ರಪಂಚಪ್ರಕಾಶಕ ಷಟ್‌ಸ್ಥಲ ಪರಶಿವ ಸಾಕ್ಷಾತ್ಕಾರಕಾರಣ-ಬಹುಜನ್ಮ ಕೃತ-ಶಿವಾರ್ಪಿತ. ಯಜನ-ಯಾಜನ-ತಪೋಧ್ಯಾನಾದ್ಯನೇಕ ಪುಣ್ಯಾಪೂರ್ವಫಲಕ-ಶರೀರತ್ರಯ ಗತ ಮಲತ್ರಯ ವಿಧ್ವಂಸಕ ಕಾರುಣ್ಯ ಕಲ್ಯಾಣ ಕೈವಲ್ಯ ವಿಭೂತಿತ್ರಯ ಪ್ರದಾಯಕ ಅಷ್ಟಾವರಣ-ಪಂಚಾಚಾರ-ಸದ್ಗುರು ಕರುಣಾಕಟಾಕ್ಷಲಬ್ಧ-ಶಕ್ತಿಪಾತಾದ್ಯವಚ್ಛಿನ್ನ ಪರಶಿವೇಷ್ಟಲಿಂಗಧಾರಣಾ ತ್ಮಕ-ಪಾಶುಪತ-ದೀಕ್ಷಾನಂತರ್ಯಂ ಇತಿ ಅಥ ಶಬ್ದಾರ್ಥೋ ನಿರ್ಣೀಯತೇ" ಎಂದು.

ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಕಟವಾಗಿರುವ ವಿಶ್ವಕೋಶದಲ್ಲಿಯೂ ಸಹ [2]– "ವೀರಶೈವಮತವು ರೇವಣಸಿದ್ಧ-ಮರುಲಸಿದ್ಧ-ಪಂಡಿತಾರಾಧ್ಯ-ಏಕೋರಾಮ-ವಿಶ್ವಾರಾಧ್ಯ ರೆಂಬ ಪಂಚಾಚಾರ್ಯರಿಂದ ಸ್ಥಾಪಿತವಾಯಿತೆಂದು ವೀರಶೈವ ಗ್ರಂಥಗಳಲ್ಲಿ ಹೇಳಿದೆ. ಶ್ರೀಪತಿಯು ಬ್ರಹ್ಮಸೂತ್ರಗಳ ಮೇಲೆ ಶಿವಪರವಾಗಿ ಭಾಷ್ಯವನ್ನು ಬರೆದು ವೀರಶೈವ ಮತವನ್ನು ಪ್ರಖ್ಯಾಪನ ಮಾಡಿದನು" ಎಂದು ಹೇಳಿದೆ.

ಡಾ|| ಚಿಲಕೂರು ನಾರಾಯಣರಾಯರು [3] "ಶ್ರೀಕರಭಾಷ್ಯವನ್ನು ಶ್ರೀಪತಿಪಂಡಿತನೆ ಬರೆದುದೆಂದು ನನ್ನ ಅಭಿಪ್ರಾಯ. ಶ್ರೀಪತಿಪಂಡಿತನೂ ಕೂಡ ಕ್ರಿ. ಶ. ಹನ್ನೆರಡನೆಯ ಶತಮಾನ ಕ್ಕಿಂತ ಈಚಿನವನಲ್ಲ" ಎಂದಿದ್ದಾರೆ.

"ವಿಮರ್ಶಾಗ್ರೇಸರ" ಬಿರುದಾಂಕಿತರಾದ ಲಿಂ|| ಬಂಡಾರುತಮ್ಮಯ್ಯ ಕಾಕಿನಾಡ, ಇವರು ಶ್ರೀಪತಿಪಂಡಿತನ ಕಾಲವನ್ನು (ಕ್ರಿ. ಶ. ೧೦೭೨ ಎಂಬುದನ್ನು ಒಪ್ಪಿಕೊಂಡು ಶ್ರೀಕರಭಾಷ್ಯವು ಶ್ರೀ ಪತಿಪಂಡಿತನೇ ಬರೆದುದು ಎಂದು ಅಭಿಪ್ರಾಯಪಟ್ಟಿದ್ದಾರೆ. [4] ಇದರಂತೆ ಶ್ರೀಕರಭಾಷ್ಯದಲ್ಲಿ ೧೦೧೭-೧೧೩೦ ರಲ್ಲಿದ್ದ ಶ್ರೀ ರಾಮಾನುಜರ ಶ್ರೀಭಾಷ್ಯಖಂಡನವಿರುವುದರಿಂದ ಕ್ರಿ. ಶ. ಹನ್ನೆರಡನೆಯ ಶತ ಮಾನದ **ಬಸವಾದಿ ಶಿವಶರಣರ** ಮತ್ತು ಅವರು ಪ್ರತಿಪಾದಿಸಿದ ಪರಿಷ್ಕೃತ ಪ್ರಗತಿಪರವಾದ ವೀರ

---

[1] ಭಾರತೀಯ ಸಂಸ್ಕೃತಿ– ಡಾ|| ಎಸ್. ಶ್ರೀಕಂಠಶಾಸ್ತ್ರಿ ವಿರಚಿತ, ಮೈಸೂರು ವಿಶ್ವವಿದ್ಯಾ ಲಯ ಪ್ರಕಾಶನ ೧೯೫೪. ಪು. ೧೩೬.

[2] ಕನ್ನಡ ವಿಶ್ವಕೋಶ. (ಪು. ೧೧೭. IV ಸಂಪುಟ) ಮೈಸೂರು ವಿಶ್ವವಿದ್ಯಾಲಯ ಪ್ರಕಾಶನ. ೧೯೭೨.

[3] ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಮು ಉಪೋದ್ಘಾತ [ಪು. ೩೧-೩೨] ೧೯೩೦.

[4] ಪಾಲ್ಕುರಿಕಿ ಸೋಮನಾಥಕವಿ ಪು. ೧೨೪. (೧೯೪೮) ಶಿವಧರ್ಮ ಗ್ರಂಥಮಾಲ, ಸಿಕಿಂದ್ರಾಬಾದ್.

ಶೈವಸಾಮಾಜಿಕ-ಆಚಾರವಿಚಾರಗಳು ಅವರಲ್ಲಿ ಕಾಣದಿರುವುದರಿಂದ ಶ್ರೀಪತಿಯು ಬಸವಾವತಾರಕ್ಕಿಂತ ಹಿಂದೆಯೇ ಶ್ರೀಕರಭಾಷ್ಯವನ್ನು ಬರೆದಿರುವನೆಂಬುದು ನಮ್ಮ ಆಶಯ.

ಇನ್ನು ಎರಡನೆಯ ಆಕ್ಷೇಪವು ಮತ್ತೆ ನಾಲ್ಕು ಆಕ್ಷೇಪಗಳಿಗೆ ಎಡೆಕೊಟ್ಟಿದೆ. ಅವು ಕ್ರಮವಾಗಿ–

(ಕ) ಶಾಸನೋಕ್ತ-ಶ್ರೀಪತಿಯು [1] ಅಂತ್ಯಜನಾದರೂ ಶಿವಭಕ್ತನು ; ದೇವ-ಋಷಿಗಳಿಗಿಂತಲೂ ಶ್ರೇಷ್ಠನು; ಎಂಬುದನ್ನು ಸ್ಥಾಪಿಸುವುದಕ್ಕಾಗಿಯೇ ಅಗ್ನಿಸ್ತಂಭನಮಹಿಮೆಯನ್ನು ಪ್ರದರ್ಶಿಸಿದನು. ಅವನ ಮಗ "ಗೋಕರ್ಣ"ನೆಂಬುವನು ಒಬ್ಬ "ಪಂಚಮ"ನನ್ನು (ಅಂತ್ಯಜ) ದ್ವಿಜನನ್ನಾಗಿಸಿದ. ಪ್ರಕೃತ ಶ್ರೀಕರಭಾಷ್ಯದಲ್ಲಿಯಾದರೊ– "ಬ್ರಹ್ಮ-ಕ್ಷತ್ರಿಯ-ವೈಶ್ಯರಿಗೆ ಮಾತ್ರ ಉಪನಯನಸಂಸ್ಕಾರವಾಗುವುದರಿಂದ ಅವರಿಗೆ ಮಾತ್ರ ಬ್ರಹ್ಮವಿದ್ಯಾಧಿಕಾರವುಂಟು ; ಶೂದ್ರರಿಗೆ ಉಪನಯನ-ಸಂಸ್ಕಾರವಿಲ್ಲದಿರುವುದರಿಂದ ಬ್ರಹ್ಮವಿದ್ಯಾಧಿಕಾರವಿಲ್ಲ ; ಎಂದು ಶ್ರುತಿ-ಸ್ಮೃತಿ-ಪುರಾಣ ಮತ್ತು ಇತಿಹಾಸಗಳಲ್ಲಿ ಬ್ರಹ್ಮವಿದ್ಯಾಧಿಕಾರವನ್ನು ನಿಷೇಧಿಸಲಾಗಿದೆ."– ಎಂದ ಮೇಲೆ ಇನ್ನು ಉಳಿದವರ ಬಗ್ಗೆ ಹೇಳುವುದೇನು ? [2] "ಶೂದ್ರಾಣಾಂ ನ ಬ್ರಹ್ಮವಿದ್ಯಾಧಿಕಾರಃ" ಎಂದು ಘೋಷಿಸಲಾಗಿದೆ.

ಭಾಷ್ಯದಲ್ಲಿ ಅಲ್ಲಲ್ಲಿ "ತಾಂತ್ರಿಕ-ತಪ್ತ-ಲಿಂಗ-ಶೂಲ-ಡಮರು-ಶಂಖಾಂಕನಗಳ ನಿಷೇಧ ಮಾಡಿ, ಶ್ರೌತಶಿಖಾ-ಸೂತ್ರ-ಭಸ್ಮ-ರುದ್ರಾಕ್ಷ-ಲಿಂಗಧಾರಣಗಳನ್ನು ಒಪ್ಪಿರುವುದಲ್ಲದೆ [3] ಹರಿಕೇಶಾಯೋಪವೀತಿನೇ" "ರುದ್ರಶ್ಶಿಖಾ" ಮುಂತಾದ ಕಡೆಗಳಲ್ಲಿ ಭಸ್ಮ-ರುದ್ರಾಕ್ಷಧಾರಿಯಾಗಿ ಶಿಖಾ-ಯಜ್ಞೋಪವೀತ ಧರಿಸಿರುವಿಕೆಯೇ ಶಿವಲಾಂಛನ ;" ಎಂದು ಹೇಳಲಾಗಿದೆ–

[4] ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಮ್ ।
ಶಿಖಾ ಸೂತ್ರಂ ತಥಾ ಭಸ್ಮ ಇತಿ ಬ್ರಾಹ್ಮಣಲಕ್ಷಣಮ್ ॥

ಎಂದು (ಗೌತಮಸ್ಮೃತಿ) [5] ವೀರಶೈವ ಲಕ್ಷಣವನ್ನು ಹೇಳುವ ಪ್ರಸ್ತಾವದಲ್ಲಿ ನಿರ್ದೇಶಿಸಲಾಗಿದೆ.

(ಗ) ಏಕಾದಶೀವ್ರತಾಚರಣೆಗೆ ಪ್ರಾಶಸ್ತ್ಯವನ್ನು ನೀಡಲಾಗಿದೆ.

ಈ ಭಾಷ್ಯದಲ್ಲಿ [6] ಗಾಯತ್ರೀವೈಶಿಷ್ಟ್ಯವರ್ಣನವಿದೆ. ಈ ಕಾರಣಗಳಿಂದ ಶ್ರೀಕರಭಾಷ್ಯವು ಶಾಸನೋಕ್ತ-ಶ್ರೀಪತಿ ಬರೆದದ್ದಲ್ಲ ; ಎಂದು.

---

[1] ಶ್ರೀಕರಭಾಷ್ಯ ೧. ೨. ೧. ಪು. ೧೯೬.

[2] ಶ್ರೀಕರಭಾಷ್ಯ ೧. ೩. ೯. ೩೪ ಪು. ೩೧೯.

[3] ತೈ. ಸಂ. ೪–೫. ೨.

[4] ಶ್ರೀಕರಭಾಷ್ಯ ೧. ೨. ೧. ೪. ಪು. ೨೦೧-೨೦೨

[5] ಶ್ರೀಕರಭಾಷ್ಯ ೧. ೧. ೩. ೩. ಪು. ೭೪.

[6] ಬ್ರ. ಸೂ. ೧. ೧. ೨೬. ಪು. ೧೬೦.

ನಿಜ ; ಜಾತಿಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲ ; ಎಂಬುದು ವೀರಶೈವಸಿದ್ಧಾಂತಸಮ್ಮತವಲ್ಲ. ಏಕೆಂದರೆ– ಈ ವಿಷಯವನ್ನು "ಅಪಶೂದ್ರಾಧಿಕರಣವನ್ನು ಕುರಿತು" ಎಂಬ ನಮ್ಮ ಸಂಸ್ಕೃತ ಮತ್ತು ಕನ್ನಡ ಪ್ರಬಂಧಗಳಲ್ಲಿ ಸ್ಪಷ್ಟಪಡಿಸಲಾಗಿದೆ. [1]

ಶ್ರೀ ಉಮಚಗಿ ಶಂಕರಶಾಸ್ತ್ರಿಗಳು ತಾವು ಬರೆದಿರುವ ಬ್ರಹ್ಮಸೂತ್ರವೃತ್ತಿಯ ಅಪಶೂದ್ರಾಧಿಕರಣವ್ಯಾಖ್ಯಾನ ಸಂದರ್ಭದಲ್ಲಿ ಇದನ್ನು ಹೀಗೆ ಸಮರ್ಥಿಸಿದ್ದಾರೆ–

"ಈ ಅಧಿಕರಣದಲ್ಲಿ (ಕ್ರಿಯಾಸಾರ) ಕಾರಿಕೆಗಳಿಗೆ ಟೀಕೆಯನ್ನು ಬರೆದ ನಿರ್ವಾಣಮಂತ್ರಿ ಮತ್ತು ಶ್ರೀಕರಭಾಷ್ಯಕಾರರಾದ ಶ್ರೀಪತಿಪಂಡಿತರೂ ಸಹ ಶೂದ್ರಾದಿಗಳಿಗೆ ಸಂಸ್ಕಾರವಿಲ್ಲವೆಂದಿದ್ದಾರೆ. ಆದರೆ ಶಿವದೀಕ್ಷೆಯೂ ಒಂದು ಸಂಸ್ಕಾರವೇ ಸರಿ. ಆದ್ದರಿಂದ ಅವರೂ ಸಂಸ್ಕಾರಿಗಳಾದ್ದರಿಂದ ಅವರಿಗೂ ಬ್ರಹ್ಮವಿದ್ಯಾಧಿಕಾರವುಂಟು; ಎಂದಿರುವಾಗ ಅದಕ್ಕೆ ವಿರುದ್ಧವಾಗಿ ವ್ಯಾಖ್ಯಾನಮಾಡುವುದರಿಂದ ಏನು ಪ್ರಯೋಜನ ?" ಎಂದು ಆಶಂಕಿಸಿ, ವೀರಶೈವಸಿದ್ಧಾಂತ ಸಮ್ಮತವಾದ ಉತ್ತರವನ್ನು ಹೇಳುವ ಬಗ್ಗೆ– "ನಿರ್ವಾಣಮಂತ್ರಿಗೆ ಕಾರಿಕಾಕಾರನ ತಾತ್ಪರ್ಯಗಂಧವೂ ತಿಳಿದಿರಲಿಲ್ಲ ; ಮಾತ್ರವಲ್ಲದೆ ಆತ ಕ್ರಿಯಾಸಾರವನ್ನು ಆಮೂಲಾಗ್ರವಾಗಿ ವಿಚಾರಮಾಡದೆಯೇ ಮಾಯಾವಾದಿಗಳಂತೆ ಶೂದ್ರಾದಿಗಳಿಗೆ ಸಂಸ್ಕಾರವಿಲ್ಲವೆಂದು ತೋರಿಸಿದ್ದಾನೆ. ಇನ್ನು ಶ್ರೀಕರಭಾಷ್ಯಕಾರರೂ ಸಹ ಪೂರ್ವಾಪರಸೂತ್ರಪರ್ಯಾಲೋಚನೆಯನ್ನು ಮಾಡದೆಯೇ ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂದು ತೀರ್ಮಾನಿಸಿದ್ದಾರೆ; ಎಂಬುದನ್ನು ನನ್ನ ವ್ಯಾಖ್ಯಾನವನ್ನು ಪರಿಶೀಲಿಸುವ ಪಂಡಿತರು ತಿಳಿಯಬಲ್ಲರು" ಎಂದು ಬರೆಯಲಾಗಿದೆ. ಇದರಂತೆ ಮುಂದೆ "ಪ್ರಮಿತಾಧಿಕರಣ"ದಲ್ಲಿಯೂ ಕೂಡ "ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್" ಎಂಬ ಸೂತ್ರದಲ್ಲಿ "ಎಲ್ಲ ಮನುಷ್ಯರಿಗೂ ಬ್ರಹ್ಮವಿದ್ಯಾಧಿಕಾರವುಂಟು" ಎಂಬುದು ಸೂತ್ರಕಾರರ ಅಭಿಪ್ರಾಯವಾಗಿದ್ದರೂ "ಕೆಲವರಿಗೆ ಬ್ರಹ್ಮವಿದ್ಯಾಧಿಕಾರವುಂಟು; ಕೆಲವರಿಗೆ ಇಲ್ಲ." ಎಂದು ಹೇಳುವುದು ರಾಗದ್ವೇಷಯುಕ್ತವಾದದ್ದು; ಎಂದೇ ಹೇಳಬೇಕು. [2]"

**ಈ ಆಕ್ಷೇಪಗಳಿಗೆ ಕ್ರಮವಾಗಿ ಸಮಾಧಾನಗಳು**

(ಕ) ವಾಸ್ತವವಾಗಿ ಈ ವಿಷಯದಲ್ಲಿ ಸರ್ವಜ್ಞಶಿಖಾಮಣಿಗಳೂ ಆಚಾರ್ಯಪುಂಗವರೂ ಆದ ಶ್ರೀಪತಿಪಂಡಿತಭಗವತ್ಪಾದರದು ಎಳ್ಳಷ್ಟೂ ತಪ್ಪಿಲ್ಲ. ಆದರೆ ಶ್ರೀಕರಭಾಷ್ಯವನ್ನು ಅಮೂಲಾಗ್ರವಾಗಿ ಸಾವಧಾನವಾಗಿ ಪರಿಶೀಲಿಸದಿರುವುದೇ ಈ ಆಕ್ಷೇಪಕ್ಕೆ ಕಾರಣ ; ಎಂದೇ ಹೇಳಬೇಕಾಗಿದೆ. ಏಕೆಂದರೆ– ಅಪಶೂದ್ರಾಧಿಕರಣದಲ್ಲಿ ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲ ; ಎಂದಿರುವುದು ಉಳಿದ ಮಾಯಾವಾದಿ ಮೊದಲಾದವರಂತೆ ಅಲ್ಲ ; ಬದಲಾಗಿ ಅದು ಸನಾತನ ವೈದಿಕಸಂಪ್ರದಾಯವನ್ನು ಅನುಸರಿಸಿ : ಅಲ್ಲಿ ಪ್ರಯೋಗಿಸಿರುವ ಶೂದ್ರಪದವು ಜಾತಿಶೂದ್ರರನ್ನು ಕುರಿತದ್ದಲ್ಲ ಏಕೆಂದರೆ– ವೀರ

---

[1] "ಚಂದ್ರಿಕಾ" ; ಶ್ರೀ ಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯ ವಾರ್ಷಿಕ ಸಂಚಿಕೆ, (೧೯೬೭ ಪು. ೧೪.) ಪ್ರಬುದ್ಧ ಕರ್ನಾಟಕ (ಮೈಸೂರು ವಿಶ್ವವಿದ್ಯಾಲಯದ ಕನ್ನಡ ತ್ರೈಮಾಸಿಕ: ಪು. ೧೫೧-೧೬೦) ಪ್ಲವಂಗ ಸಂ|| ಆಶ್ವಯುಜ ಸಂ. ೪೯. ಸಂ. ೩. ೧೯೬೭.

[2] ಬ್ರಹ್ಮಸೂತ್ರವೃತ್ತಿ : ಪು. ೧೯೬, (೧೯೭೪), ಶಂಕರವಿಳಾಸ-ಸಂಸ್ಕೃತಪಾಠಶಾಲಾ, ಶಂಕರಮಠ ಬೀದಿ, ಮೈಸೂರು ೪.

[3] ಶ್ರೀಕರಭಾಷ್ಯ ಪು. ೩೦೪.

ಶೈವವು "ಶೂದ್ರ" ಎಂಬ ವರ್ಣವನ್ನೇ ಒಪ್ಪಿಲ್ಲ.[1] ನಾವು ಹಿಂದೆ ಹೇಳಿದ "ವೇದಾಧಿಕಾರನಿರ್ಣಯ-ಪ್ರಕರಣ" ಮತ್ತು "ಅಪಶೂದ್ರಾಧಿಕರಣಸಮೀಕ್ಷೆ"ಯ ಸಂದರ್ಭಗಳಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ. ಅಲ್ಲಿ ಹೇಳಿರುವ ಪ್ರಕಾರ "....ಪಾತಕಾಧಮತ್ವ, ಮೂರ್ಖತ್ವ ಮತ್ತು ಅಜ್ಞತ್ವ ಮುಂತಾದ ಲಕ್ಷಣಗಳುಳ್ಳವನೇ ಶೂದ್ರನು ಎಂಬುದು ಸಿದ್ಧವಾಗಿದೆ. (ಪು....) ಆದ್ದರಿಂದ ಅಂಥವನಿಗೆ ವೇದವನ್ನಾಗಲಿ, ಬ್ರಹ್ಮವಿದ್ಯೆಯನ್ನಾಗಲಿ ಬೋಧಿಸುವುದು ಇಲ್ಲವೆ ಉಪದೇಶಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಅಷ್ಟೇ ಅಲ್ಲ. ಹಾಗೆ ಮಾಡುವುದರಿಂದ ಬಹಳ ಅನರ್ಥವೂ ಸಂಭವಿಸುವುದು ; ಎಂಬುದನ್ನು ಪಾಣಿನಿ ಮೊದಲಾದವರು ಸ್ಪಷ್ಟಪಡಿಸಿರುವರೆಂಬುದನ್ನು ಹಿಂದೆಯೇ ಹೇಳಲಾಗಿದೆ. ಈ ಬಗ್ಗೆ ಭಾಷ್ಯಕಾರನದು ಅಪರಾಧವಲ್ಲ.

ಎರಡನೆಯದಾಗಿ ಅದೇ ಶ್ರೀಕರಭಾಷ್ಯದಲ್ಲಿ– ಪ್ರಮಿತಾಧಿಕರಣದಲ್ಲಿ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಸೂತ್ರಭಾಷ್ಯದಲ್ಲಿ ಇತರ ಭಾಷ್ಯಕಾರರು ಹೇಳಿರುವಂತೆ "ಮೂರು ವರ್ಣಗಳವರಿಗೆ ಮಾತ್ರ ಅಗ್ನಿಸಂಬಂಧವಿರುವುದರಿಂದ ಬ್ರಹ್ಮವಿದ್ಯೆಗೆ ಅಧಿಕಾರ" ಎಂದು ಹೇಳಿ, ಮುಂದೆ "ಕಿಂ ಚ" ಎಂದು ಆರಂಭಿಸಿ– "ಪರೀಕ್ಷ್ಯ ಲೋಕಾನ್- ಬ್ರಹ್ಮನಿಷ್ಠಂ" "ಅರ್ಥೀ ಸಮರ್ಥೋ ವಿದ್ವಾನ್" ಎಂದು ಬ್ರಹ್ಮವಿದ್ಯೆಯನ್ನು ಬೋಧಿಸಬೇಕಾದರೆ ಗುರುವು ಶಿಷ್ಯನನ್ನು ಚೆನ್ನಾಗಿ ಪರೀಕ್ಷಿಸಿ ಅವನಲ್ಲಿ "ಶಕ್ತಿಪಾತ" (ಶಿವಕೃಪೆ) ಮುಂತಾದ ಒಳ್ಳೆಯ ಲಕ್ಷಣಗಳಿವೆಯೆ ಎಂದು ನಿರ್ಧರಿಸಿಕೊಳ್ಳಬೇಕು. ಅವನಲ್ಲಿ ಬ್ರಹ್ಮವಿದ್ಯೆಯನ್ನು ತಿಳಿಯಬೇಕೆಂಬ ಅಪೇಕ್ಷೆ- ಅರ್ಥಿತ್ವ; ಎಂದರೆ ಹೇಳಿದ್ದನ್ನು ತಿಳಿದುಕೊಂಡು ಅದನ್ನು ತನ್ನಲ್ಲಿ ಉಳಿಸಿಕೊಳ್ಳುವ ಸಾಮರ್ಥ್ಯ ಮತ್ತು ಪಾಂಡಿತ್ಯಗಳು ಇದ್ದಲ್ಲಿ ಅವನೇ ವೇದವಿದ್ಯೆಗೆ ಅಧಿಕಾರಿ; ಎಂದು ನಿರ್ಧರಿಸಬೇಕು. "ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ" "ಹಿತವನ್ನುಂಟುಮಾಡಬೇಕಾದುದು (ನಿತ್ಯಸುಖ) ಮನುಷ್ಯನಿಗೆ ಮಾತ್ರ;" ತಿರ್ಯಕ್ ಜಂತುಗಳಿಗಲ್ಲ ; ಏಕೆಂದರೆ– ಅವುಗಳಲ್ಲಿ "ಅರ್ಥಿತ" ಮುಂತಾದ ಲಕ್ಷಣಗಳಿರುವುದಿಲ್ಲ. ಇನ್ನು ಶ್ರುತಿಯಲ್ಲಿ ಹೇಳಿರುವ "ಅಂಗುಷ್ಠಪರಿಮಾಣವುಳ್ಳ ಹೃದಯಕಮಲವು" ಮನುಷ್ಯರಿಗೆ ಮಾತ್ರವೇ ಇರುವುದು. ಇದು ಮಾನವ ಶರೀರಕ್ಕೆ ಅನುಗುಣವಾಗಿದೆ. ಆದ್ದರಿಂದ ಅವರೇ ಬ್ರಹ್ಮವಿದ್ಯೆಗೆ ಅಧಿಕಾರಿಗಳು. ಇನ್ನು "ಉಪಾಸನ" ಎಂಬ ಶಾಸ್ತ್ರವಿಧಿಯು ಮಾನವರಿಗೆ ಹೇಳಿದೆ. ಮಾನವನ ಹೃದಯಕಮಲದ ಪರಿಮಾಣವನ್ನು ಅನುಸರಿಸಿಯೇ ಅಲ್ಲಿ ಪ್ರಾಣಲಿಂಗರೂಪದಿಂದ ಶಿವನು ಪ್ರವೇಶಿಸಿದ್ದಾನೆ ; ಎನ್ನಲಾಗಿದೆ.

ಶಕ್ತಿ, ಸಾಮರ್ಥ್ಯಗಳನ್ನು ಗುರ್ತಿಸಿ ಮಾಡುವ ಉಪನಯನ ಮತ್ತು ಶಿವದೀಕ್ಷಾದಿಗಳು ಮನುಷ್ಯರಿಗೆ ಮಾತ್ರವೇ ವಿಹಿತವಾಗಿವೆ. ಬ್ರಹ್ಮವನ್ನು ತಿಳಿಯಲಿಕ್ಕಾಗಿಯೇ ಶಿಷ್ಯನು ಗುರುಸಮೀಪವನ್ನೈದುತ್ತಾನೆ. ಶಿಷ್ಯನಲ್ಲಿ ವಾತ್ಸಲ್ಯವುಳ್ಳ ಗುರುವು ಮುಕ್ತಿಗೆ ಸಾಧನವಾದ ಶಿವದೀಕ್ಷೆಯು ಮಾನವರಿಗೆ ಹಿತತಮವೆಂದು ಭಾವಿಸಿ, ಲಿಂಗಧಾರಣಾತ್ಮಕದೀಕ್ಷೆಯೆಸಗುತ್ತಾನೆ. ಏಕೆಂದರೆ– ಮನುಷ್ಯರಿಗೆ ಇರುವ ಅಂಗುಷ್ಠದಷ್ಟಿರುವ ಹೃದಯವು ಲಿಂಗರೂಪವಾಗಿದೆ; ಎಂದು ಶ್ರುತಿಯು ವರ್ಣಿಸಿದೆ. ಅಂಥ ಹೃದಯವನ್ನು ಪರಮಕಾರುಣಿಕನಾದ ಪರಶಿವನು ಗುರುಮುಖದಿಂದ ಶಿಷ್ಯನ ಹೃದಯ

---

[1] ವಂಶಾವಲೀಪ್ರಯಾತಾನಾಂ ಲಿಂಗಧಾರಣಶಾಲಿನಾಮ್ ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೇ ॥
[ಗರುಡಪುರಾಣ]- ವೇದಾಂತಸಾರವೀರಶೈವಚಿಂತಾಮಣಿ [ಪು. ೮ ೨೨೨. ೪. ೨೯೫]

ವನ್ನು ಇಷ್ಟ ಪ್ರಾಣ-ಭಾವಲಿಂಗರೂಪದಿಂದ ಪ್ರವೇಶಿಸುತ್ತಾನೆ. ಹೀಗೆ ಬ್ರಹ್ಮಲಿಂಗಧಾರಣ, ಬ್ರಹ್ಮ ವಿದ್ಯೆಗೆ ಅಧಿಕಾರ ಇವುಗಳು ಮನುಷ್ಯರೆಲ್ಲರಿಗೂ ವಿಹಿತವಾಗಿವೆ. ಮನುಷ್ಯನ ಹೃದಯವು ಲಿಂಗ ರೂಪು ತಳೆದಿದೆ; ಎಂಬುದನ್ನು ಅಪ್ಪಯ್ಯದೀಕ್ಷಿತರು ತಮ್ಮ "ಪಂಚರತ್ನಸ್ತುತಿ"ಯಲ್ಲಿ ಹೀಗೆ ಸಮರ್ಥಿಸಿದ್ದಾರೆ–

"ಆದ್ದರಿಂದಲೇ ಬ್ರಹ್ಮವಿಚಾರಮಾಡುವಲ್ಲಿ ಅಪರಿಚ್ಛಿನ್ನನಾದ ಪರಬ್ರಹ್ಮನು ಹೇಗೆ ಅಂಗುಷ್ಠ ದಷ್ಟಾಗುತ್ತಾನೆ ? ಎಂಬ ಸಂಶಯಕ್ಕೆ "ಹೃದಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್" ಎಂಬ ಒಂದು ಸೂತ್ರದಲ್ಲಿ "ಶಾಸ್ತ್ರವು ಮನುಷ್ಯರೆಲ್ಲರಿಗೂ ಸೇರಿದ್ದಾದ್ದರಿಂದಲೇ ಮನುಷ್ಯನ ಹೃದಯಕಮ-ಲವು ಅಂಗುಷ್ಠಪರಿಮಾಣದಷ್ಟಿದೆ;" ಎಂದು ಸಮರ್ಥಿಸಲಾಗಿದೆ. ಏಕೆಂದರೆ ಮಾನವಹೃದಯಕೋಶ ದಲ್ಲಿರುವ ಅವಕಾಶವು ಲಿಂಗಾಕಾರವಾಗಿಯೆ ಇರುವುದರಿಂದ ಲಿಂಗರೂಪವು ಸಿದ್ಧಿಸುತ್ತದೆ ; ಎಂದು.

ವೀರಶೈವಸಂಪ್ರದಾಯದಂತೆ ಗುರುವು ಶಿಷ್ಯನ ಮೇಲೆ ಶಿವಕೃಪೆ (ಶಕ್ತಿಪಾತ)ಯಾಗಿದೆಯೇ ಎಂಬುದನ್ನು ಪರೀಕ್ಷಿಸಿ, ಅವನಿಗೆ ಲಿಂಗಧಾರಣರೂಪವಾದ ಶಿವದೀಕ್ಷೆ ಎಸಗುತ್ತಾನೆ. ಆದ್ದರಿಂದ ಅಂಥ ಶಿವದೀಕ್ಷೆಯಿಂದ ಪವಿತ್ರರಾದವರೆಲ್ಲರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳೇ. ಇವರಲ್ಲಿ ಜಾತಿ-ವರ್ಣ-ಆಶ್ರಮ ಮತ್ತು ಲಿಂಗಭೇದಗಳು ಯಾವುವೂ ಇರುವುದಿಲ್ಲ. ಆದ್ದರಿಂದ ಇಂತಹ ಎಲ್ಲ ಮಾನವರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳೇ ಆಗುತ್ತಾರೆ: ಎಂಬುದನ್ನು ಮುಂದೆ ಶ್ರೀಕರಭಾಷ್ಯದ ವಿಧುರಾಧಿಕರಣದಲ್ಲಿ ಸ್ಪಷ್ಟವಾಗಿಯೇ ಹೇಳಲಾಗಿದೆ. ಅಲ್ಲಿ–

"ಪ್ರಾರಬ್ಧವಶದಿಂದ ಪತ್ನೀವಿಯೋಗವಾಗಲಾಗಿ ಬ್ರಹ್ಮಚರ್ಯ ಮತ್ತು ಯತ್ಯಾಶ್ರಮಗಳ ಮಧ್ಯದಲ್ಲಿರುವವರು "ಅನಾಶ್ರಮಿ"ಗಳು. ಏಕೆಂದರೆ ಅವರಿಗೆ ಆಗ ಯಾವ ಆಶ್ರಮವೂ ಇಲ್ಲ. ಅವ ರಿಗೂ, ಸ್ನಾತಕವಿಲ್ಲದವರಿಗೂ ಕೂಡ ಪರಶಿವಬ್ರಹ್ಮನ ಧ್ಯಾನ ಧಾರಣ-ಪೂಜಾ-ನಮಸ್ಕಾರ-ಶ್ರವಣ-ಮನನರೂಪವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟು. ಏಕೆಂದರೆ– ಮನು, ಶೌನಕ ಮುಂತಾದ ವರ ಸ್ಮೃತಿಗಳಲ್ಲಿ ಹಾಗೂ ಪುರಾಣಗಳಲ್ಲಿ ಹಾಗೆ ಹೇಳಿದೆ. ಆದ್ದರಿಂದ ಎಲ್ಲ ಆಶ್ರಮದವರಿಗೂ ಬ್ರಹ್ಮವಿದ್ಯಾಧಿಕಾರವುಂಟು ಅದರಂತೆ ರೈಕ್ವ-ಭೀಷ್ಮ-ಸಂವರ್ತ ಮುಂತಾದ ಅನಾಶ್ರಮಿಗಳಿಗೂ ಕೂಡ ಬ್ರಹ್ಮವಿದ್ಯೆಯಲ್ಲಿ ನಿಷ್ಠೆಯಿರುವುದರಿಂದ "ಆಶ್ರಮವುಳ್ಳವರಿಗೆ ಮಾತ್ರ ಬ್ರಹ್ಮವಿದ್ಯಾಧಿಕಾರ." ಎಂದು ಹೇಳಲಾಗುವುದಿಲ್ಲ. "ಯಜ್ಞದಿಂದ, ದಾನದಿಂದ, ಕಠಿಣ ತಪಸ್ಸಿನಿಂದ ಬ್ರಹ್ಮವನ್ನು ತಿಳಿಯ ಬಹುದಾದ್ದರಿಂದ ಆಶ್ರಮಧರ್ಮವಿಲ್ಲದವರಿಗೂ ಸಹ ಬ್ರಹ್ಮವಿದ್ಯೆಗೆ ಅಧಿಕಾರವುಂಟು, ಎಂದು ಹೇಳಿರುವುದರಿಂದ ಜಪ-ಉಪವಾಸ-ಮತ್ತು ದೇವತಾರಾಧನಗಳಿಂದ ವಿದ್ಯೆಗೆ ಅರ್ಹತೆ ಪಡೆಯಬಹುದು.

ಇದರಂತೆ ಅದೇ ಅಧಿಕರಣದಲ್ಲಿ ಮುಂದೆ 'ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಋ' ಎಂಬ ಸೂತ್ರದ ಭಾಷ್ಯದಲ್ಲಿ 'ಅಮೃತಸ್ಯ ದೇವಧಾರಣೋ ಭೂಯಾಸಂ' 'ಶರೀರಂ ಮೇ ವಿಚರ್ಷಣಂ' ಎಂಬ ಶ್ರುತಿಗಳಲ್ಲಿ ನಾಲ್ಕು ಆಶ್ರಮಗಳನ್ನು ಮೀರಿರುವ ಆಶ್ರಮ-ಅನಾಶ್ರಮಗಳವರೆಲ್ಲರಿಗೂ ಲಿಂಗ ಧಾರಣವನ್ನು ಹೇಗೆ ವಿಧಿಸಿದೆಯೋ ಅದರಂತೆ ಆಶ್ರಮ-ಅನಾಶ್ರಮ ಎಂಬ ಪರಿವೆಯಿಲ್ಲದೆ ಮುಕ್ತಿ ಬಯಸುವವರೆಲ್ಲರಿಗೂ ಬ್ರಹ್ಮವಿದ್ಯಾಧಿಕಾರವುಂಟು. ಏಕೆಂದರೆ– 'ನಿಧನಪತಯೇ ನಮಃ' ಮುಂತಾದ ಉಕ್ತಿಗಳಲ್ಲಿ ಲಿಂಗವು ಸರ್ವಾತ್ಮಕವೆಂದು ಹೇಳಿ, 'ಯತ್ಸೋಮಸ್ಯ' ಎಂಬ ಶ್ರುತಿಯಲ್ಲಿ ಪವಿತ್ರವಾದ ಲಿಂಗರೂಪ-ಪರಬ್ರಹ್ಮವನ್ನು ಆಶ್ರಮ-ಅನಾಶ್ರಮಭೇದವಿಲ್ಲದೆ ಹೇಗೆ ಧರಿಸಲಾಗುತ್ತದೆಯೋ ಅದ ರಂತೆ ಬ್ರಹ್ಮವಿದ್ಯೆಗೆ ಸರ್ವರೂ ಅಧಿಕಾರಿಗಳೇ." ಎಂದು ಹೇಳಿದೆ.

ಇಲ್ಲಿ "ಆಶ್ರಮ" ಪದದಿಂದ "ವರ್ಣ"ವೂ ಲಕ್ಷಣಾವೃತ್ತಿಯಿಂದ ಬೋಧವಾಗುತ್ತದೆ. ಆಗ ಆಶ್ರಮ ಎಂದರೆ ಪ್ರಾಕೃತವರ್ಣಾಶ್ರಮಕ್ಕೆ ಉಚಿತವಾದ ಉಪನಯನ-ಸಂಸ್ಕಾರ ಪಡೆದ 'ದ್ವಿಜ'ರು ಎಂದು ಅರ್ಥ. ಅನಾಶ್ರಮ ಎಂದರೆ- ಹಿಂದೆ ಹೇಳಿದ ಪ್ರಾರಬ್ಧವಶದಿಂದ ಹೆಂಡತಿಯನ್ನು ಕಳೆದುಕೊಂಡ ವಿಧುರರು ಮತ್ತು ರೈಕ್ವ-ಭೀಷ್ಮ-ಸಂವರ್ತ ಮುಂತಾದವರು; ಎಂದು ಬೋಧವಾಗುತ್ತದೆ. ಅದರಂತೆ "ಅತಸ್ತ್ವಿತರಜ್ಜ್ಯಾಯೋ ಲಿಂಗಾತ್" ಎಂಬ ಸೂತ್ರಭಾಷ್ಯದಲ್ಲಿ ಹೇಳಿರುವ ಚತುರಾಶ್ರಮಗಳಿಗೆ ಅತೀತರಾದ ಎಂದರೆ ಅತ್ಯಾಶ್ರಮಿಗಳಾದ ಎಲ್ಲ ಮುಮುಕ್ಷುಗಳು ಬ್ರಹ್ಮವಿದ್ಯೆಗೆ ಅಧಿಕಾರಿಗಳು ; ಎಂದು ಸ್ಪಷ್ಟವಾಗುವುದರಿಂದ ಅಪ್ರಾಕೃತ-ಅತ್ಯಾಶ್ರಮತ್ವವು ಉಕ್ತವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದಂತೆ ಶಕ್ತಿಪಾತಲಕ್ಷಣದಿಂದ ಕೂಡಿ ಶ್ರೀಗುರುವಿನಿಂದ ಶಿವದೀಕ್ಷೆ ಸಂಸ್ಕಾರವನ್ನು ಪಡೆದ ಎಲ್ಲ ಮಾನವರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳು; ಎಂದು ಕಂಠೋಕ್ತವಾಗಿಯೇ ಹೇಳಲಾಗಿದೆ.

ಇದರಂತೆ ಮುಂದೆ 'ಮೌನಾಧಿಕರಣ'ದಲ್ಲಿ ಪೂರ್ವಪಾಶುಪತ-ಮಹಾಪಾಶುಪತಗಳಿಗೆ ವೈಶಿಷ್ಟ್ಯವನ್ನು ಹೇಳಿ ಅತ್ಯಾಶ್ರಮಲಕ್ಷಣವನ್ನು ಹೀಗೆ ಹೇಳಲಾಗಿದೆ- "... ತಸ್ಮಾತ್" ಅದರೆ ಹನ್ನೆರಡುವರ್ಷ ಮಾಡುವ "ಪಾಶುಪತಮತವು" ತನ್ನ ಇಷ್ಟಾರ್ಥವನ್ನು ಕೊಡುತ್ತದೆ. ಇಡಿಯ ಜೀವನಪರ್ಯಂತವೂ ಅನುಷ್ಠಾನ-ಮಾಡುವ "ಮಹಾಪಾಶುಪತವ್ರತವು" ಪಾಶನಿವೃತ್ತಿಪೂರ್ವಕ ಶಿವಸ್ವರೂಪ-ನಿತ್ಯಫಲವನ್ನೇ ನೀಡುತ್ತದೆ.

ಅತ್ಯಾಶ್ರಮಿ ನಿರಾಧಾರ-ಷಟ್-ಸ್ಥಲೀ ಜಂಗಮೇಶ್ವರಃ ।
ಶಿವಯೋಗಯತಿರ್ವೀರೋ ನಾನ್ಯೇಷು ನ ಕದಾಚನ ॥

ಎಂದು ವೀರಾಗಮದಲ್ಲಿ ಹೇಳಿರುವುದರಿಂದ ಅತ್ಯಾಶ್ರಮ-ಪದವು ಶಿವದೀಕ್ಷೆ ಪಡೆದ ಎಲ್ಲ ಆಶ್ರಮದವರಿಗೂ ಅನ್ವಯಿಸುತ್ತದೆ.

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ ।
ಯಸ್ತು ಲಿಂಗಾಂಗ-ಸಂಯುಕ್ತಸ್ಸ ಏವಾತ್ಯಾಶ್ರಮೀ ಭವೇತ್ ॥

ಎಂಬ ಆಗಮೋಕ್ತಿಯು ಇದನ್ನೇ ಸಮರ್ಥಿಸುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಗೆ ಎಲ್ಲ ಮಾನವರು ಅರ್ಹರು ; ಎಂಬುದು ಭಾಷ್ಯಕಾರರ ಸಿದ್ಧಾಂತ. ಇಲ್ಲಿ ಹೇಳಿರುವ ಅತ್ಯಾಶ್ರಮಿಗಳು "ವೀರಶೈವ"ರೆಂಬುದೂ ಸಿದ್ಧವೇ ಆಗಿದೆ. ಹೀಗೆ ಬೇರೆ ಭಾಷ್ಯಕಾರರ ಅಭಿಪ್ರಾಯಕ್ಕೆ ವಿಲಕ್ಷಣವಾಗಿ ಸರ್ವರಿಗೂ ಬ್ರಹ್ಮವಿದ್ಯಾಧಿಕಾರವನ್ನು ಸಮರ್ಥಿಸಿರುವ ಶ್ರೀಪತಿಪಂಡಿತಾರಾಧ್ಯರ ಸಾಮಾಜಿಕತೆಯನ್ನೂ ಔದಾರ್ಯವನ್ನೂ ಮರೆಯುವುದು ಹೇಗೆ ಸಾಧ್ಯ ? ಆದ್ದರಿಂದಲೇ ಮುಕ್ತಫಲಾಧಿಕರಣದಲ್ಲಿ-

"ಭಲ್ಲಾಣ, ಚಿರುತೊಂಡ, ಚಾರಮ, ನೇಮಾರಾಧ್ಯ, ಉದ್ಭಟಾರಾಧ್ಯ ಮುಂತಾದವರು ಶರೀರದಿಂದ, ರಾಜ್ಯದಿಂದ, ಪರಿವಾರದಿಂದ, ಗ್ರಾಮದಿಂದ ಶಿವಲೋಕವನ್ನೇರಿದರು." ಎಂದ ಮೇಲೆ ಬ್ರಹ್ಮಪ್ರಾಪ್ತಿಗೆ ವರ್ಣಾಶ್ರಮಾದಿಗಳು ಹೇಗೆತಾನೆ ಕಾರಣವೆಂದು ಹೇಳಲಾದೀತು. ಇದೆಲ್ಲ ಮುಖ್ಯವಾಗಿ-"ಶಿವಭಕ್ತಿಯ ಪ್ರಭಾವ." ಎಂದು ಅಲ್ಲಿ ಸಮರ್ಥಿಸಲಾಗಿದೆ. ಆದ್ದರಿಂದಲೇ ಪೂಜ್ಯರಾದ ಶ್ರೀಪತಿಪಂಡಿತ-ಭಗವತ್ಪಾದರು ಶಿವಭಕ್ತರ ಪಾಶಸ್ತ್ಯವನ್ನು ಪ್ರಕಾಶಪಡಿಸುವುದಕ್ಕಾಗಿ ಚೀನಾಂಬರದಲ್ಲಿ ಬೆಂಕಿಯನ್ನು ಬಂಧಿಸಿ ಬನ್ನೀಮರಕ್ಕೆ ಕಟ್ಟಿದ ಪವಾಡವನ್ನು ಮೆರೆದಿರುವುದು ಶಿಲಾಶಾಸನಾದಿಗಳಲ್ಲಿ ಉಲ್ಲೇಖಿತವಾಗಿರುವುದಂತೂ ಸುಪ್ರಸಿದ್ಧ.

(ಖ) ಶಿಖಾಸೂತ್ರಧಾರಣವನ್ನು ಕುರಿತು ಒಂದು ಮಾತು– ಬಸವಾವತಾರಕ್ಕಿಂತ ಹಿಂದೆ ವೀರಶೈವರಲ್ಲಿ ಕೆಲವರು ಎಂದರೆ ಆರಾಧ್ಯ-ಬ್ರಾಹ್ಮಣಸಂಪ್ರದಾಯದಲ್ಲಿ ಲಿಂಗಧಾರಣದ ಜೊತೆಗೆ ಶಿಖೆ ಮತ್ತು ಯಜ್ಞೋಪವೀತಗಳನ್ನು ಧರಿಸುವ ಪದ್ಧತಿ ಇತ್ತು. ಶಿಖಾ-ಸೂತ್ರಗಳು ಪ್ರಾಕೃತವರ್ಣಾ-ಶ್ರಮಸಂಕೇತಗಳೆಂದು ವೀರಶೈವರಲ್ಲಿ ಅವುಗಳಿಗೆ ಮಾನ್ಯತೆ ಇರಲಿಲ್ಲ. ಆದರೂ ಆ ಸಂಪ್ರದಾಯ ದಲ್ಲಿ ಶಿಖಾಸೂತ್ರಗಳ ಬಳಕೆಯಿತ್ತು. ಬಸವಾವತಾರದ ತರುವಾಯ ಋಷಿಕಲ್ಪರಾದ ಶಿವಶರಣರಿಂದ ಅನುಭವಮಂಟಪದಲ್ಲಿ ವೀರಶೈವವು ಪರಿಷ್ಕೃತಗೊಂಡು ಶಿಖಾಸೂತ್ರಗಳು ಸಂಪೂರ್ಣನಿಷೇಧಿಸ ಲ್ಪಟ್ಟವು. ವೀರಶೈವ-ಉತ್ಕೃಷ್ಟವಾದ ಆಚಾರ-ವಿಚಾರಗಳನ್ನು ಮನಗಂಡ ಎಲ್ಲ ಸಂಪ್ರದಾಯಗಳೂ ವೀರಶೈವದೀಕ್ಷೆ ಪಡೆದರು. ಅವರಲ್ಲಿ ಮೊದಲು ಪರಿವರ್ತಿತರಾದವರೇ ಪ್ರತಿಷ್ಠಿತ ಸಂಪ್ರದಾಯದ ಆರಾಧ್ಯಬ್ರಾಹ್ಮಣರು. ಬಸವಣ್ಣನೂ ಅವರಲ್ಲಿ ಒಬ್ಬ. ಅಂದು ಆಂಧ್ರ-ಕರ್ನಾಟಕಗಳಲ್ಲಿ ರಾಜ ಗುರುಪದವಿಗಳಲ್ಲಿ ವಿರಾಜಮಾನರಾಗಿದ್ದ ಕಾಳಾಮುಖರಲ್ಲಿಯೂ ಲಿಂಗಧಾರಣವಿತ್ತು ; ಎಂಬುದು ಹಿಂದೆ ಸ್ಪಷ್ಟವಾಗಿದೆ. ಶ್ರೀಪತಿಪಂಡಿತ, ಮಂಚಣಪಂಡಿತ, ಮಲ್ಲಿಕಾರ್ಜುನಪಂಡಿತ, ವೇಮಾರಾಧ್ಯ ಮುಂತಾದವರು ಮುಖ್ಯರು ; ಎಂದು ಇತಿಹಾಸದಿಂದ ವೇದ್ಯವಾಗುತ್ತಿದೆ.

ಬ್ರಾಹ್ಮಣಾ ವೀರಶೈವಸ್ಥಾ ಶಿಖಾಯಜ್ಞೋಪವೀತಿನಃ ।
ಲಿಂಗ-ರುದ್ರಾಕ್ಷ-ಭಸ್ಮಾಂಕಾ ಬ್ರಹ್ಮಕರ್ಮಸಮನ್ವಿತಾಃ ॥
[ಮುಂಡಕೋಪನಿಷತ್ ಭಾಷ್ಯಂ ಪು. 128]

ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ಇದರಿಂದ ವೀರಶೈವರಲ್ಲಿ ಇಷ್ಟಲಿಂಗದೊಂದಿಗೆ ಶಿಖೆ ಮತ್ತು ಯಜ್ಞೋಪವೀತಗಳನ್ನು ಧರಿಸು ತ್ತಿದ್ದ ಆರಾಧ್ಯಸಂಪ್ರದಾಯದ ವೀರಶೈವರು ಮತ್ತು ಕೇವಲ ಇಷ್ಟಲಿಂಗಧಾರಿ ವೀರಶೈವರು, ಎಂಬ ಎರಡು ಪಂಗಡಗಳು ಇದ್ದುದು ವೇದ್ಯವಾಗುತ್ತದೆ.

ಹಿಂದೆ ಉದಾಹರಿಸಿದ ಗೌತಮ ಸ್ಮೃತಿಯಲ್ಲಿ–

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಮ್ ।
ಶಿಖಾಸೂತ್ರಂ ತಥಾ ಭಸ್ಮ ಇತಿ ಬ್ರಾಹ್ಮಣಲಕ್ಷಣಮ್ ॥
(ಸಂ I-267)

ಎಂದರೆ ಇಷ್ಟಲಿಂಗದ ಜೊತೆ ಶಿಖೆ ಮತ್ತು ಸೂತ್ರವನ್ನು ಧರಿಸಬೇಕೆಂದಿರುವಂತೆ ಅದೇ ಭಾಷ್ಯವು 209 ರಲ್ಲಿ–

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಮ್ ।
ರುದ್ರಾಕ್ಷಂ ಚ ತಥಾ ಭಸ್ಮ ಹ್ಯೇತದ್ಬ್ರಾಹ್ಮಣಲಕ್ಷಣಂ ॥

ಎಂದು ಇಷ್ಟಲಿಂಗದ ಜೊತೆ ಶಿಖಾ-ಸೂತ್ರಗಳಲ್ಲಿದ್ದ ವೀರಶೈವಲಕ್ಷಣವೂ ಉಕ್ತವಾಗಿದೆ.

ಆದ್ದರಿಂದ ಕ್ರಿ. ಶ. ಹನ್ನೊಂದನೆಯ ಶತಮಾನದ ವೀರಶೈವರಲ್ಲಿ ಕೆಲವರು ಶಿಖಾ-ಸೂತ್ರ ಧಾರಿಗಳೂ ಮತ್ತು ಶಿಖಾ-ಸೂತ್ರಗಳಿಲ್ಲದ ಕೇವಲ ಇಷ್ಟಲಿಂಗಧಾರಿಗಳೂ ಇದ್ದುದು ವ್ಯಕ್ತವಾಗುತ್ತದೆ.

ಆದ್ದರಿಂದಲೇ ಸಿದ್ಧಾಂತಶಿಖಾಮಣಿಯಲ್ಲಿ ರೇಣುಕಾಚಾರ್ಯರು "ಮಾನವರಲ್ಲಿ ವಿಶುದ್ಧರು ಮತ್ತು ಪ್ರಾಕೃತರೆಂದು ಎರಡು ಬಗೆ. ಶಿವಸಂಸ್ಕಾರಿಗಳು ಶುದ್ಧರು ; ಇತರರು ಪ್ರಾಕೃತರು. ಇನ್ನು ವರ್ಣಾಶ್ರಮಾದಿಧರ್ಮಗಳೂ ಎರಡು ವಿಧ. ಒಂದು ಶಿವನಿಂದ ಆಗಮಗಳಲ್ಲಿ ಹೇಳಿದ್ದು. ಮತ್ತೊಂದು ಚತುರ್ಮುಖ ಬ್ರಹ್ಮನಿಂದ ಬಂದದ್ದು. ಶಿವಾಶ್ರಮಿಗಳು ಶಿವೋಕ್ತವಾದ ಧರ್ಮನಿಷ್ಠರು ; ಶಿವ ಸಂಸ್ಕಾರವಿಲ್ಲದವರು ಪಿತಾಮಹನಿಂದ ಸ್ಮೃತ್ಯಾದಿಗಳಲ್ಲಿ ಉಕ್ತವಾದ ಧರ್ಮವನ್ನು ಆಚರಿಸುವರು. ಬೆಂಕಿಯಲ್ಲಿ ಸುಟ್ಟ ಸೌದೆಗಳಲ್ಲಿ ಹೇಗೆ ಆಯಾ ಸೌದೆಯ ರೂಪವಿರುವುದಿಲ್ಲವೋ ಅವರಂತೆ ಶಿವ ಸಂಸ್ಕಾರಪಡೆದವರಲ್ಲಿ ಅವರ ಹಿಂದಿನ ವರ್ಣಾಶ್ರಮಾದಿಜಾತಿಭೇದವಿರುವುದಿಲ್ಲ. ಆದ್ದರಿಂದ ಸರ್ವಪ್ರಯತ್ನದಿಂದಲೂ ಶಿವಸಂಸ್ಕಾರಿಯಾದವನು ಜಾತಿಭೇದವನ್ನೇ ನಂಬಬಾರದು." (ಸಿ. ಶಿ. ಪರಿ. ೧೦) ಇದರಿಂದ ಅಂದಿನ ವೀರಶೈವರನ್ನು 'ಸಹಜ ವೀರಶೈವ' ಮತ್ತು 'ಆಗಂತು ವೀರಶೈವ' ಎಂದು ಎರಡು ಪಂಗಡಗಳಾಗಿ ವಿಂಗಡಿಸಬಹುದು.

**ಆಗಂತುಕ ಮತ್ತು ಸಹಜ ವೀರಶೈವತ್ವ ನಿರ್ಣಯ**

ಯಾರು ಪರಂಪರೆಯಿಂದ ವೀರನಂದಿ ಮುಂತಾದ ಅಪ್ರಾಕೃತ-ಪ್ರಮಥಗೋತ್ರ-ಪ್ರವರ ನಾದ ಗುರುಗಳಿಂದ ಶಿವದೀಕ್ಷೆ ಪಡೆದು, ಅವರು ಬೋಧಿಸಿದ ಅಷ್ಟಾವರಣ-ಪಂಚಾಚಾರ-ಷಟ್‌ಸ್ಥಲ-ಮಾರ್ಗದಲ್ಲಿ ನಡೆಯುವರೋ ಅವರು "ಸಹಜ ವೀರಶೈವರು." ಉದಾಹರಣೆಗೆ ಪಾಲ್ಕುರಿಕೆ ಸೋಮ ನಾಥನು ತಾನು ಭೃಂಗಿರಿಟಿ-ಗೋತ್ರಜಾತನೆಂದು ಹೇಳಿಕೊಂಡಿದ್ದಾನೆ. ಆತನ ಅನುಭವಸಾರ ಎಂಬ ಆಂಧ್ರ ಪದ್ಯಪ್ರಬಂಧದಲ್ಲಿ–

"ಭೃಂಗಿರಿಟಿಗೋತ್ರುಡನು ಗುರು
ಲಿಂಗತನೂಜುಂಡ ಶಿವಕುಲೀನುಡದುರ್ವ್ಯಾ।
ಸಂಗವಿವರ್ಜ್ಯ ಚರಿತುಡ
ಜಂಗಮಲಿಂಗಪ್ರಸಾದಸತ್ಕಾಣುಂಡನ್"

ಎಂದು ಹೇಳಿದ್ದಾನೆ. ಅವನ ಬಸವಪುರಾಣದಲ್ಲಿಯೂ ಕೂಡ "ಭೃಂಗಿರಿಟಿಗೋತ್ರ-ಸಂಭವ" ನೆಂದು ಹೇಳಿದೆ.

'ಇನ್ನು ಆರಾಧ್ಯ-ಬ್ರಾಹ್ಮಣರಾದರೆ ಲಿಂಗಯಜ್ಞೋಪವೀತಿಗಳು. "ಲಿಂಗಯಜ್ಞೋಪವೀತಿ" ಪದದ ನಿರ್ವಚನವು ಹೀಗಿದೆ- "ಲಿಂಗಂ ಚ ಯಜ್ಞೋಪವೀತಂ ಚ ಯಸ್ಯ ಸಃ ಲಿಂಗ-ಯಜ್ಞೋಪವೀತಿ" ಎಂದು. ಇಲ್ಲಿ ಬ್ರಹ್ಮಕರ್ಮಾಧಿಕಾರಕ್ಕಾಗಿ ತಂತುಮಯ ಯಜ್ಞೋಪವೀತಧಾರಣ ಮುಕ್ತಿಗಾಗಿ ಲಿಂಗಧಾರಣ ; ಎಂದು ಅವರು ಸಮರ್ಥಿಸುತ್ತಾರೆ. ಎಂದರೆ– ಶ್ರೀಪತಿ ಮೊದಲಾದ ಆಚಾರ್ಯರು ಪೂರ್ವಾಶ್ರಮದಲ್ಲಿ ಯಥಾರೀತಿಯಲ್ಲಿಯೇ ಇದ್ದರೂ ತರುವಾಯ ಶ್ರೀರೇಣುಕಾದಿಆಚಾರ್ಯ-ಪ್ರವರರಾದ ಆಚಾರ್ಯರಿಂದ ಶಿವದೀಕ್ಷೆಯನ್ನು ಪಡೆದ ಲಿಂಗಯಜ್ಞೋಪವೀತಿಗಳು ಆಗಿದ್ದರು. ಈ ದೃಷ್ಟಿಯಲ್ಲಿ "ಲಿಂಗವೇ ಯಜ್ಞೋಪವೀತವು ಯಾರಿಗೋ ಅವರು ಲಿಂಗಯಜ್ಞೋಪವೀತಿಗಳು" ಎಂಬ[1] ನಿರ್ವಚನವು ಶ್ರುತವಾಗುತ್ತದೆ. ಲಿಂಗಕ್ಕೆ ಲಿಂಗಯಜ್ಞೋಪವೀತವೆಂಬ ಸಂಜ್ಞೆಯನ್ನು ಹೀಗೆ ಸಮರ್ಥಿಸಲಾಗಿದೆ– "ನಾರಾಯಣಸ್ಯ ಶಕ್ತಿಸೀಕತ್ವಂ ಪುರಾಣೇಷು ಪ್ರಸಿದ್ಧಂ." 'ಯಜ್ಞೋ

[1] ಲಿಂಗಮೇವ ಯಜ್ಞೋಪವೀತಂ ಯಸ್ಯ ಸಃ ಲಿಂಗಯಜ್ಞೋಪವೀತೀ.

ನ್ವೈ ವಿಷ್ಣುಃ' ಇತಿ ಶ್ರುತೇಃ ಯಜ್ಞಸ್ಯ ವಿಷ್ಣುನಾಮ್ನಃ ಪೀಠಸ್ಯ ಉಪ-ಸಾಮೀಪ್ಯೇನ- ಇತಂ, ಲಿಂಗಂ ಯಜ್ಞೋಪವೀತಮಿತ್ಯರ್ಥಃ" ಎಂದರೆ– "ನಾರಾಯಣನು ಲಿಂಗಕ್ಕೆ ಶಕ್ತಿರೂಪಪೀಠ; ಎಂಬುದು ಪುರಾಣಪ್ರಸಿದ್ಧ. 'ಯಜ್ಞೋ ವೈ ವಿಷ್ಣುಃ' ಎಂಬ ಶ್ರುತಿಯಿಂದ 'ಯಜ್ಞ' ಎಂಬ ವಿಷ್ಣು ರೂಪ-ಪೀಠದ 'ಉಪ' ಸಮೀಪದಲ್ಲಿ ವಿಶೇಷವಾಗಿ 'ಇತಂ' ಇರುವ 'ಲಿಂಗಂ' ಲಿಂಗವೇ ಯಜ್ಞೋಪ ವೀತ; ಅಥವಾ ಯಜ್ಞ; ಎಂದರೆ– ಪೂಜೆ; ಪೂಜ್ಯವಾದ ಉಪವೀತ; ಎಂದು ಅರ್ಥ.[1]

ಪ್ರಕೃತ ಶ್ರೀಪತಿಪಂಡಿತಾರಾಧ್ಯ ಮುಂತಾದವರು ಪೂರ್ವಾಶ್ರಮದಲ್ಲಿ ಋಷಿಗೋತ್ರದ ಬ್ರಾಹ್ಮಣ-ಧರ್ಮಾನುಯಾಯಿಗಳು. ಅವರಲ್ಲಿ ಶ್ರೀಪತಿಗಳು ಮೊದಲು ಕೌಶಿಕ ಗೋತ್ರಕ್ಕೆ ಸೇರಿದವರು. ಶ್ರೀಪತಿ-ಪಂಡಿತಾರಾಧ್ಯವಂಶ-ಸಂಭವನೆಂದು ಹೇಳಿಕೊಂಡಿರುವ ವೀರಣಾಮಾತ್ಯನು ತನ್ನ "ಪಟ್ಟಾಭಿರಾಮವಿಲಾಸ" ದಲ್ಲಿ–

"... ಕವಿತಾಧುರೀಣ-ಕೌಶಿಕಗೋತ್ರಪವಿತ್ರ-ಶ್ರೀಪತಿಪಂಡಿತಾರಾಧ್ಯವಂಶಪಯಃ-ಪಯೋ-ರಾಶಿರಾಕಾಸುಧಾಕರಾಯಮಾನ-ಶಂಭುಲಿಂಗಾರಾಧ್ಯಪೌತ್ರ-ವೀರಾರಾಧ್ಯ. . . ." ಎಂದು ಹೇಳಿದ್ದಾನೆ.

ಇದರಂತೆ ಮಂಚನ-ಪಂಡಿತರೂ ಕೂಡ ಹಿಂದೆ ಅತ್ರಿ-ಗೋತ್ರಕ್ಕೆ ಸೇರಿದವರು. ಕಾಶೀ ಕಾಂಡದ ಚನ್ನವೀರಕೃತ "ಕಾಶಕೃತ್ಸ್ನಶಬ್ದಧಾತುಕಲಾಪ"[2]ದಲ್ಲಿ "ಯಾಗಂಟಿ-ಶಂಭುಲಿಂಗ-ಪ್ರಸಾದಿನಾ ತಿತ್ತಿರಿಯಜುಶ್ಶಾಖಾಧ್ಯಯನಸ್ಯ ವಾಮದೇವಮುಖೋದ್ಭೂತಸ್ಯ ಗಜಕರ್ಣಪುತ್ರಸ್ಯ ಅತ್ರಿ-ಗೋತ್ರಸ್ಯ ವೀರಮಾಹೇಶ್ವರಸೂತ್ರಸ್ಯ ಶಿವಲೆಂಕಮಂಚನಪಂಡಿತಾರಾಧ್ಯಪ್ರವರಸ್ಯ ...." ಎನ್ನಲಾಗಿದೆ.

ಉದ್ಭಟಾರಾಧ್ಯನೂ ಕೂಡ–

"ಜಾತಃ ಶಿವಾಂಶೇನ ಸದುದ್ಭಟಾಖ್ಯೋ ಧರ್ಮಾರ್ಥಕಾಮಾಮೃತದಾನದಕ್ಷಃ |
ತದುದ್ಭಟಾರಾಧ್ಯಗುರುಂ ಮಹೇಶೋ ಮುದಾ ಭರದ್ವಾಜಮುನೀಂದ್ರಚಂದ್ರಾತ್ ||
ಪ್ರಕಾಶಯಾಮಾಸ ಮಹಾಪ್ರಮೋದಾತ್ ಜಾತಾದಿಕಾನ್ಯಾಜುಷವೇದಸಿದ್ಧಾನ್ ||"

ಮುಂತಾಗಿ ಉದ್ಭಟಾರಾಧ್ಯರು ಹಿಂದೆ ಭರದ್ವಾಜಮುನೀಂದ್ರನಿಂದ ಜಾತಕರ್ಮಾದಿಗಳನ್ನೂ ಹೊಂದಿ, ತರುವಾಯ ವೇದೋಕ್ತವಿಧಿಯಿಂದ ಶಿವದೀಕ್ಷೆ ಪಡೆದರು."[3]

ಎಂಬುದರಿಂದ ಶ್ರೀಪತಿ ಮೊದಲಾದ ಆಚಾರ್ಯರು ವೀರಶೈವಕ್ಕೆ 'ಆಗುಂತಕರು' ಎಂಬುದು ಸ್ಪಷ್ಟವಾಗುತ್ತದೆ. ಇದರಂತೆ ಮಲ್ಲಿಕಾರ್ಜುನ-ಪಂಡಿತರೂ ಕೂಡ ತಮ್ಮ ಬಸವಸ್ತುತಿಯಲ್ಲಿ–

---

[1] ವೇದಾಂಸಾರ ವೀರಶೈವ ಚಿಂತಾಚಾಮಣಿ : ಪು. ೭, ಪು. ೧೬೮, (ಸೋಲಾಪುರ ಪ್ರಕಟನೆ 1908)

[2] ಡೆಕ್ಕನ್ ಕಾಲೇಜ್ ಪೂನಾ ಪ್ರಕಾಶನ, ಡಾ|| ಎ. ಎಸ್. ನರಸಿಂಹಯ್ಯ ಸಂಪಾದಿತ.

[3] "ಭೈರವಾರಾಧ್ಯ ವಂಶಾವಲಿ"– ಶ್ರೀಕರಭಾಷ್ಯ (ಪ್ರಥಮಪಾದ) ಆಂಧ್ರಾಕ್ಷರಮಯ (ಸಿಕಿಂದ್ರಾಬಾದ್, ತಿರುಮಲ ಬೀದಿಯಲ್ಲಿರುವ ಲಕ್ಷ್ಮೀವಿಲಾಸ ಮುದ್ರಾಕ್ಷರಮಾಲೆಯಲ್ಲಿ ಮುದ್ರಿತ–1893)

" ಭಕ್ತಿಮಿಾದಿ ವಲವು ಬ್ರಾಹ್ಮ್ಯಂಬುತೋ ಬೊತ್ತುಬಾಯಲೇಸು ಬಸವಲಿಂಗ " ಎಂಬಲ್ಲಿ ' ಎಲೈ ಬಸವೇಶ್ವರ, ನಿನ್ನ ಭಕ್ತಿಗೆ ಪರವಶನಾಗಿದ್ದೇನೆ. ಆದರೂ ಇಂದಿಗೂ ನನಗೆ ಬ್ರಾಹ್ಮ್ಯದ ಅಭಿಮಾನ ಬಿಟ್ಟಿಲ್ಲ " ಎಂದು ಸ್ತುತಿಸಿದ್ದಾರೆ.

ಬಸವೇಶ್ವರರಿಗೆ ಹಿಂದೆ ಇದ್ದ ಶ್ರೀಪತಿಪಂಡಿತ ಮೊದಲಾದ ವಿದ್ವಾಂಸರ ವಿಚಾರ ವಂತಿರಲಿ: ಸ್ವಯಂ ಬಸವೇಶ್ವರರೂ ಕೂಡ ಪೂರ್ವಾಶ್ರಮದಲ್ಲಿ ಬ್ರಾಹ್ಮಣೋಚಿತವಾದ ಉಪ ನಯನ ಸಂಸ್ಕಾರವನ್ನುಹೊಂದಿ, ತರುವಾಯ "ಕರ್ಮಲತೆ"ಯಂತಿದ್ದ "ಜನಿವಾರ"ವನ್ನು ತ್ಯಜಿ ಸಿದರೆಂದು ಮಹಾಕವಿ ಹರಿಹರ ಬಣ್ಣಿಸಿದ್ದಾನೆ ಬಸವರಾಜದೇವರ ರಗಳೆಯಲ್ಲಿ. ಸ್ವಯಂ ಹರಿಹರನೂ ಕೂಡ ಜಾತಿಯಲ್ಲಿ ಬ್ರಾಹ್ಮಣ. ಅವನ ತಾಯಿ-ತಂದೆಗಳು ಶರ್ವಾಣೀ-ಮಹದೇವ ಎಂಬುವರು.[1] ಆತನೂ ಕೂಡ ಬ್ರಾಹ್ಮಣ ಸಹಜವಾದ ಉಪನಯನವನ್ನು ತಿರಸ್ಕರಿಸಿ ಪಂಪಾ ಕ್ಷೇತ್ರದಲ್ಲಿದ್ದ ಸಹಜ ವೀರಶೈವಾಚಾರ್ಯರೆನಿಸಿದ್ದ " ಶಂಕರಾಚಾರ್ಯ "ರೆಂಬ ವೀರಶೈವಾಚಾರ್ಯರಿಂದ ದೀಕ್ಷೆಪಡೆದನು.

ಹರಿಹರ ಮಹಾಕವಿಯ ಅಳಿಯ ಮಹಾಕವಿ ರಾಘವಾಂಕ. ಆತ ಶಿರೋಲಿಂಗಧಾರಿ. " ಶಿಖಾಯಜ್ಞೋಪವೀತಗಳಿಂದ ಕೂಡಿದ ಆತ ಸಾಕ್ಷಾತ್ ಶಿವನಂತೆ ಗುರು (ಹರಿಹರ) ವಿನ ಸಮಿಾ ಪಕ್ಕೆ ಆಗಮಿಸಿದನು.

" ಮಿಸುಪಜಡೆಮುಡಿಯಿಂದೆ ಷಟ್ಕುಂಡಲದಿ ಶಿರದೊಳೆಸೆವ ಶಿವಲಿಂಗದಿಂ ... ಯಜ್ಞಸೂತ್ರ ದಿಂ ರಂಜಿಸುತೆರಡನೆಯ ಶಿವನಂತೆ "[2]– ಎಂದು ವರ್ಣಿತನಾಗಿದ್ದಾನೆ.

ಈ ಇಬ್ಬರು ಕವಿವರರ ಸಮಕಾಲಿನನೂ ಹೊಯ್ಸಳ ವಂಶದ ನರಸಿಂಹಬಲ್ಲಾಳ ಅರಸನ ಆಸ್ಥಾನದಲ್ಲಿ ಪ್ರಧಾನಾಮಾತ್ಯನೂ ಆಗಿದ್ದ ವೀರಶೈವಾಚಾರ್ಯ " ಕೆರೆಯಪದ್ಮರಸ "ನೂ ಕೂಡ " ಉರುಯಜ್ಞಸೂತ್ರಮುಂ ಶಕ್ತಿ ತ್ರಯೋರುಗುಣಯುತ ಸೂತ್ರದೊಡನೆ ಕೂಡಿ "[3]ದ್ದನಂತೆ.

## ಶ್ರೀಪತಿಯ ಗುರುಪರಂಪರೆ

ಶ್ರೀಕರಭಾಷ್ಯದ. ಪ್ರಾರಂಭದಲ್ಲಿ ಶಂಕರತತ್ತ್ವವಿದರಾದವರ ಮಧ್ಯದಲ್ಲಿ ' ಸದಾಶಿವ-ಶಕ್ತಿಧರ-ಸುಕೇಶ-ಚಂಡೀಶ್ವರ-ಭೃಂಗಿರಿಟಿ-ಶಿಲಾದ-ಕುಂಭೋದ್ಭವ-ವಾಮದೇವಾದಿಗಳ ಪಂಕ್ತಿಯಲ್ಲಿ ರೇವಣಾಸಿದ್ಧಗುರುವೂ ಸಂಸ್ತುತರಾಗಿದ್ದಾರೆ.

ಇಲ್ಲಿ ಸ್ತುತರಾದ ಶಕ್ತಿಧರಾದಿಗಳು ಕೈಲಾಸದಲ್ಲಿರುವ ಪ್ರಮಥ ಮುಖ್ಯರು ; ಕುಂಭೋದ್ಭ ವನು ಪ್ರಸಿದ್ಧ ಅಗಸ್ತ್ಯ. ಆತ ಆದಿರೇಣುಕಾಚಾರ್ಯರಿಂದ ಶಿವಸಿದ್ಧಾಂತವನ್ನು ಉಪದೇಶಮುಖ

---

[1] ಹರಿಹರ ಕವಿಕೃತ " ಗಿರಿಜಾಕಲ್ಯಾಣ "ದ ಕಾವ್ಯ ಪ್ರಸ್ತಾವನೆ. ಡಾ॥ ಎಸ್. ಸಿ. ನಂದೀ ಮಠ ಅವರಿಂದ ಸಂಪಾದಿತ 1968.

[2] ರಾಘವಾಂಕ ಚರಿತೆ– ಸಂಪಾದನೆಯ ಸಿದ್ಧನಂಜೇಶ ವಿರಚಿತ.

[3] ಪದ್ಮರಾಜಪುರಾಣ– ಪದ್ಮಣಾಂಕ ಕವಿವಿರಚಿತ. (ಸಂ. ೭. ಪ. ೧೬.)

ದಿಂದ ಪಡೆದನೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ. ವಾಮದೇವನು ಮಹರ್ಷಿ, ರೇವಣಸಿದ್ಧರು ಐತಿಹಾಸಿಕ ಆಚಾರ್ಯರು ; ಅವರು ಕ್ರಿ. ಶ. ೧೧-೧೨ ಶತಮಾನಗಳಲ್ಲಿ ಕರ್ಣಾಟಕ-ಆಂಧ್ರ-ದ್ರವಿಡ-ಮಹಾರಾಷ್ಟ್ರ ಪ್ರಾಂತಗಳಲ್ಲಿ ಶಿವಧರ್ಮವನ್ನು ಬೋಧಿಸಿದವರು.

ಇಲ್ಲಿ ' ಶಿವಾಚಾರವಿಚಾರದೀಕ್ಷಂ, ಸ್ವಶಿಷ್ಯಸಪ್ರೀಣನಪೂರ್ಣಪಕ್ಷಂ, ದುರ್ವಾರಕಾಮಾದಿ ವಿದಾರ ದಕ್ಷತ್ವದಿಂದ ವರ್ಣಿತರಾದ ರೇವಣರು ಕಲ್ಪವೃಕ್ಷವೆಂದು ವರ್ಣಿತರಾಗಿದ್ದಾರೆ.

ಆ ರೇವಣಸಿದ್ಧರ ಸಾಕ್ಷಾತ್ ಶಿಷ್ಯರೇ ಮರುಲಸಿದ್ಧರು ; ಏಕೆಂದರೆ ಈ ಮರುಲಸಿದ್ಧರು ರೇವಣ ದೇಶಿಕೇಂದ್ರರಿಂದ " ಧೃತಷಡ್ಲಿಂಗಾವಧಾನೋಜ್ವಲಂ " ಎಂದು ವರ್ಣಿತರಾಗಿದ್ದಾರೆ. ಇದರಿಂದ ಈ ಮರುಲಸಿದ್ಧರೂ ಕೂಡ ವೀರಶೈವಾಚಾರ್ಯಪಂಚಕದಲ್ಲಿ ಉಕ್ತರಾದ ಜ॥ಮರುಳಾರಾಧ್ಯ ಭಗವತ್ಪಾದರಲ್ಲ. ಪರಶಿವನ ಪಂಚಮುಖೋದ್ಭವರಾದ ಪಂಚಾಚಾರ್ಯರು ಸ್ವತಂತ್ರರು ; ಸ್ವಯಂ ಪರಶಿವ ಸ್ವರೂಪರು. ಕಡೆಯಲ್ಲಿ ಸ್ತುತರಾಗಿರುವ ಏಕೋರಾಮರೂ ಕೂಡ ಹಿಮವತ್ಕೇದಾರ ಪೀಠಾಧಿಪತಿಗಳೆಂದು ವರ್ಣಿತರಾಗಿರುವ ಜ॥ಏಕೋರಾಮ ಶಿವಾಚಾರ್ಯರಲ್ಲ ; ಏಕೆಂದರೆ ಅದನ್ನು ಪ್ರತಿಪಾದಿಸುವ ಯಾವ ವಿಶೇಷಣಗಳೂ ಅಲ್ಲಿ ಹೇಳಿಲ್ಲ.

ಇಲ್ಲಿ ವರ್ಣಿತರಾಗಿರುವ ಏಕೋರಾಮರು ಐತಿಹಾಸಿಕರು ಮತ್ತು ಶ್ರೀಪತಿಯ ಸಾಕ್ಷಾತ್ ಗುರುಗಳು. ರೇವಣಸಿದ್ಧ-ಮರುಳಸಿದ್ಧ-ಏಕೋರಾಮ ಎಂಬ ಆಚಾರ್ಯತ್ರಯವನ್ನು ಆದಯ್ಯ ಎಂಬ ಶರಣನು ತನ್ನ ಒಂದು ವಚನದಲ್ಲಿ ಹೀಗೆ ಸ್ಮರಿಸಿದ್ದಾನೆ. " ರೇವಣಸಿದ್ಧಯ್ಯ ದೇವರನಿಷ್ಠೆ... ಮರುಳಸಿದ್ದಯ್ಯದೇವರ ಅದೃಷ್ಟ ಪ್ರಸಾದನಿಷ್ಠೆ, ಏಕೋರಾಮಯ್ಯಗಳ ಆಚಾರನಿಷ್ಠೆ, ಪಂಡಿತಾರಾಧ್ಯನ ಸ್ವಯಂಪಾಕ " (ಶಿವಾನುಭವ ಗ್ರಂಥಮಾಲೆ ಪು. ೧೬-೧೭) " ರೇವಣಸಿದ್ಧೇಶನೆನ್ನ ಸ್ತೋತ್ರ.... ಮರುಳಸಿದ್ಧೇಶ್ವರ ದೇವರೆನ್ನ ಶ್ರೋತ್ರ, ಪಂಡಿತಾರಾಧ್ಯರೆನ್ನ ಜಿಹ್ವೆ, ಏಕೋರಾಮ ತಂದೆಗಳೆನ್ನ ನಾಸಿಕ " (ವ. ೪೦) ಎನ್ನಲಾಗಿದೆ.

ದ್ವಾಪರಾ[1]ಚಾರ್ಯರೆಂದು ವರ್ಣಿತರಾಗಿರುವ ಇವರೂ ಕೂಡ ' ಮರುಳಸಿದ್ಧರ ಸಮಕಾಲೀನರು ' ಎಂದು ಊಹಿಸಬಹುದು ; ಏಕೆಂದರೆ ಇವರು ಮರುಳಸಿದ್ಧರ ತರುವಾಯ ಸ್ಮೃತರಾಗಿದ್ದಾರೆ.

ಈ ಏಕೋರಾಮರು " ವೇದಾಂತಶಾಸ್ತ್ರೋಭಯಗತವಿಲಸತ್ ಶೈವಸಂಸ್ಥಾಪನಾಢ್ಯರೂ ಪೂರ್ವಾಚಾರ್ಯಪ್ರಸಿದ್ಧರೂ ಆದ " **ದೇಶಿಕೇಂದ್ರ** "ರಾಗಿದ್ದರು. ಎಂಬುದರಿಂದ ಈ ಆಚಾರ್ಯರ ಪಾಂಡಿತ್ಯಾದಿಗಳು ಚನ್ನಾಗಿ ಸೂಚಿತವಾಗಿವೆ. ಇವರೇ ಹಿಂದೆ ಹೇಳಿದ " ಶ್ರೀಶೈಲಪಂಡಿತಾರಾಧ್ಯ ಚರಿತೋಕ್ತರಾದವರು. ಇವರು ವಾದದಲ್ಲಿ ನಿರ್ಜಿತನಾದ ಶ್ರೀಪತಿಗೆ ಶಿವದೀಕ್ಷೆ ನೀಡಿದ " ದೇಶಿಕೇಂದ್ರ "ರಾಗಿರಬೇಕೆಂಬುದು ಇದೀಗ ಸ್ಪಷ್ಟವಾಗುತ್ತದೆ.

ಆಗಮೋಕ್ತರಾದ ಶ್ರೀ ರೇಣುಕಾದಿಗಳು ಅತ್ಯಂತ ಪ್ರಾಚೀನರು. ಅವರ ಕಾಲವು ಅಗಸ್ತ್ಯ ಮುಂತಾದ ಮಹರ್ಷಿಗಳ ಕಾಲವೆಂಬುದು ಸುಸ್ಪಷ್ಟ. ಅವರ ಪವಿತ್ರ ನಾಮಗಳು ಪಾಲ್ಕುರಿಕೆ ಸೋಮನಾಥಕವಿ ವಿರಚಿತ " ಗಣಸಹಸ್ರನಾಮ "ದ ಪ್ರಾರಂಭದಲ್ಲಿ ಕಂಡುಬರುತ್ತವೆ.

---

[1] ಇಲ್ಲಿ 'ದ್ವಾಪರ'ಪದವು ಯುಗವಾಚಕವಲ್ಲ. ಪ್ರಾಯಃ ಅದು "ದ್ವಿಗುಣಿತ ಪಾವಿತ್ರ್ಯ" ಎಂಬ ಅರ್ಥದ್ದು.

### ಶ್ರೀಪತಿ ಪಂಡಿತಾರಾಧ್ಯರ ಶಿವದೀಕ್ಷಾ ಪ್ರಸಂಗ

ಪುಲ್ಲಿಕವಿ ವಿರಚಿತವಾದ ಶ್ರೀ ಶೈಲಪಂಡಿತಾರಾಧ್ಯ ಚರಿತೆಯಲ್ಲಿ ಪಂಡಿತಾಗ್ರೇಸರರೂ, ಸಕಲಶಾಸ್ತ್ರನಿಪುಣರೂ, ಪದವಾಕ್ಯ ಪ್ರಮಾಣಜ್ಞರೂ ಆದ ಶ್ರೀಪತಿಪಂಡಿತಾರಾಧ್ಯರ ಶಿವದೀಕ್ಷಾ ಪ್ರಸಂಗವನ್ನು ಕುರಿತು ಹೀಗೆ ಹೇಳಿದೆ. "ಶ್ರೀ ವಿರೂಪಾಕ್ಷ ದೇಶಿಕೇಂದ್ರ"ರು (ಕ್ರಿ. ಶ. ಸು. 1050) ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ಶೈಲಸೂರ್ಯಸಿಂಹಾಸನಾಧಿಷ್ಠಿತ ಜಗದ್ಗುರು ಪಂಡಿತಾರಾಧ್ಯಾನ್ವಯಕ್ಕೆ ಸೇರಿದವರು. ಇವರು ತಮ್ಮ ಸಂಚಾರಕಾಲದಲ್ಲಿ ಒಮ್ಮೆ ವಾರಾಣಸಿಗೆ ಆಗಮಿಸಿದ್ದರು. ಭಗವಂತನಾದ ವಿಶ್ವೇಶ್ವರನ ಆಲಯದಲ್ಲಿ ಇವರಿಗೆ ವೀರಶೈವ ಸಿದ್ಧಾಂತದ ಪ್ರಾಶಸ್ತ್ಯವನ್ನು ಕುರಿತು ಅಲ್ಲಿದ್ದ ಭೂಸುರರೊಡನೆ ಶಾಸ್ತ್ರಾರ್ಥವು ಏರ್ಪಟ್ಟಿತು. ಆ ಸಂದರ್ಭವು ಹೀಗೆ ವರ್ಣಿತವಾಗಿದೆ.

"ಕ್ಷಿತಿಸ:ರುಲಿನ್ವಿಥಂಬುನ ಪಚಿಂಚುಚುನುಂಡಗ ವಾರಿಲೋನಶ್ರೀ-
ಪತಿಯನು ಪಂಡಿತೋತ್ತಮುಡಭಂಗುರವೇದಪುರಾಣಶಾಸ್ತ್ರ ಸಂ।
ಗತುಲಪ್ರವೀಣುಡಬ್ಜಭವಕಲ್ಪುಡನಲ್ಪಕಳಾಪಿಚಕ್ಷಣುಂ-
ಡತುಲಿತ ವಿಶ್ವನಾಥಚರಣಾಂಬುಜಭಕ್ತಿವನರ್ಜಿಯಂಡಗನ್"

(ಆಶ್ವಾಸ. ೧-೨೧೧)

ಆ ವಾದದಲ್ಲಿ ಸೋತ ಶ್ರೀಪತಿ ಪಂಡಿತರು ಆಚಾರ್ಯರಿಗೆ ಶರಣಾಗಿ ಅವರಿಂದ ಶಿವದೀಕ್ಷೆ ಪಡೆದರು.

ತಮ್ಮ ದೀಕ್ಷಾ ಗುರುವಾದ ಈ ಆಚಾರ್ಯರನ್ನು ಭಾಷ್ಯದ ಪ್ರಾರಂಭದಲ್ಲಿ "ಏಕೋ-ರಾಮಸಿದ್ಧ," "ಏಕೋರಾಮಯತೀಂದ್ರಶೇಖರಶಿವಾಚಾರ್ಯ," "ದೇಶಿಕೇಂದ್ರ" ಮುಂತಾಗಿ ವರ್ಣಿಸಲಾಗಿದೆ.

### ಏಕೋರಾಮ ಮತ್ತು ವಿರೂಪಾಕ್ಷದೇಶಿಕೇಂದ್ರ*

ಶ್ರೀಪತಿಯ ದೀಕ್ಷಾಗುರುವಾದ ವಿರೂಪಾಕ್ಷದೇಶಿಕೇಂದ್ರರೇ ಭಾಷ್ಯಾರಂಭದಲ್ಲಿ "ಏಕೋ-ರಾಮಸಿದ್ಧಭಗವತ್ಪಾದ" ರೆಂದು ವರ್ಣಿತರಾಗಿದ್ದಾರೆ. "ಪೂರ್ವಾಚಾರ್ಯಪ್ರಶಿಷ್ಯಂ ಶರಣ ಮಹಮಿಮಂ ದೇಶಿಕೇಂದ್ರಂ ಪ್ರಪದ್ಯೇ (ಶ್ಲೋ.) ಎಂಬಲ್ಲಿ ಅವರು "ಶಿವಶರಣ" ರೆಂದೂ ಹೇಳಲಾಗಿದೆ. ಆದಯ್ಯಶರಣನೂ ಕೂಡ "ಏಕೋರಾಮ"ರನ್ನು ಬಸವಪೂರ್ವ ಸಮಕಾಲೀನರಾದ ರೇವಣಸಿದ್ಧ ಮರುಳಸಿದ್ಧ ಮುಂತಾದ ಶಿವಶರಣರ ಮಧ್ಯದಲ್ಲಿ ಸುತ್ತಿಸಿದ್ದಾನೆ. ಇದರಿಂದ "ವಿರೂಪಾಕ್ಷ ದೇಶಿಕೇಂದ್ರರೂ ಸಹ ಶಿವಶರಣಯುಗದಲ್ಲಿ 'ಏಕೋರಾಮ' ಎಂಬ ಹೆಸರಿನಿಂದ ಪ್ರಸಿದ್ಧರಾಗಿರ ಬೇಕೆಂದು ತಿಳಿದುಬರುತ್ತದೆ. ಆದ್ದರಿಂದಲೇ ಭಾಷ್ಯಕಾರರು "ನಿಜಗುರು"ವನ್ನು 'ಆತ್ಮನಾಮ ಗುರೋರ್ನಾಮ ನಿಜನಾಮ ನ ಕೀರ್ತಯೇತ್' ಎಂಬ ಆರ್ಯೋಕ್ತಿಯನ್ನು ಅನುಸರಿಸಿ, ಅವರ ಅನ್ವರ್ಥಕವಾದ "ಏಕೋರಾಮ, ಶಿವಾಚಾರ್ಯ, ದೇಶಿಕೇಂದ್ರ, ಶರಣ" ಮುಂತಾದ ಹೆಸರುಗಳಿಂದ ಕರೆದಿದ್ದಾರೆಯೇ ಹೊರತು ಅಂಕಿತನಾಮವಾದ 'ವಿರೂಪಾಕ್ಷ' ಎಂದು ಹೇಳಿಲ್ಲ. ಭಾಷ್ಯದಲ್ಲಿ

---

* ಈ ಭಾಗವು ಸಂಸ್ಕೃತ ಭೂಮಿಕೆಯ ೧೯೮ನೇ ಪುಟದಲ್ಲಿ ಉಕ್ತವಾಗಿದೆ (ಸಂ)

ಉಕ್ತವಾದ "ಏಕೋರಾಮ" ಎಂಬುದು ಅನ್ವರ್ಥಕನಾಮವೇ ಎಂಬುದನ್ನು ಮುಂದೆ ತಮ್ಮ ಭಾಷ್ಯದಲ್ಲಿಯೇ ಹೇಳಲಾಗಿದೆ.

"ಸರ್ವಭೂತಹಿತಃ ಶಾಂತಃ ತ್ರಿದಂಡೀ ಸಕಮಂಡಲುಃ |
ಏಕೋರಾಮಃ ಪ್ರರಿವ್ರಜ್ಯ ಭಿಕ್ಷಾರ್ಥಂ ಗ್ರಾಮಮಾವಿಶೇತ್ ||[1]
ಯಾಜ್ಞವಲ್ಕ್ಯಸ್ಮೃತಿ ಯತಿ ಪ್ರಕರಣ

"ಸರ್ವಭೂತಹಿತಾಕಾಂಕ್ಷಿಯೂ, ಶಾಂತನೂ, ತ್ರಿದಂಡಿಯೂ ಆದವನೇ ಏಕೋರಾಮ ಅಥವಾ ಏಕಾರಾಮ. ಆತ ವಿರಾಗಿಯಾಗಿ ಕಮಂಡಲವನ್ನು ಹಿಡಿದು ಭಿಕ್ಷೆಗಾಗಿ ಗ್ರಾಮಪ್ರವೇಶ ಮಾಡಬೇಕು" ಎಂಬ ಲಕ್ಷಣವುಳ್ಳವನೇ ಏಕೋರಾಮನೆನಿಸುವನು. ಏಕೋರಾಮ ಶಬ್ದ ನಿರ್ವಚನ ವನ್ನು "ಪ್ರಾಣಾರಾಮ" ಎಂಬ ಶ್ರುತ್ಯುಕ್ತಪದದಂತೆ ಮಾಡಬಹುದು.

ಶ್ರೀಕಂಠಭಾಷ್ಯದಲ್ಲಿ ಪ್ರಾಣಾರಾಮಶಬ್ದ ನಿರ್ವಚನ ಹೀಗಿದೆ- ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ. ಎಂಬಲ್ಲಿ "ಪ್ರಾಣಾರಾಮಂ" ಎಂದರೆ ಪ್ರಾಣಾಃ ಸಕಲ ಕಲಾಧಾರಭೂತವಾದ ಚಿದಂಬರರೂಪ ಸ್ವರೂಪ ಪ್ರಕೃತಿಯಲ್ಲಿ ಯಾವನು ಆರಾಮ ಪಡೆಯುವನೋ ಅವನು ಪ್ರಾಣಾರಾಮನೆಂದು ಅರ್ಥಮಾಡಲಾಗಿದೆ. ಏಕಾರಾಮ ಪ್ರಾಣಾರಾಮ ಶಬ್ದಗಳು ಪರ್ಯಾಯವಾಚಕಗಳು. ಇನ್ನು ವಿರೂಪಾಕ್ಷದೇಶಿಕೇಂದ್ರರಿಗೆ 'ಏಕೋರಾಮ' ಎಂಬ ಅನ್ವರ್ಥಕ ನಾಮವಿತ್ತು ಎಂಬ ಬಗ್ಗೆ ಬಾಹ್ಯಪ್ರಮಾಣವೂ ಇದೆ. ವಿರೂಪಾಕ್ಷದೇಶಿಕೇಂದ್ರರ ಶಿಷ್ಯರು ಚಂದ್ರಗುಂಡದೇಶಿಕೇಂದ್ರರು. ಅವರು ಶ್ರೀಪತಿಪಂಡಿತರ ವಂಶದವರು ಎಂದು ಶ್ರೀಶೈಲಪಂಡಿತಾರಾಧ್ಯ ಚಾರಿತ್ರದಿಂದ ತಿಳಿದುಬರುತ್ತದೆ. ಇವರು ಬಸವಪೂರ್ವಯುಗಕ್ಕೆ ಸೇರಿದ ದೇವರದಾಸಿಮಾರ್ಯರ ದೀಕ್ಷಾಗುರು, ದಾಸಿಮಾರ್ಯರು ತಮ್ಮ ಮಗನಿಗೆ ತಮ್ಮ ಪರಮ ಗುರುವಿನ ಅನ್ವರ್ಥಕವಾದ 'ಏಕೋರಾಮ' ಎಂಬ ಹೆಸರನ್ನೇ ಇಟ್ಟಿದ್ದರು. ಆದರೂ ಅವನು "ವಿರೂಪಾಕ್ಷ" ಎಂಬ ಪರಮ ಗುರುವಿನ ಅಂಕಿತನಾಮದಿಂದಲೇ ಪ್ರಸಿದ್ಧಿ ಪಡೆದ ವಿಷಯವು ದೇವಾಂಗ ಪುರಾಣದಲ್ಲಿ ಹೀಗೆ ಹೇಳಿದೆ.

ಏಕೋರಾಮ ಇತಿ ಖ್ಯಾತಃ ಆತ್ಮಜಃ ಸಮಜಾಯತ |
ವಿರೂಪಾಕ್ಷಾಭಿಧಾನಂ ಚ ಯಸ್ಯಾಭೂಲ್ಲೋಕವಿಸ್ತೃತಂ ||[2]

ಆದ್ದರಿಂದ ಶ್ರೀಪತಿಯ ಗುರುವಾದ ವಿರೂಪಾಕ್ಷರೇ ಏಕೋರಾಮ ಎಂದು ಭಾಷ್ಯದಲ್ಲಿ ಸ್ತುತ ರಾಗಿದ್ದಾರೆ ಎಂದು ಭಾವಿಸಬಹುದು.

ಈ ಗುರು ಏಕೋರಾಮರು ಭಾಷ್ಯದಲ್ಲಿ "ಶ್ರೀಮದ್ದಂಡಶಿಖೋಪವೀತ ವಿಲಸತ್ಕಂಥಾ ಜಿನಾಲಂಕೃತಃ" ಶಿಖೆ ಮತ್ತು ಉಪವಿುತಗಳನ್ನು ಧರಿಸಿದ್ದರೆಂದು ಹೇಳಿದೆ. ಆದರೆ ಅದು ಬಾಹ್ಯದ ತಂತುಮಯವಾದ ಯಜ್ಞೋಪವೀತವಾಗಲಿ ಕೇಶಮಯ ಶಿಖೆಯಾಗಲಿ ಅಲ್ಲ; ಬದಲಾಗಿ ಅಲ್ಲಿ "ಬ್ರಹ್ಮಭಾವ"ವೇ ಉಪವೀತ 'ಜ್ಞಾನಶಿಖೆ'"ಯೇ ಶಿಖೆ' ಏಕೆಂದರೆ-

---

[1] ಏಕೋರಾಮ ಅಥವಾ ಏಕಾರಾಮ :— (ಶ್ರೀಕರಭಾಷ್ಯ ಅ. ೩. ಪಾ. ೪. ಸೂ. ೧೨. ಸಂ. II ಪು. ೩೪೯)

[2] 'ದೇವಾಂಗ ಚರಿತ ಅಥವಾ ದೇವದಾಸೋಪಾಖ್ಯಾನ' (ಬ್ರಹ್ಮಾಂಡಪುರಾಣಾಂತರ್ಗತ ಉತ್ತರ ಖಂಡ) ಆಂಧ್ರಾಕ್ಷರ, ಪ್ರಕಾಶಕರು : ಕೊಂ. ಮುನಿಸ್ವಾಮಿಚೆಟ್ಟಿ, 1868, ಚನ್ನಪುರಿ. (ಓರಿಯಂಟಲ್ ಲೈಬ್ರೆರಿ, ಮೈಸೂರು, No. A. 421)

[3] ಬಹಿಸ್ಸೂತ್ರಂ ತ್ಯಜೇದ್ವಿದ್ವಾನ್ ಯೋಗ ಮುತ್ತಮಮಾಸ್ಥಿತಃ |
ಬ್ರಹ್ಮ ಭಾವಮಿದಂ ಸೂತ್ರಂ ಧಾರಯೇದ್ಯಸ್ಸ ಚೇತನಃ || ೬೪ ||
ಧಾರಣಾತ್ತಸ್ಯ ಸೂತ್ರಸ್ಯ ನೋಚ್ಛಿಷ್ಟಂ ನಾಶುಚಿರ್ಭವೇತ್ |
ಸೂತ್ರಮಂತರ್ಗತಂ ಯೇಷಾಂ ಜ್ಞಾನಯಜ್ಞೋಪವೀತಿನಾಮ್ || ೧೫ ||
(ವೇದಾಂತಸಾರವೀರಶೈವ ಚಿಂತಾಮಣಿ ಪು. ೮ ಪು. ೨೦೪-೨೦೫)

" ಜ್ಞಾನಿಯು ಬಹಿಸ್ಸೂತ್ರವನ್ನು ಬಿಡಬೇಕು. ಯೋಗಸ್ಥನಾದವನು ಬ್ರಹ್ಮಭಾವವೆಂಬ ಸೂತ್ರವನ್ನು ಧರಿಸಬೇಕು. ಅಂಥ ಸೂತ್ರಧರಿಸಿದವನಿಗೆ ಉಚ್ಛಿಷ್ಟ-ಅಶುಚಿದೋಷಗಳಿರುವುದಿಲ್ಲ. ಅಂತಃಸೂತ್ರವೆಂದರೆ "ಜ್ಞಾನಯಜ್ಞೋಪವೀತ." ಜ್ಞಾನಶಿಖೆ, ಜ್ಞಾನ ಯಜ್ಞೋಪವೀತಿಯಾದ ಯೋಗಿಗೆ ಜ್ಞಾನವೇ ಮುಖ್ಯ, ಜ್ಞಾನಶಿಖೆಯುಳ್ಳವನಿಗೇ ' ಶಿಖಿ ' ಎಂದು ಹೆಸರು.

ಆದ್ದರಿಂದ ಭಾಷ್ಯದಲ್ಲಿ ಏಕೋರಾಮ ಶಿವಾಚಾರ್ಯರಿಗೆ ಹೇಳಿರುವ ದಂಡ-ಶಿಖೋಪವೀತ-ತ್ವಾದಿಗಳು ಅವರ ಅನ್ವರ್ಥಕತ್ವವನ್ನೇ ಸಾರುತ್ತವೆ.

ಇನ್ನು ಅದೇ ಗ್ರಂಥದಲ್ಲಿ-

ಕರ್ಮಣ್ಯಧಿಕೃತಾ ಯೇ ತು ವೈದಿಕೇ ಬ್ರಾಹ್ಮಣಾದಯಃ ।<br>
ತೈಶ್ಚ ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ವೈ ತದ್ಧಿವೈ ಸ್ಮೃತಂ ॥<br>
(ನೇ. ಸಾ. ವೀ. ಚಿಂ. ಪು. ೨೦೪)

ಎಂದು ಹೇಳಿ ಬ್ರಾಹ್ಮಣಾದಿ ನಾಲ್ಕು ವರ್ಣದವರೂ ಕೂಡ ಶಕ್ತಿಪಾತದಿಂದ ಪವಿತ್ರಾಂತಃಕರಣರಾಗಿ ಗುರುಕೃಪೆಗೆ ಪಾತ್ರರಾಗಿ ಗುರುವಿನ ಮೂಲಕ ಶಿವದೀಕ್ಷಾ ಮುಖದಿಂದ ಕ್ರಿಯಾಂಗವೆನಿಸಿದ ಇಷ್ಟ ಲಿಂಗವೆಂಬ ಸೂತ್ರವನ್ನು ಧರಿಸಬಹುದೆಂದು ಹೇಳಿದೆ, ಗಾರುಡ ಪುರಾಣದ ಉಪರಿಭಾಗದಲ್ಲಿ-

" ವಂಶಾವಲಿಪ್ರಯಾತರೂ, ಲಿಂಗಧಾರಿಗಳೂ, ಜ್ಞಾನಿಗಳೂ ಆದ ಶಿವಭಕ್ತರಿಗೆ ಶೂದ್ರತ್ವ ವೆಂಬುದಿಲ್ಲ. ಶಿವದೀಕ್ಷೆಪಡೆದ ಅವರಿಗೇ ವೈದಿಕವೆನಿಸಿದ ನಮಕ-ಚಮಕ ಮತ್ತು ಪಂಚಬ್ರಹ್ಮ ಮಂತ್ರ ಪಠಣದಲ್ಲಿ ಅಧಿಕಾರವಿರುವುದು " ಎಂದು ಹೇಳಿದೆ. (ಕನ್ನಡ ಭೂಮಿಕೆ ಪು. ೧೫)

## ಗೋತ್ರ-ಸೂತ್ರ ಶಬ್ದಾರ್ಥ ನಿರ್ಣಯ ಮತ್ತು ವೀರಶೈವ ಸಂಪ್ರದಾಯ

**ಗೋತ್ರ :** ಭಾರತೀಯ ಸಂಸ್ಕೃತಿಯಲ್ಲಿ ಗೋತ್ರ ಶಬ್ದವು ವಂಶಪರ್ಯಾಯ ವಾಚಕ. 'ಗಾವಃ ತ್ರಾಯಂತ ಇತಿ ಗೋತ್ರಂ' ಎಂಬ ವ್ಯುತ್ಪತ್ತಿಯಿಂದ ಗೋತ್ರಶಬ್ದಕ್ಕೆ ಗೋಪಾಲನೆಂಬ ಅರ್ಥವಿತ್ತು ಏಕೆಂದರೆ ಮೊತ್ತಮೊದಲು ಭಾರತ ವರ್ಷವನ್ನು ಪ್ರವೇಶಿಸಿದ ಆರ್ಯರು '**ಗೋಧನ**'ರು ಎಂಬುದು ಐತಿಹಾಸಿಕ ಸತ್ಯ. ಆರ್ಯರಲ್ಲಿ ಪ್ರಾಯಃ ವಶಿಷ್ಠ ಮುಂತಾದ ಒಬ್ಬೊಬ್ಬ ಮಹರ್ಷಿಯೂ ಒಂದೊಂದು ಗೋಷ್ಠ (ಗೋವೃಂದ)ಕ್ಕೆ ಅಧಿಪತಿ ಎಂದರೆ ಗೋತ್ರ ಪುರುಷರಾಗಿದ್ದರು ; ಆದ್ದರಿಂದಲೇ ಅವರ ವಂಶೀಯರು ಆಯಾ ಗೋತ್ರೀಯರೆನಿಸಿದರು. ಪಾಣಿನಿಯ "ಸಂಖ್ಯಾವಂಶ್ಯೇನ[1] ಎಂಬ ಸೂತ್ರ ವ್ಯಾಖ್ಯಾನದಲ್ಲಿ" ವಂಶೋ ದ್ವಿಧಾ ; ವಿದ್ಯಯಾ ಜನ್ಮನಾ ಚ ಎಂದು[2] "ಪುತ್ರ-ಪೌತ್ರ ಮೊದಲಾದ ಸಂತತಿ ಪರಂಪರೆಗೆ ಗೋತ್ರತ್ವವಿರುವಂತೆ, ಶಿಷ್ಯ-ಪ್ರಶಿಷ್ಯ ಪ್ರವಾಹಕ್ಕೂ ಕೂಡ ಗೋತ್ರ ಸಂಬಂಧ ವುಂಟು "[3] ಎಂದು ಹೇಳಿದೆ.

ಆದ್ದರಿಂದ ವಂಶವು ಪ್ರಾಕೃತರಲ್ಲಿ ಜನ್ಮದಿಂದಲೂ, ಅಪ್ರಾಕೃತರೆನಿಸಿದ ಅತಿವರ್ಣಾಶ್ರಮಿ[4]ಗಳಾದ ವೀರಶೈವರಲ್ಲಿ ಮಾತ್ರ ವಿದ್ಯೆ(ಷಡಕ್ಷರಮಹಾಮಂತ್ರೋಪದೇಶ)ಯಿಂದಲೂ ಪರಿಗಣಿಸಲ್ಪಡುತ್ತದೆ. ಪ್ರಾಕೃತರಲ್ಲಿ ದ್ವಿಜತ್ವವು ಉಪನಯನದಿಂದ ಸಿದ್ಧಿಸುತ್ತದೆ. ಅಲ್ಲಿ ಉಪದೇಶಕ ತಂದೆ. ಅಪ್ರಾಕೃತ

---

[1] ಅಷ್ಟಾಧ್ಯಾಯಿ ೨-೧-೧೯. [2] ಸಿದ್ಧಾಂತಕೌಮುದೀ ಬಾಲಮನೋರಮಾವ್ಯಾಖ್ಯಾ ಪು. ೨೨೭. [3] ವೀರಶೈವಾನಂದ ಚಂದ್ರಿಕೆ ಪು. ೪೫೧. [4] ವರ್ಣಶ್ಚ ಆಶ್ರಮಶ್ಚ ವರ್ಣಾಶ್ರಮೌ, ಅತಿಶಯಿತೌ ವರ್ಣಾಶ್ರಮೌ ಯೇಷಾಂ ತೇ-ಅತಿವರ್ಣಾಶ್ರಮಿಣಃ. (ವೀರಶೈವಾನಂದಚಂದ್ರಿಕಾ ಪಾದಕಾಂಡ ಪು. ೪೫೩.)

ರಲ್ಲಾದರೆ ಶಿವದೀಕ್ಷೆಯಿಂದ ದ್ವಿಜತ್ವವು ಸಿದ್ಧಿಸುತ್ತದೆ. ಅಲ್ಲಿ ವೀರಸಂಧ್ಯಾದಿ ಪ್ರವರನಾದ ಶ್ರೀ ಗುರು ಉಪದೇಶಕ. ಆದ್ದರಿಂದ ಅವರ ಶಿಷ್ಯರು ಆ ಗುರುವನ್ನೇ ತಮ್ಮ ಗೋತ್ರಪ್ರವರ್ತಕನೆಂದು ಭಾವಿಸುತ್ತಾರೆ. ಅತಿವರ್ಣಾಶ್ರಮಿ ಎನಿಸಿದ ವೀರಶೈವ ಸಂಪ್ರದಾಯದಲ್ಲಿ ಗೋತ್ರ ಶಬ್ದವು ವಿದ್ಯೆಯಿಂದಲೇ ಹೊರತು ಔರಸ ಸಂತಾನ ರೂಪದಿಂದಲ್ಲ. ಆದ್ದರಿಂದಲೆ ಸಗೋತ್ರ ವಿವಾಹಾದಿ ನಿಷೇಧವು ವೀರಶೈವರಿಗೆ ಅನ್ವಯಿಸುವುದಿಲ್ಲ.

**ಸೂತ್ರ**– ಇದರಂತೆ ಸೂತ್ರಶಬ್ದವೂ ಕೂಡ ಪ್ರಾಕೃತರಲ್ಲಿ ಆಪಸ್ತಂಬಾದಿ ಋಷಿಪ್ರಣೀತ ಗ್ರಂಥವಾಚಕ. ಅವರಲ್ಲಿ ಆಪಸ್ತಂಬ, ಆಶ್ವಲಾಯನ, ಗೋಭಿಲ ಮುಂತಾದ ಋಷಿಗಳು ಗೃಹ್ಯ-ಧರ್ಮ ಕಲ್ಪಸೂತ್ರಗಳನ್ನು ರಚಿಸಿದ್ದಾರೆ. ಇಂದಿಗೂ ಆಯಾ ಶಾಖೀಯರು ಆಯಾ ಋಷಿಪ್ರೋಕ್ತಸೂತ್ರಗಳಿಗೆ ಅನುಗುಣವಾಗಿ ಆಚಾರಾದಿಗಳನ್ನು ಅನುಷ್ಠಾನಮಾಡುತ್ತಾರೆ. ಅಪ್ರಾಕೃತ ವೀರಶೈವದಲ್ಲಾದರೆ ಸೂತ್ರಶಬ್ದವು ಪರಶಿವ ಇಷ್ಟಲಿಂಗ ಮತ್ತು ಪಂಚಾಕ್ಷರ ಮಂತ್ರವಾಚಕ ; ಗ್ರಂಥವಾಚಕವಲ್ಲ.

[1] "ಸೂಚನಾತ್ ಪರಮೇಶಸ್ಯ ಲಿಂಗಂ ಸೂತ್ರಮಿತೀರಿತಮ್"
"ಪಂಚಾಕ್ಷರಸ್ಯೈವ ಸೂತ್ರನಾಮ ಪ್ರಸಿದ್ಧತಃ"
"ಸೂತ್ರಂ ಪಂಚಾಕ್ಷರಸ್ತಥಾ"

ಪರಶಿವೇಷ್ಟಲಿಂಗವೂ ಕೂಡ ಪಂಚಸೂತ್ರಘಟಿತ ಎನ್ನಲಾಗಿದೆ. "ಲಿಂಗದ ಸುತ್ತಳತೆ, ಅದರಷ್ಟೇ ಪೀಠದ ಉದ್ದ-ಅಗಲಗಳು ; ಅದರ ಅರ್ಧದಷ್ಟು ಗೋಮುಖ ; ಇದೇ ಲಿಂಗದ ಲಕ್ಷಣ."

ಇಲ್ಲಿ ಲಿಂಗದಲ್ಲಿರುವ ತಾರ-ದಂಡ-ಕುಂಡಲ-ಅರ್ಧಚಂದ್ರ ಮತ್ತು ಬಿಂದುಗಳು ಈ ಐದೂ ಸೂತ್ರವೆನಿಸುತ್ತವೆ. ಇನ್ನು ಲಿಂಗ ಮತ್ತು ಮಂತ್ರಗಳಿಗೆ ವಾಚ್ಯ-ವಾಚಕತ್ವದಿಂದ ಅಭೇದ ಎನ್ನಲಾಗಿದೆ.

[2] ನಕಾರವು ತಾರಕಸ್ಥಾನ, ಮಕಾರವು ದಂಡ, ಶಿಕಾರವು ಕುಂಡಲ, ವಾಕಾರವು ಅರ್ಧ ಚಂದ್ರ, ಯಕಾರವು ಬಿಂದುರೂಪ. ಓಂಕಾರವೇ ಪಂಚವರ್ಣಕ. ಮಂತ್ರಾಕ್ಷರಗಳಲ್ಲಿ ಹೇಗೆ ತಾರಾ-ದಂಡಾದಿ ಪಂಚಸೂತ್ರಗಳು ಸಮನ್ವಯವಾಗುತ್ತವೆಯೋ ಅದರಂತೆ ಲಿಂಗವೂ ಅದೇ ಪಂಚಸೂತ್ರ ಘಟಕವಾಗಿದೆ.

[3]"ನಕಾರವು ಆದಿಪೀಠ, ಮಕಾರವು ಮಧ್ಯ, ಶಿಕಾರವು ವರ್ತುಳ, ವಾಕಾರವು ಗೋಮುಖ, ಯಕಾರವು ಬಿಂದು. ಆದ್ದರಿಂದ ಪ್ರಣವವೇ ಲಿಂಗ" ತಾರಾದಿ ಪಂಚಸೂತ್ರಗಳ ವಿವರಣವು ನಾವು ಪ್ರಕಟಿಸಿರುವ [4] "ಇಷ್ಟಲಿಂಗ ವಿಜ್ಞಾನ" ಎಂಬ ಕನ್ನಡ ಭಾಷಾ ಗ್ರಂಥದಲ್ಲಿದೆ.

---

[1] ಕಿರಣಾಗಮ

[2] ಶಿವತತ್ತ್ವರತ್ನಾಕರ, ಕಲ್ಲೋಲ ೧. ತ ೫.೧೯-೩೦

[3] ಶಿವತತ್ತ್ವರತ್ನಾಕರ ೧-೪-೩೭-೩೮

[4] ಪ್ರಬೋಧಪುಸ್ತಕಮಾಲೆ, ಬಸವೇಶ್ವರ ರಸ್ತೆ, ಮೈಸೂರು-೪

**ವೀರಶೈವ ಸಂಪ್ರದಾಯದಲ್ಲಿ ಗೋತ್ರ-ಸೂತ್ರಗಳು**

'ವೀರೋ ನಂದೀ ವೃಷಶ್ಚೈವ ಭೃಂಗೀಸ್ಕಂದಸ್ತಥೈವ ಚ ।
ಮತ್ಸ್ವರೂಪಾಃ ಸಮುತ್ಪನ್ನಾಃ ಪಂಚಗೋತ್ರಾಧಿಕಾರಿಣಃ ॥
ರೇಣುಕೋ ದಾರುಕಶ್ಚೈವ ಶಂಕುಕರ್ಣಶ್ಚ ಧೇನುಕಃ ।
ವಿಶ್ವಕರ್ಣಶ್ಚ ಪಂಚೈತೇ ಪಂಚಗೋತ್ರಸಮುದ್ಭವಾಃ ॥
ಸದ್ಯೋಜಾತಂ ಚ ಪ್ರಥಮಂ ವಾಮದೇವಂ ದ್ವಿತೀಯಕಂ ।
ಅಘೋರಂ ಚ ತೃತೀಯಂ ತು ತತ್ಪುರುಷಂಚ ಚತುರ್ಥಕಂ ॥
ಈಶಾನಂ ಪಂಚಮಂ ಪ್ರೋಕ್ತಂ ಮುಖಾನಿ ಮಮ ಸರ್ವಶಃ ।
ತಾಸ್ಯಾನನಾನಿ ಗೋತ್ರಾಣಿ ವೇದೋಕ್ತಾನಿ ನ ಸಂಶಯಃ ॥
ಸದ್ಯೋಜಾತಮುಖೋತ್ಪನ್ನೋ ರೇಣುಕಃ ಪರಿಕೀರ್ತಿತಃ ।
ತನ್ನಾಮ ರೇವಣಾರಾಧ್ಯಃ ಸೂತ್ರಂ ಪಡಿವಡಿತ್ಯಪಿ ॥
ವಾಮದೇವ ಮುಖೋತ್ಪನ್ನೋ ದಾರುಕಃ ಪರಿಕೀರ್ತಿತಃ ।
ತನ್ನಾ ಮ ಮರುಲಾರಾಧ್ಯಸ್ತಸ್ಯ ಸೂತ್ರಂ ಚ ವೃಷ್ಟಿಕಮ್ ॥
ಅಘೋರಾಖ್ಯ ಮುಖೋತ್ಪನ್ನಃ ಶಂಕುಕರ್ಣ ಇತೀರಿತಃ ।
ಏಕೋರಾಮೇತಿ ತನ್ನಾಮ ತತ್ಸೂತ್ರಂ ಮುಕ್ತಗುಚ್ಛಕಂ ॥
ತತ್ಪುರುಷಾಖ್ಯ ಮುಖೋತ್ಪನ್ನೋ ಧೇನುಕರ್ಣೇತಿ ವಿಶ್ರುತಃ ।
ತನ್ನಾಮ ಪಂಡಿತಾರಾಧ್ಯ ಸ್ತಸ್ಯ ಸೂತ್ರಂ ತು ಲಂಬಕಮ್ ॥
ಈಶಾನಾಖ್ಯ ಮುಖೋತ್ಪನ್ನೋ ವಿಶ್ವಕರ್ಣೇತಿ ವಿಶ್ರುತಃ ।
ವಿಶ್ವಾರಾಧ್ಯೇ ತಿ ತನ್ನಾಮ ತತ್ಸೂತ್ರಂ ಪಂಚವರ್ಣಕಮ್ ॥

ವೀರ-ನಂದಿ-ಭೃಂಗಿ-ವೃಷಭ ಮತ್ತು ಸ್ಕಂದರೆಂಬ ಪ್ರಮಥ ಗೋತ್ರ ಪ್ರವರರಾದವರೆ ರೇಣುಕಾದಿ ಪಂಚಾಚಾರ್ಯರು. ಈ ಪರಂಪರೆಯವರು ಆಯಾ ಸೂತ್ರಕ್ಕೆ ಹೇಳಿದಂತೆ ಕ್ರಮವಾಗಿ ತಮ್ಮ ತಮ್ಮ ಶಿಷ್ಯರಿಗೆ ಮೂಲಪಂಚಾಕ್ಷರೀ(ವೀರ), ಪ್ರಸಾದಪಂಚಾಕ್ಷರೀ(ನಂದಿ), ಮಾಯಾಪಂಚಾಕ್ಷರೀ (ಭೃಂಗಿ), ಸೂಕ್ಷ್ಮಪಂಚಾಕ್ಷರೀ(ವೃಷಭ) ಮತ್ತು ಸ್ಥೂಲಪಂಚಾಕ್ಷರೀ(ಸ್ಕಂದ) ಮಹಾ ಮಂತ್ರೋಪದೇಶಾದಿಗಳನ್ನು ಎಸಗಿ, ಆಯಾ ಮಂತ್ರ ರಹಸ್ಯಾದಿಗಳನ್ನು ಬೋಧಿಸುವರು.

ಎರಡನೆಯದಾಗಿ ಇಲ್ಲಿ ವೈದಿಕಾಗಮಿಕ ಕ್ರಿಯಾಕಲಾಪಗಳು ಪಂಚಾಚಾರ್ಯರ ಪ್ರತೀಕವಾಗಿ ಸ್ಥಾಪಿಸಿರುವ ಪಂಚಕಲಶಗಳ ಸಾಕ್ಷ್ಯದಲ್ಲಿ ನಡೆಯುತ್ತವೆಯೇ ಹೊರತು ಪ್ರಾಕೃತ ರಲ್ಲಿರುವಂತೆ ಅಗ್ನಿಸಾಕ್ಷ್ಯತ್ವದಲ್ಲಲ್ಲ.

ಪಂಚಬ್ರಹ್ಮ ಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ ।
ಆಚಾರ್ಯಃ ಸಮುಮೃತ್ತಿಗ್ಭಿಃ ತ್ರಿವಾರಮಭಿಷೇಚಯೇತ್ ॥

[ಸಿ. ಶಿ ಪರಿ. ೧೮]

ಆಚಾರ್ಯಪಂಚಕವನ್ನು ಕುರಿತು ವೀರಶೈವಗ್ರಂಥಗಳಲ್ಲಿ ಹೀಗೆ ಹೇಳಿದೆ.

[1] ಯದಾ ಯದಾ ಹಿ ಧರ್ಮಸ್ಯ ಹಾನಿರ್ಭವತಿ ಭೂತಲೇ ।
ತದಾ ತದಾವತಾರೋಽಯಂ ಗಣೇಶಾನಾಂ ಮಹೀತಲೇ ॥ ೧೩ ॥

ಪ್ರವಕ್ಷ್ಯಾಮಿ ಭವಿತ್ರೂಂಶ್ಚ ಶೃಣು ತಜ್ಜನನಕ್ರಮವನ್ ।
ದ್ರಾಕ್ಷಾರಾಮೇರಾಮನಾಥ ಲಿಂಗೇ ಯುಗಚತುಷ್ಟಯೇ ॥
ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ॥ ೧೪ ॥

ಸುಧಾಕುಂಡಾಖ್ಯ ಸುಕ್ಷೇತ್ರೇ ಲಿಂಗೇ ಶ್ರೀ ಮಲ್ಲಿಕಾರ್ಜುನೇ ।
ಜನನಂ ಪಂಡಿತಾರ್ಯಸ್ಯ ನಿವಾಸಃ ಶ್ರೀ ಗಿರೌ ಶಿವೇ ॥ ೧೫ ॥

ತಥಾ ರೇವಣಸಿದ್ಧಸ್ಯ ಕೊಲ್ಲಿಪಾಕೀ ಪುರೋತ್ತಮೇ ।
ಸೋಮೇಶಲಿಂಗೇ ಜನನಮಾವಾಸಃ ಕದಲೀಪುರೇ ॥ ೧೬ ॥

ತದ್ವನ್ಮರುಲಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶಲಿಂಗೇ ಜನನಂ ಸ್ಥಾನಮುಜ್ಜಯನೀಪುರೇ ॥ ೧೮ ॥

ಕಾಶ್ಯಾಂ ವಿಶ್ವೇಶ್ವರೇ ಲಿಂಗೇ ವಿಶ್ವಾರಾಧ್ಯಸ್ಯ ಸಂಭವಃ ।
ಸ್ಥಾನಂ ಶ್ರೀ ಕಾಶಿಕಾಕ್ಷೇತ್ರೇ ಶೃಣು ಪಾರ್ವತಿ ಸಾದರಂ ॥
ಕೃತಾದ್ಯುಗಚತುಷ್ಕೇ ತೇ ಪಂಚಾರಾಧ್ಯಾ ಯಥಾ ವಿಧಿ ॥ ೧೯ ॥
ಮಮ ಪಂಚಮುಖೋದ್ಭೂತಾಃ ಸಂಸ್ಥಾಪ್ಯಕಲಶಾನ್ ಭುವಿ ॥ ೨೦ ॥

ವೀರಶೈವಾನಂದಚಂದ್ರಿಕೆಯಲ್ಲಿ ಶ್ರೀಪತಿಯು ಗಜಕರ್ಣ ಗೋತ್ರದವನೆಂದು ಹೇಳಿದೆ–

[2] ಗಜಕರ್ಣೋ ತ್ರಿರಂಗುಷ್ಠೋ ಮಂಚಣಃ ಸಂಗಮೋಽವ್ಯಯಃ ।
ಕಲ್ಯಾಣ ಪಂಡಿತಃ ಕೇಶೀ ಮಾಧವಃ ಶ್ರೀಪತಿಃ ಪ್ರಭುಃ ॥
ಮಲ್ಲಿಕಾರ್ಜುನ ಇತ್ಯಾದ್ಯಾ ವಾಮದೇವ ಮುಖೋದ್ಗತಾಃ ॥

**[3] ಸುಪ್ರಬೋಧಾಗಮಾಂತರ್ಗತ ಪಂಚಾಚಾರ್ಯೋತ್ಪತ್ತಿಗೋತ್ರ ಸೂತ್ರಾದಿಮಾಲಿಕಾ**

| | | | | | |
|---|---|---|---|---|---|
| ಪರಶಿವನ ಪಂಚಮುಖಗಳು :– | ಸದ್ಯೋಜಾತ- | ವಾಮದೇವ- | ಅಘೋರ- | ತತ್ಪುರುಷ- | ಈಶಾನ- |
| ಪಂಚಾಚಾರ್ಯರ ಹೆಸರುಗಳು :– | ರೇವಣಾರಾಧ್ಯ | ಮರುಲಾರಾಧ್ಯ | ಏಕೋರಾಮಾರಾಧ್ಯ | ಪಂಡಿತರಾಧ್ಯ | ವಿಶ್ವರಾಧ್ಯ |
| ಪಂಚಾಚಾರ್ಯರ ಜನ್ಮಭೂಮಿ :– | ಕೊಲ್ಲಿಪಾಕೀ- ಸೋಮೇಶ್ವರ ಲಿಂಗ | ವಟಕ್ಷೇತ್ರ- ಸಿದ್ಧೇಶ್ವರ ಲಿಂಗ | ದ್ರಾಕ್ಷಾ- ರಾಮ ರಾಮ ನಾಥಲಿಂಗ | ಶ್ರೀಶೈಲ- ಮಲ್ಲಿ ಕಾರ್ಜುನ ಲಿಂಗ | ವಾರಾಣಸಿ- ವಿಶ್ವನಾಥಲಿಂಗ |

---

[1] ವೀರಶೈವ ಸದಾಚಾರಸಂಗ್ರಹ ಪು. ೩೫

[2] ವೀರಶೈವಾನಂದಚಂದ್ರಿಕೆ ಪು. ೪೫೧

[3] ವೀರಶೈವ ಸದಾಚಾರಸಂಗ್ರಹ, ಪಂಚಾಚಾರ್ಯ ಪಂಚಮೋತ್ಪತ್ತಿಕ್ರಮವರ್ಣನಂ (ಸೋಲಾಪುರ, ವಾರದ ಪ್ರಕಾಶನ ೧೯೦೫.)

| | | | | | |
|---|---|---|---|---|---|
| ಸಿಂಹಾಸನ ಸ್ಥಾನಗಳು | ರಂಭಾಪುರೀ | ಉಜ್ಜಯಿನೀ | ಹಿಮತ್ಕೇದಾರ | ಶ್ರೀಶೈಲ | ವಾರಾಣಸಿ |
| ಗೋತ್ರಗಳು | ವೀರ | ನಂದಿ | ಭೃಂಗಿ | ವೃಷಭ | ಸ್ಕಂದ |
| ಸೂತ್ರಗಳು | ಪಡ್ವಿಡಿ | ವೃಷ್ಟಿ | ಲಂಬನ | ಮುಕ್ತಗುಚ್ಛ | ಪಂಚವರ್ಣ |
| ಪ್ರವರಗಳು | ವೀರಶೈವ | ವೀರಶೈವ | ವೀರಶೈವ | ವೀರಶೈವ | ವೀರಶೈವ |
| ಶಾಖೆಗಳು | ಋಗ್ವೇದ | ಯಜುರ್ವೇದ | ಸಾಮವೇದ | ಅಥರ್ವಣ-ವೇದ | ಅಜಪವೇದ-(ಶೈವಾಗಮ) |
| ಕಲಶಗಳ ಧಾತುಗಳು | ಸುವರ್ಣ | ರಜತ | ತಾಮ್ರ | ಕಬ್ಬಿಣ | ಸೀಸ |
| ತತ್ತ್ವಗಳು | ಪೃಥಿವೀ | ಅಪ್ | ತೇಜ | ವಾಯು | ಆಕಾಶ |
| ಬೀಜಮಂತ್ರಗಳು | ನಕಾರ | ಮಕಾರ | ಶಿಕಾರ | ವಾಕಾರ | ಯಕಾರ |

**ಮಹಾ ಸೂತ್ರಗಳಿಗೆ ಸಂಬಂಧಿಸಿದ ಉಪಸೂತ್ರಗಳು**

| | | | | | |
|---|---|---|---|---|---|
| ೧ | ಪುರಾಣಂ | ಲೋಹಕಂಥಾ | ಗೋಣೀಕಂಥಾ | ತ್ರಿಪುಟೀ | ಪಂಚವರ್ಣ |
| ೨ | ಪಚ್ಚಕಂಥಾ | ಸ್ವರ್ಣಕಂಥಾ | ದಂಶೀ | ರಜ್ಜು | ಕಂಬಾಲ |
| ೩ | ಷಡಂಗಂ | ಶೃಂಗೀ | ಜಠರ | ಕಂಥಾ | ವೃಷಭ |
| ೪ | ಸುರಗೀ | ಮುಸಣೀ | ತ್ರಿಗುಣ | ಭಸ್ಮೀ | ದಶವಕ್ತ್ರ |
| ೫ | ಮಹಿಷೀ | ಕುಠಾರ | ಕೇಶಕಂಥಾ | ಶಿಖರೀ | ಜರತ್ಕಂಥಾ |
| ೬ | ದಿಗಂಬರ | ಭೈತ್ರೀ | ಲಲಾಟ | ರೌಪ್ಯಕ | ಪಂಚಮುಖ |
| ೭ | ವೇಣೀ | ಕಠಾರ | ವ್ಯಾಘ್ರಕಂಥಾ | ಚಂದ್ರಗುಂಡ | ಗುಹಾಗ್ರ |
| ೮ | ಭಿತ್ತಿ | ಚಾಮರೀ | ಲೋಚನ | ಮೃತ್ಕಂಥಾ | ಗೋಚರ |
| ೯ | ಮೋರಟ | ಕವಾಟ | ಭಗಿನೀ | ಕಾಷ್ಠಕಂ | ಗಗನ |
| ೧೦ | ನಾಟೀ | ಕುಕ್ಷಕಂಥಾ | ಜಾಲಕಂಥಾ | ಪವನ | ಮುಸಲೀ |
| ೧೧ | ಶೌರೀ | ಜ್ವಲತ್ಕಂಥಾ | ನಟನ | ರಾಮಗಿರಿಃ | ಲಗುಡ |
| ೧೨ | ಮುಸುಡೀ | ಸಿಂಹೀ | ಬದಡಿ | ಖಡ್ಗೀ | ಶಿಥಿಲೀ |

ಗ) ಏಕಾದಶೀ ಪ್ರಾಶಸ್ತ್ಯವು ಬಸವಪೂರ್ವಯುಗದಲ್ಲಿ ಕೆಲವರಲ್ಲಿದ್ದ ವೀರಶೈವಾಚಾರವಿರಬೇಕು ಎಂದು ಊಹಿಸಬಹುದು ಏಕೆಂದರೆ ಅಂದಿನ ವೀರಶೈವದ ಶಿವಭಕ್ತಿಯ ಉತ್ಕಟತೆಯನ್ನು ಇದು ಸೂಚಿಸುತ್ತದೆ.

ಘ) ಗಾಯತ್ರೀ ಪ್ರಾಶಸ್ತ್ಯವನ್ನು ಕುರಿತು ಭಾಷ್ಯದಲ್ಲಿ ಹೀಗೆ ಹೇಳಿದೆ. ಇಲ್ಲಿ ಪರಶಿವ ಬ್ರಹ್ಮವು ಗುರುಲಿಂಗಾತ್ಮಕ ಎಂಬುದನ್ನು ಸಮರ್ಥಿಸಲಾಗಿದೆ. ಇಲ್ಲಿ ಗಾಯತ್ರೀ ಶಬ್ದವು ಕೇವಲ ಛಂದೋ ಮಾತ್ರವೆಂದು ಹೇಳಿಲ್ಲ; ಏಕೆಂದರೆ ಛಂದೋ ರೂಪವಾದ ಗಾಯತ್ರಿಗೆ ಸರ್ವಾತ್ಮಕತ್ವವು ಸಂಭವಿಸುವುದಿಲ್ಲವಾದ್ದರಿಂದ ಗಾಯತ್ರೀಚೇತೋರ್ಪಣವು ಪರಶಿವನಿಗೇ ಉಕ್ತವಾಗಿದೆ. ಎಂದರೆ ಗಾಯತ್ರೀ ಸಾದೃಶ್ಯಾನುಸಂಧಾನಕ್ಕೆ ಫಲ ಪರಶಿವನೇ ಎಂದು ಇಲ್ಲಿ ವರ್ಣಿತವಾಗಿದೆ. ಇದೇ ವಿಷಯವನ್ನು ನೀಲಕಂಠಶಿವಾಚಾರ್ಯರೂ ಕೂಡ ತಮ್ಮ ಕ್ರಿಯಾಸಾರದಲ್ಲಿ ಹೀಗೆ ಹೇಳಿದ್ದಾರೆ–

1) ಛಂದೋಭಿಧಾಸಾನ್ನೇತಿಚೇತ್ಯಾದಿಸೂತ್ರೇಣ ಶಾಶ್ವತಮ್ ॥ ೨೬೪॥
ಗಾಯತ್ರ್ಯಾಖ್ಯಂ ಪರಂ ಬ್ರಹ್ಮ ಧಾರ್ಯಂ ಧ್ಯೇಯಂಚ ಹೃದಂಬುಜೇ ।

ತಥಾ ಚೇತೋರ್ಪಣಗದಾಚ್ಛ್ರುತಿರ್ದರ್ಶಯತೀತಿ ಹಿ ॥ ೨೬೫ ॥
ಚೇತೋರ್ಪಣಂ ಧಾರಣಂ ಚ ಹೃದಯಾಂಭೋಜಮಧ್ಯಮೇ ।

ಬಹುಷು ಶ್ರುತಿಜಾಲೇಷು ಸಮ್ಯಗೇವೋಪಪಾದಿತಮ್ ॥ ೨೬೬ ॥
ಸ್ಥಾನಾನಾಮುತ್ತಮಂ ಸ್ಥಾನಂ ಹೃದಬ್ಜಮಿತಿ ನಿಶ್ಚಿತಮ್ । ಎಂದು.

ಇಲ್ಲಿಯವರೆಗೆ ಶ್ರೀಪತಿಪಂಡಿತಭಗವತ್ಪಾದಾಚಾರ್ಯರ ಮೇಲೆ ಮಾಡಿದ ಆಕ್ಷೇಪಗಳಿಗೆ ಪ್ರಮಾಣ ಪೂರ್ವಕ ಸಮಾಧಾನವನ್ನು ಹೇಳಿರುವುದರಿಂದ ಶಾಸನೋಕ್ತ ಶ್ರೀಪತಿಯೇ ಈ ಭಾಷ್ಯವನ್ನು ಬರೆದವರೆಂದು ನಿವೇದಿಸಿ ಈ ಪ್ರಕರಣವನ್ನು ಮುಗಿಸಲಾಗಿದೆ.

## ಶ್ರೀಕರಭಾಷ್ಯದಲ್ಲಿ ವೀರಶೈವ ಪೂರ್ವಾಚಾರ್ಯರು ಮತ್ತು ಅವರು ರಚಿಸಿರುವ ಗ್ರಂಥಗಳ ಪ್ರಸ್ತಾಪ.

ಶ್ರೀಕರಭಾಷ್ಯದಲ್ಲಿ ಪೂರ್ವದ ಆಚಾರ್ಯರು ಮತ್ತು ಅವರು ರಚಿಸಿದ ಭಾಷ್ಯಾದಿಗಳ ಉಲ್ಲೇಖವು ಅಲ್ಲಲ್ಲಿ ಕಾಣುತ್ತದೆ. ಅದನ್ನಿಲ್ಲಿ ಸಂಕ್ಷೇಪವಾಗಿ ಹೇಳಿದೆ–

೧. [1]“ಸಮನ್ವಯಸೂತ್ರೇ ಏಕೋರಾಮಸಿದ್ಧ ಭಗವತ್ಪಾದಾಚಾರ್ಯೈಃ ‘ ಶ್ರೋತವ್ಯ ’ ಇತ್ಯತ್ರ ಆತ್ಮಜ್ಞಾನವಿಧಿರ್ನಿರಾಕೃತಃ ” ಇತಿ ಪ್ರತಿಪಾದಿತಮ್ ಎಂಬುದರಿಂದ ಭಾಷ್ಯಕಾರರ ಗುರು ಏಕೋರಾಮಸಿದ್ಧಭಗವತ್ಪಾದರೂ ಒಂದು ಸೂತ್ರಭಾಷ್ಯವನ್ನು ಬರೆದಿದ್ದರೆಂದು ತೋರುತ್ತದೆ.

೨. [2]“ಅತ ಏವ ಗುಹಾಧಿಕರಣೇ ಮಂಚಣಪಂಡಿತೀಯೇ ‘ ಋತಂ ಪಿಬಂತೌ ’ ಇತ್ಯತ್ರ ಪಿಬದಪಿಬತ್ಸಮುದಾಯಲಕ್ಷಣಾಯಾಃ ಅಜಹಲ್ಲಕ್ಷಣತಾ ಪ್ರತಿಪಾದಿತಾ ” ಇಲ್ಲಿ ಮಂಚಣಪಂಡಿತಾ ರಾಧ್ಯರೂ ಕೂಡ ತಮ್ಮ ಸೂತ್ರಭಾಷ್ಯದ ಗುಹಾಧಿಕರಣದಲ್ಲಿ ಅಜಹಲ್ಲಕ್ಷಣೆಯನ್ನು ಅಂಗೀಕರಿಸಿರುವ ಅಂಶವು ವ್ಯಕ್ತವಾಗುತ್ತದೆ.

೩. [3]“ತಸ್ಮಾತ್ ಲಕ್ಷಣಾದ್ವಯಮೇವ ಪರಮಾನಂದಾರಾಧ್ಯೇನ ನಿರ್ಣೀತಂ. ಏಕೋ ರಾಮಸಿದ್ಧಾರಾಧ್ಯ ಭಗವತ್ಪಾದಾಚಾರ್ಯಾದಿಭಿಃ ಸ್ವೀಕೃತತ್ವಾದೇವ ಸಮ್ಯಗುಪದೇಶಾತ್ ” “ ಲಕ್ಷಣಾದ್ವಯಮೇವ ಶಾಂಭವಾನಂದ ಶಿವಾರಾಧ್ಯಾಭಿಪ್ರೇತಮ್ ” ಎಂಬುದರಿಂದ ಏಕೋರಾಮ ಸಿದ್ಧಾರಾಧ್ಯರಿಗಿಂತ ಮೊದಲೇ ಪರಮಾನಂದಾರಾಧ್ಯರು ಲಕ್ಷಣಾದ್ವಯವನ್ನು ಕುರಿತು ನಿರ್ಣಯ ಮಾಡಿದ್ದರೆಂಬುದು ಸ್ಪಷ್ಟವಾಗುತ್ತದೆ.

---

[1] ಶ್ರೀಕರಭಾಷ್ಯ ಬ್ರಂ. ಸೂ. ೧. ೧. ೧. (ಸಂ. ೧. ಪು. ೪೨)
[2] ೧. ೧. ೧. (ಸಂ. ೧. ಪು. ೪೪)
[3] ೧. ೧. ೧. (ಸಂ. ೧. ಪು. ೪೬)

೪. [1]" ಏವಂ ರೇವಣಸಿದ್ಧ-ರಾಮಸಿದ್ಧ-ಉದ್ಭಟಾರಾಧ್ಯ-ವೇಮಾರಾಧ್ಯಾದಿಭಿಃ ಶ್ರೌತ ಶೈವಾಚಾರ್ಯೈಃ ವ್ಯಪದೇಶಾತ್"–

೫. [2]" ಸಕಲಶಾಸ್ತ್ರಾರ್ಥವೇತ್ತೃಭಿಃ ವೇಮಾರಾಧ್ಯ-ಉದ್ಭಟಾರಾಧ್ಯ-ಮರುಲಸಿದ್ಧ-ರೇವಣ ಸಿದ್ಧಾರಾಧ್ಯಾದಿಭಿಃ ಕೃತಾತ್ ವೇದಾಂತಭಾಷ್ಯಾದಿ ಗ್ರಂಥಾತ್" ಮುಂತಾದ ಉಲ್ಲೇಖಗಳಿಂದ ಶ್ರೀಪತಿಗಿಂತಲೂ ಹಿಂದೆ ಇದ್ದ ಶೈವಾಚಾರ್ಯರು ವೇದಾಂತೋಪನಿಷತ್ತುಗಳು ಮತ್ತು ಬ್ರಹ್ಮಸೂತ್ರಗಳ ಮೇಲೆ ಭಾಷ್ಯಗಳನ್ನು ಬರೆದಿದ್ದರೆಂದು ನಿಶ್ಚಯವಾಗುತ್ತದೆ.

## ಅಗಸ್ತ್ಯ ಮತ್ತು ರೇಣುಕರ ಕಾಲ

ವೀರಶೈವ ಧಾರ್ಮಿಕ ಇತಿಹಾಸವನ್ನು ಕುರಿತು ಹಾಗೂ ಶೈವಸಿದ್ಧಾಂತ ಪರಂಪರೆಯನ್ನು ಕುರಿತು ವಿದ್ವಾಂಸರು ಬಹಳಮಟ್ಟಿಗೆ ವಿಚಾರಮಾಡಿದ್ದಾರೆ. ಆದಿರೇಣುಕಾಚಾರ್ಯರಿಂದ ವೀರಶೈವ ಸಿದ್ಧಾಂತವನ್ನು ಉಪದೇಶಮುಖದಿಂದ ಸ್ವೀಕರಿಸಿದ ಅಗಸ್ತ್ಯನ ಕಾಲವನ್ನು ಕುರಿತು ಕೂಡಾ ವಿದ್ವಾಂಸರ ವಿಚಾರಗಳು ಪ್ರಕಟಿತವಾಗಿಯೇ ಇವೆ.

ಅಗಸ್ತ್ಯಮುನಿಯು ರಚಿಸಿದ ವೈಯಾಸಿಕ ಸೂತ್ರವೃತ್ತಿಯನ್ನು ಅವಲಂಬಿಸಿಯೇ ಅಲ್ಲವೆ ಶ್ರೀಪತಿಯು ಶ್ರೀಕರಭಾಷ್ಯವನ್ನು ನಿರ್ಮಿಸಿದ್ದು. ಶ್ರೀ ರೇಣುಕಾಚಾರ್ಯರು, ಅಗಸ್ತ್ಯಮಹರ್ಷಿಗೆ ಬೋಧಿಸಿದ ಸಿದ್ಧಾಂತವು ಸಿದ್ಧಾಂತಶಿಖಾಮಣಿಯಲ್ಲಿ ಶಿವಯೋಗಿ ಶಿವಾಚಾರ್ಯರಿಂದ ನಿರೂಪಿತವಾಗಿದೆ. ಸಿದ್ಧಾಂತಶಿಖಾಮಣಿಯು ಶ್ರೀಕರಭಾಷ್ಯದಲ್ಲಿ ಮತ್ತೆ ಮತ್ತೆ ಪ್ರಮಾಣವಾಗಿ ಸ್ವೀಕೃತವಾಗಿದೆ.

ಶಿವಯೋಗಿ ಶಿವಾಚಾರ್ಯರ ಕಾಲ ಕ್ರಿ. ಶ. ಸು ೮೦೦ ರಕ್ಕಿಂತ ಹಿಂದೆಯೇ ಇರಬೇಕು ಎಂದು "ಮಣಿಮುಕುರ"ವೆಂಬ ಕಾವ್ಯಮಯವಾದ ಸಿದ್ಧಾಂತ ಶಿಖಾಮಣಿಯ ಪೀಠಿಕೆಯಲ್ಲಿ ಅದರ ಕರ್ತರಾದ ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧ್ಯಕ್ಷರಾದ ಜಗದ್ಗುರು ಡಾ|| ಚನ್ನಬಸವ ರಾಜದೇಶಿಕೇಂದ್ರ ಮಹಾಸ್ವಾಮಿಗಳು ಉಲ್ಲೇಖಿಸಿದ್ದಾರೆ.[3] ಶಿವಯೋಗಿ ಶಿವಾಚಾರ್ಯರ (ಕ್ರೀ. ಶ. ಸು. ೮೦೦) ಸಾಲುಹಟ್ಟಿ ಅಥವಾ ಸಾಲೊಟಗಿ ವಿದ್ಯಾಪೀಠದಲ್ಲಿ ಪ್ರಾಚಾರ್ಯರಾಗಿದ್ದರೆಂದು ಹೇಳಲಾಗಿದೆ. ಇದು ವಿಜಾಪುರಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿದೆ. ಅಲ್ಲಿ 'ಶಿವಯೋಗಿ'ಹೆಸರಿನ ಸಮಾಧಿಯೊಂದು ಇರುವುದಾಗಿ ತಿಳಿದು ಬಂದಿದೆ.[4] ಇದು ನಿಜವಾಗಿದ್ದಲ್ಲಿ ಶಿವಯೋಗಿ ಶಿವಾಚಾರ್ಯರಕಾಲ ಇನ್ನೂ ಹಿಂದೆ ಹೋಗುತ್ತದೆ.

ಆಗಮೋಕ್ತರಾದ ರೇಣುಕರು ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿರುವಂತೆ ಕೊಲ್ಲಿಪಾಕಿ (ಆಂಧ್ರಪ್ರದೇಶ)ಯ ಸೋಮನಾಥ ಶಿವಲಿಂಗಮುಖದಿಂದ ಆವಿರ್ಭವಿಸಿ ಮಲಯಾಚಲಕ್ಕೆ ಆಗಮಿಸಿದರು. ಅಲ್ಲಿ ಅಗಸ್ತ್ಯ ಮಹರ್ಷಿಯ ತಪೋವನವನ್ನು ಪ್ರವೇಶಿಸಿದರು.

---

[1] ಬ್ರ. ಸೂ. ೨. ೨. ೩೭. (ಸಂ. ೨. ಪು. ೪೭)

[2] ಬ್ರ. ಸೂ. ೩. ೩. ೩. (ಸಂ. ೨. ಪು. ೨೬೫)

[3] ಮಣಿಮುಕುರ ಪೀಠಿಕೆ. ಪು. ೧೯.

[4] 'ಸಿದ್ಧಾಂತ ಶಿಖಾಮಣಿಯ ಸೌಂದರ್ಯದರ್ಶನ' ಪೀಠಿಕೆ. ಪು. ೧೧-೧೨ (೧೯೭೭).

ತಮಾಗತಂ ಮಹಾಸಿದ್ಧಂ ಸಮೀಕ್ಷ್ಯ ಕಲಶೋದ್ಭವಃ ।
ಗಣೇಂದ್ರಂ ರೇಣುಕಾಭಿಖ್ಯಂ ವಿವೇದ ಜ್ಞಾನಚಕ್ಷುಷಾ ॥ ೩೨

ಆಗ ಅಗಸ್ತ್ಯನು–

ತಸ್ಯಾನುಭಾವಂ ವಿಜ್ಞಾಯ ಸಹಸೈವ ಸಮುತ್ಥಿತಃ ।
ಲೋಪಾಮುದ್ರಾಕರಾನೀತೈರುದಕೈರತಿಪಾವನೈಃ ॥
ಪಾದೌ ಪ್ರಕ್ಷಾಲಯಾಮಾಸ ಸ ತಸ್ಯ ಶಿವಯೋಗಿನಃ ॥

ತಪೋವನವನ್ನು ಪ್ರವೇಶಿಸಿದ ಮಹಾಸಿದ್ಧನನ್ನು ಕಳಸ ಎಂಬಲ್ಲಿ ಜನಿಸಿದ ಮಹರ್ಷಿಯು ಕಂಡು, ಕೂಡಲೇ ಎದ್ದು, ಲೋಪಾಮುದ್ರೆಯು ತಂದ ಪವಿತ್ರೋದಕದಿಂದ ಆ ಶಿವಯೋಗಿಯ ಪಾದಗಳನ್ನು ತೊಳೆದನು. ಕುಶಲಪ್ರಶ್ನೆಯ ತರುವಾಯ ಅಗಸ್ತ್ಯನು ಆಚಾರ್ಯರನ್ನು ಪ್ರಾರ್ಥಿಸಿದ–

"ಎಲೈ ಮಹಾನುಭಾವನೆ, ಹಿಂದೆ ಗಿರಿಜಾಸೂನುವಾದ ಷಣ್ಮುಖಸ್ವಾಮಿಯು, ಶಿವನು ಪಾರ್ವತಿಗೆ ಬೋಧಿಸಿದ ಶಿವಧರ್ಮೋತ್ತರವೆಂಬ ಶಾಸ್ತ್ರವನ್ನು ನಿನಗೆ ಬೋಧಿಸಿದನಲ್ಲವೆ! ನಿನ್ನ ಮುಖದಿಂದ ಶ್ರುತಿಸಮ್ಮತವಾದ ಆ ಸಿದ್ಧಾಂತವನ್ನು ತಿಳಿಯಬಯಸಿದ್ದೇನೆ. ಎಲೈ ಸರ್ವಜ್ಞನೇ, ಸರ್ವಾರ್ಥಸಾಧಕವೂ ಶಿವಾತ್ಮೈಕ್ಯಬೋಧಕವೂ ಸಂಪ್ರದಾಯಪ್ರವರ್ತಕವೂ ಆದ ಈ ಶೈವಸಿದ್ಧಾಂತವನ್ನು ನನಗೆ ಬೋಧಿಸು. ಅನೇಕ ಆಗಮಗಳನ್ನು ಕೇಳಿ ಸಂಶಯಗೊಂಡಿರುವ ನನ್ನನ್ನು ಕೃತಾರ್ಥನನ್ನಾಗಿಮಾಡು" ಎಂದು.

ಇದರಿಂದ ರೇಣುಕಾಗಸ್ತ್ಯರ ಗುರು-ಶಿಷ್ಯಭಾವವು ಸ್ಪಷ್ಟವಾಗುತ್ತದೆ. ವೀರಶೈವಮಹರ್ಷಿಗಳ ಪಂಕ್ತಿಯಲ್ಲಿ ಅಗಸ್ತ್ಯನು ಮೊದಲನೆಯವನು.

ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಾಶ್ಯಪಃ ।
ಭಾರದ್ವಾಜೋಽಂಗಿರಾ ಅತ್ರಿರ್ವಶಿಷ್ಠೋ ರೋಮಹರ್ಷಣಃ ॥
ಏತೇ ಸರ್ವೇ ಮಹಾಭಾಗಾಃ ಅತಿವರ್ಣಾಶ್ರಮೇ ರತಾಃ ।
ವೀರಶೈವಾ ಸಮಾಖ್ಯಾತಾಃ ಜೀವನ್ಮುಕ್ತಾ ನ ಸಂಶಯಃ ॥
(ಕ್ರಿಯಾಸಾರ ಉ. ೧)

## ಅಗಸ್ತ್ಯಮುನಿಯ ಕಾಲ

ಅಗಸ್ತ್ಯಮುನಿಯನ್ನು ಕುರಿತು ವಂಗದೇಶದ ಓ. ಸಿ. ಗಂಗೋಳಿ ಮಹಾಶಯನು ರಚಿಸಿರುವ "ಪೂರ್ವಕಾಲದ ದ್ವೀಪಾಂತರಸಂಚಾರಿ ಅಗಸ್ತ್ಯ" ಎಂಬ ಲೇಖನವನ್ನು ವಿಮರ್ಶಿಸಿರುವ ರಾವ್ ಸಾಹೇಬ್ 'ವಚನಶಾಸ್ತ್ರ ಪಿತಾಮಹ' ಲಿಂ॥ ಫ. ಗು. ಹಳಕಟ್ಟಿ ಅವರು ತಮ್ಮ "ಶಿವಾನುಭವ" ತ್ರೈಮಾಸಿಕದಲ್ಲಿ[2] "ಅಗಸ್ತ್ಯಮುನಿ" ಎಂಬ ಒಂದು ಲೇಖನವನ್ನು ಪ್ರಕಟಿಸಿದರು. ಅದರ ಸಾರವಿದು–

---

[1] ಕ್ರಿಯಾಸಾರ. ೧-೧೪.

[2] ಶಿವಾನುಭವ ೧೯೩೮ ಸಂ. ೫.

"ಶ್ರೀ ಗಂಗೋಳಿ ಮಹಾಶಯನ ಅಭಿಪ್ರಾಯದಂತೆ ಅಗಸ್ತ್ಯನು ಮೊದಲು ವಾರಾಣಸೀ ನಿವಾಸಿ. ಆತನು ವಿಂಧ್ಯಾಟವಿಯನ್ನು ದಾಟಿ ದಕ್ಷಿಣಾಪಥಕ್ಕೆ ಬಂದನು. ಅನಂತರ ನಾಸಿಕಾ ಪ್ರಾಂತದಲ್ಲಿ ಆತ ಮೊದಲು ಆಶ್ರಮವನ್ನು ರಚಿಸಿಕೊಂಡನು. ಅಲ್ಲಿ "ವಾತಾಪಿ ಮತ್ತು ಇಲ್ವಲ" ಎಂಬ ಅಸುರರು ಮಹರ್ಷಿಯ ಸಂಕಲ್ಪಮಾತ್ರದಿಂದಲೇ ಹತರಾದರು. ಅವರ ಪಾಶವೀಶಕ್ತಿಯು ಈ ತಪೋಧನನ ಪ್ರಭಾವಕುಕ್ಷಿಯಲ್ಲಿ ಜೀರ್ಣವಾಗಿ ಹೋಯಿತು. [1] "ವಾತಾಪೀ ಜೀರ್ಣೋ ಭವ" ಎಂಬ ಗಾದೆಯು ಇಂದಿಗೂ ಬಳಕೆಯಲ್ಲಿದೆ. ವಿಜಾಪುರಜಿಲ್ಲೆ ಶಿವಯೋಗಮಂದಿರದ ಹತ್ತಿರವಿರುವ 'ಮಹಾಕೂಟ'ದಲ್ಲಿ ಇವನ ಸ್ಮಾರಕವು ಇಂದಿಗೂ ಇದೆ. ಬಾದಮಿ, ವಾತಾಪಿ ಎಂಬುದರ ತದ್ಭವ.

ಅಲ್ಲಿಂದ ಅಗಸ್ತ್ಯನು ದಕ್ಷಿಣಾಭಿಮುಖಿಯಾಗಿ ಹೊರಟು ಪಾಂಡ್ಯರಾಜ್ಯವನ್ನು ಪ್ರವೇಶಿದ. ಅಲ್ಲಿ ಆತ ರಾಜಗುರುವೆನಿಸಿ ತಮಿಳು ಭಾಷೆಯ "ಅಗತ್ತಿ" ಎಂಬ ವ್ಯಾಕರಣವನ್ನು ರಚಿಸಿದನು. "ಅಗಸ್ತ್ಯನ ಸಕಲಾಧಿಕಾರ" ವೆಂಬ ಮೂರ್ತಿರಚನಾಶಾಸ್ತ್ರಕ್ಕೂ ಸಹ ಅಗಸ್ತ್ಯನೇ ಪ್ರವರ್ತಕನೆಂದು ಹೇಳುತ್ತಾರೆ. ಒಂದು ವೈದ್ಯಶಾಸ್ತ್ರವನ್ನು ಆತ ಬರೆದಿದ್ದನೆಂದು ಹೇಳಲಾಗಿದೆ. ತಮಿಳು ಸಂಸ್ಕೃತಿಯ ಜನಕ ಅಗಸ್ತ್ಯನೆಂದೇ ಅವರು ಭಾವಿಸಿದ್ದಾರೆ. ಕನ್ಯಾಕುಮಾರಿಯ ಸಮೀಪದಲ್ಲಿರುವ "ಪೋಧೀಯ" ಪರ್ವತದಲ್ಲಿ ಆತನಿಂದಿಗೂ ಅದೃಶ್ಯನಾಗಿ ತಪೋನಿರತನಾಗಿದ್ದಾನೆ ಎಂಬುದು ತಮಿಳರ ದೃಢ ವಿಶ್ವಾಸ. ಅನಂತರ ಅಗಸ್ತ್ಯನು ಸಮುದ್ರವನ್ನು ದಾಟಿ ಕಾಂಬೋಡಿಯಾ ದ್ವೀಪಕ್ಕೆ ಬಂದನು. ಇದನ್ನೇ ಪೌರಾಣಿಕರು ಸಪ್ತಸಾಗರ ಶೋಷಕ, ಸಪ್ತಸಾಗರವನ್ನು ಪಾನಮಾಡಿದವನು ಮುಂತಾಗಿ ಉತ್ಪ್ರೇಕ್ಷಿಸಿದ್ದಾರೆ.

ಕಾಂಬೋಡಿಯಾದ "ಅಂಗೀರವಾಟ" ಎಂಬಲ್ಲಿರುವ ಶಿಲಾಲೇಖನದಲ್ಲಿ– ಆರ್ಯದೇಶದ ಅಗಸ್ತ್ಯನೆಂಬೊಬ್ಬ ಬ್ರಾಹ್ಮಣನು ಕಾಂಬೋಡಿಯಾ ದ್ವೀಪಕ್ಕೆ ಬಂದು, ಶಿವಯೋಗಸಿದ್ಧನಾಗಿ. ತನ್ನ ಅಲೌಕಿಕ ಶಕ್ತಿಯಿಂದ ಅಲ್ಲಿ ಭದ್ರೇಶ್ವರನನ್ನು ಪೂಜಿಸಿದನು ಎಂದು ಹೇಳಿದೆ.

ಇಲ್ಲಿ ಅಗಸ್ತ್ಯನು "ಮಹಿಸಿದ್ಧ" ವಂಶದಲ್ಲಿ ಹುಟ್ಟಿದ "ಯಶೋಮತಿ" ಎಂಬ ರಾಜಕನ್ಯೆಯನ್ನು ಮದುವೆಯಾಗಿ, ಅವಳಲ್ಲಿ "ನರೇಂದ್ರವರ್ಮ"ನೆಂಬ ಮಗನನ್ನು ಪಡೆದನೆಂದು ಆ ಶಾಸನದಲ್ಲಿ ಹೇಳಿದೆ.

ವಾಯುಪುರಾಣದಲ್ಲಿಯೂ ಕೂಡ– ಅಗಸ್ತ್ಯನು ಬರ್ಹಿಣದ್ವೀಪ (ಬೋರ್ನಿಯೋ), ಕುಶ ದ್ವೀಪ, ವರಾಹದ್ವೀಪ ಮತ್ತು ಶೌಖ್ಯದ್ವೀಪಗಳಲ್ಲಿಯೂ ಕೂಡ ಸಂಚರಿಸಿದನೆಂದು ಹೇಳಿದೆ. ಹರಿವಂಶದಲ್ಲಿ ಅಗಸ್ತ್ಯನ ಪವಿತ್ರ ಆಶ್ರಮವು ಕುಂಜರ ಪರ್ವತದಲ್ಲಿತ್ತೆಂದು ವರ್ಣಿತವಾಗಿದೆ.

ಪೂರ್ವಜಾವಾದಲ್ಲಿರುವ "ದಿನಯ" ಎಂಬ ಗ್ರಾಮದ ಹತ್ತಿರ ಒಂದು ಶಾಸನದಲ್ಲಿ ಕ್ರಿ. ಪೂ. ೭೬೦ ರಲ್ಲಿ "ಅಗಸ್ತ್ಯ" ನೆಂಬ ಒಂದು ಮೂರ್ತಿಯು ಕಡೆಯಲ್ಪಟ್ಟಿದೆ. ಅಲ್ಲಿ ಅಗಸ್ತ್ಯನನ್ನು "ಶಿವಗುರು" "ಭಟ್ಟಾರಕಗುರು" ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

---

[1] ಜೀರ್ಣಸ್ತೇ ಜಾತರೇ ವಹ್ನೌ ದೃಷ್ಟೋ ವಾತಾಪಿದಾನವಃ (ಸಿ. ಶಿ. ೪–೨೯)

ಆದರೆ ಅಗಸ್ತ್ಯನ ಜನ್ಮಭೂಮಿಯು ಕರ್ನಾಟಕ ರಾಜ್ಯದಲ್ಲಿರುವ "ಕಳಶ" ಎಂಬ ಊರು (ಚಿಕ್ಕಮಗಳೂರು ಜಿಲ್ಲೆ). ಅಲ್ಲಿ ಇಂದಿಗೂ ಆತನ ಸ್ಮಾರಕಗಳಿವೆ. ಪುರಾಣದಲ್ಲಿ ಹೇಳಿರುವ [1] "ಕುಂಭಸಂಭವ" ಮುಂತಾದ ವರ್ಣನಗಳಿಗೆ ಇದೇ ಮೂಲವಿರಬಹುದು. ಏಕೆಂದರೆ ಕಲಶ-ಕುಂಭ ಪದಗಳು ಪರ್ಯಾಯವಾಚಕಗಳು. ಗಂಗೋಳಿ ಮಹಾಶಯನು ಮಲಯಾದ್ರಿಯು ಸುಮಾತ್ರಾ ದ್ವೀಪದಲ್ಲಿದೆ ಎನ್ನುತ್ತಾನೆ. ಆದರೆ ಹಳಕಟ್ಟಿಯವರು ಅದನ್ನು ನಿರಾಕರಿಸಿ, ಮಲಯಾಚಲವು ದಕ್ಷಿಣಭಾರತದಲ್ಲಿನ ಜ|| ರೇಣುಕಾಚಾರ್ಯರ ರಂಭಾಪುರೀ ಸಮೀಪದಲ್ಲಿದೆ ಎನ್ನುತ್ತಾರೆ. "ರೇಣುಕ-ರೇವಣಸಿದ್ಧರ ಐತಿಹ್ಯ"ವೆಂಬ ಒಂದು ಪ್ರಬಂಧದಲ್ಲಿ ಶ್ರೀ ವಿ. ಜಿ. ಪಾಟೀಲ್(ನಿವೃತ್ತ ಅ. ಇನ್ಸ್ಪೆಕ್ಟರ್ ಬೆಳಗಾಂ) ಎಂಬುವರು ಬರೆದು ಈ ಅಂಶವನ್ನು ಸಕಾರಣವಾಗಿ ಸಮರ್ಥಿಸಿದ್ದಾರೆ. [2]

ಅಗಸ್ತ್ಯಮಹರ್ಷಿಗೆ ಆದಿರೇಣುಕರೇ ಶಿವಸಿದ್ಧಾಂತವನ್ನು ಬೋಧಿಸಿದವರು ಎಂಬುದನ್ನು ನಿಶ್ಚೈಸಿದಲ್ಲಿ ಆತನ ಕಾಲವು ಕ್ರಿ. ಪೂ. ಸಂ. ೭೬೦ ಎಂದು ಹೇಳಬಹುದು.

**ರೇಣುಕರು ಎಷ್ಟು ಜನ ?**

(೧) ಇದರಿಂದ ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವ ಆದಿ ರೇಣುಕರು ಅಗಸ್ತ್ಯನಿಗೆ ಶಿವಾದ್ವೈತ ಸಿದ್ಧಾಂತವನ್ನು ಉಪದೇಶಿಸಿದವರು. ತರುವಾಯ ಅವರು ವಿಭೀಷಣನ ಪ್ರಾರ್ಥನೆಯಂತೆ ಲಂಕೆಯಲ್ಲಿ ರಾವಣನು ಸಂಕಲ್ಪಿಸಿದ್ದ ಮೂರು ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಿಸಿದರು. ಇದರಿಂದ ಅಗಸ್ತ್ಯ ಮತ್ತು ಸಿದ್ಧಾಂತ ಶಿಖಾಮಣಿಯ ರೇಣುಕರ ಕಾಲವು (ಕ್ರಿ. ಪೂ. ಸು. ೭೦೦) ಎಂದು ಊಹಿಸಬಹುದು.

(೨) **ರೇವಣ**– ಅನಂತರ ಸುಮಾರು (ಕ್ರಿ. ಶ. ೫೩೫–೬೩೫) ರಲ್ಲಿ ರಚಿತವಾದ [3] ಹರಿಭದ್ರಸೂರಿಯ "ಷಡ್ದರ್ಶನ ಸಮುಚ್ಚಯ" ಎಂಬ ಗ್ರಂಥವ್ಯಾಖ್ಯಾಕಾರನಾದ ಮಣಿಭದ್ರಸೂರಿಯು

"ಉತ್ಪಲಃ ಕಾರಿಕಾಂ ವೇತ್ತಿ ತಂತ್ರಂ ವೇತ್ತಿ ಪ್ರಭಾಕರಃ ।
ವಾಮನಸ್ತೂಭಯಂ ವೇತ್ತಿ ನ ಕಿಂಚಿದಪಿ ರೇವಣಃ ॥

ಎಂದು ಒಬ್ಬ ದಾರ್ಶನಿಕ ರೇವಣರನ್ನು ಹೆಸರಿಸಿದ್ದಾನೆ. ಮಣಿಭದ್ರಸೂರಿಯ ಕಾಲ ಸರಿಯಾಗಿ ಗೊತ್ತಿಲ್ಲ. ಆದರೂ ರೇವಣರೆಂಬ ಒಬ್ಬ ಧಾರ್ಶನಿಕ ವೀರಶೈವಾಚಾರ್ಯರಿದ್ದರೆಂದು ಮಾತ್ರ ಇದರಿಂದ ತಿಳಿದುಬರುತ್ತದೆ. ಅವರ ಕಾಲ ಅನಿಶ್ಚಿತ.

(೩) **ರೇವಣಸಿದ್ಧ**– ಅಲ್ಲಿಂದ ಮುಂದೆ ಆಚಾರ್ಯ ಶಂಕರರಿಗೆ ಚಂದ್ರಮೌಳೀಶ್ವರಲಿಂಗ ಮತ್ತು ರತ್ನಗರ್ಭ ಗಣಪತಿಯನ್ನು ಅನುಗ್ರಹಿಸಿದ ರೇವಣಸಿದ್ಧರು ಮೂರನೆಯವರು. ಇವರ ಬಗೆಗೆ ಅನೇಕ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಅವುಗಳಲ್ಲಿ ಹಿಂದೆ ಶ್ರೀ ಶೃಂಗೇರಿಮಠಾಧ್ಯಕ್ಷರಾಗಿದ್ದ ಸಚ್ಚಿದಾನಂದ ಭಾರತೀ ಮಹಾಸ್ವಾಮಿಯವರ ಆಜ್ಞೆಯಂತೆ ಅವರ ಆಸ್ಥಾನಪಂಡಿತರಾದ ಕಾಶೀ ಲಕ್ಷ್ಮಣ ಶಾಸ್ತ್ರಿ ಎಂಬುವರು ಬರೆದ ಗುರುವಂಶ ಕಾವ್ಯದಲ್ಲಿ–

---

[1] ದದರ್ಶ ಸಮುಹಾಯೋಗೀ ಮುನಿಂ ಕಲಶಸಂಭವಂ (–ಸಿ. ಶಿ. ೪. ೩೨)

[2] ಶಿವಾನುಭವ– ೧೯೪೩. ಸಂ. ೮.

[3] ಷಡ್ದರ್ಶನ ಸಮುಚ್ಚಯ ಪೀಠಿಕೆ, ಕಾಶೀ ಮುದ್ರಣ ೧೯೦೫

[1] ಶ್ರೀ ಚಂದ್ರಮೌಳೀಶ್ವರಲಿಂಗಮಸ್ಮೈ
ಸದ್ರತ್ನಗರ್ಭಂ ಗಣನಾಯಕಂ ಚ ।
ಸ ವಿಶ್ವರೂಪಾಯ ಸುಸಿದ್ಧದತ್ತಂ
ದತ್ವಾನ್ಯಗಾದೀಚ್ಛಿರಮರ್ಚಯೇತಿ ॥ ೩೩ ॥

ಅದರಲ್ಲಿ "ಸುಸಿದ್ಧೇನ ರೇವಣಸಿದ್ಧ ಮಹಾಶಿವಯೋಗಿನಾ ದತ್ತಂ ಶ್ರೀ ಚಂದ್ರಮೌಳೀಶ್ವರಲಿಂಗಂ ಸದ್ರತ್ನಗರ್ಭಂ ಮಾಣಿಕ್ಯಂ ಗರ್ಭೇ ಯಸ್ಯ ಸಃ ತಥೋಕ್ತ ಸ್ತಂ ಗಣನಾಯಕಂ ಚ" ಎಂಬುದರಿಂದ ಆದಿ ಶಂಕರರು ತಮ್ಮ ಮೊಟ್ಟಮೊದಲ ಶಿಷ್ಯರಾದ ಸುರೇಶ್ವರಾಚಾರ್ಯರಿಗೆ ಭಗವತ್ಪಾದ ಶ್ರೀ ರೇಣುಕಾ ಚಾರ್ಯರು ತಮಗೆ ಅನುಗ್ರಹಿಸಿದ ಚಂದ್ರಮೌಳೀಶ್ವರಲಿಂಗ ಮತ್ತು ರತ್ನಗರ್ಭ ಗಣಪತಿಗಳನ್ನು ನೀಡಿದರು ಎಂದು ಹೇಳಿದೆ. ಮತ್ತೇ ಇದೇ ವಿಷಯವು ಅದೇ ಕಾವ್ಯದ ಸರ್ಗ ೫. ಪದ್ಯ ೬೯ ರಲ್ಲಿಯೂ ಬಂದಿದೆ. ಇದರಂತೆ ಕೆಳದಿ ಬಸವರಾಜನು ಸಂಕಲಿಸಿರುವ [2] ಶಿವತತ್ತ್ವ ರತ್ನಾಕರದಲ್ಲಿಯೂ ಸಹ–

ತತಃ ಸ ರೇವಣಸಿದ್ಧ ಸಂಪ್ರದಾಯ ಪ್ರವರ್ತಿನಾಂ ।
ಶಂಕರಾಚಾರ್ಯವರ್ಯಾಣಾಂ ಪಾರಂಪರ್ಯಕ್ರಮಾಗತಮ್ ॥ ೯ ॥
ಸಂನ್ಯಾಸಿನಮುಪಾಶ್ರಿತ್ಯವಿನಯಾವನತೋಽಧಿಕಂ ।
ವೃತ್ತಾಂತಮಖಿಲಂ ತಸ್ಮೈಯತಯೇ ಸ್ವಂ ವ್ಯಜಿಜ್ಞಪತ್ ॥ ೧೦ ॥
ರೇವಣ ಸಿದ್ಧ ಸಂಪ್ರಾಪ್ತಂ ಚಂದ್ರಮೌಳೀಶಮಪ್ಯದಾತ್ ।
ಆಖ್ಯಾಚ್ಚಾನೇನ ಲಿಂಗೇನ ತವಾಭೀಷ್ಟಾಪ್ತಿರಿತ್ಯಪಿ ॥ ೧೧ ॥

ಎಂಬುದರಿಂದ ಆದಿಶಂಕರರ ಸಮಕಾಲೀನರಾದ ಒಬ್ಬರು ರೇಣುಕರಿದ್ದರೆಂದು ಹೇಳಬಹುದಾಗಿದೆ. ರೇಣುಕ ಎಂಬ ಹೆಸರಿನವರಲ್ಲಿ ಇವರು ಮೂರನೆಯ ಆಚಾರ್ಯರು.

(೪) ರೇವಣ ಸಿದ್ಧೇಶ್ವರ– ಮುಂದೆ ಕ್ರಿ. ಶ. ೧೧–೧೨ ನೆಯ ಶತಮಾನಗಳ ಅಂತರದಲ್ಲಿ ಅವತರಿಸಿ ತಮ್ಮ ಮಹಿಮಾ ವಿಶೇಷಗಳಿಂದ ದಿಗಂತ ವಿಶ್ರಾಂತವಾದ ಯಶಸ್ಸನ್ನು ಗಳಿಸಿರುವ ರೇವಣ ಸಿದ್ಧೇಶ್ವರರು ಈ ಮಾಲಿಕೆಯಲ್ಲಿ ನಾಲ್ಕನೆಯವರೆಂದು ತೋರುತ್ತದೆ. ಇವರ ಪವಿತ್ರವಾದ ಅಭಿಧಾನವು ಶ್ರೀಕರಭಾಷ್ಯದ ಪ್ರಾರಂಭದಲ್ಲಿ ಬರುವ ಶ್ರೀಪತಿಯ ಗುರು ಪರಂಪರೆಯಲ್ಲಿ ವರ್ಣಿತವಾಗಿದೆ. ಈ ಆಚಾರ್ಯರು ಐತಿಹಾಸಿಕರು. ಆಗಮೋಕ್ತರಲ್ಲ, ರಾಜಾಧಿರಾಜ ಪೂಜಿತರಾಗಿ ಈ ಮಹಾನುಭಾವರು ಕ್ರಿ. ಶ. ೧೦೫೦-೧೧೫೭ ರವರೆಗೆ ಸಪ್ತೋತ್ತರಶತ (೧೦೭) ಏಳು + ನೂರು ವರ್ಷಗಳು ಜೀವಿಸಿದ್ದು ಅಘಟಿತಘಟನಾಪಟುಗಳೆಂದು ವಿಖ್ಯಾತರಾದರು.

### ಶ್ರೀಕರಭಾಷ್ಯ ಪ್ರಭಾವವು ಅನಂತರದ ಗ್ರಂಥಗಳಲ್ಲಿ

ಶ್ರೀಕರಭಾಷ್ಯದ ತರುವಾಯ ರಚಿತವಾದ ವೀರಶೈವ ಸಿದ್ಧಾಂತ ಗ್ರಂಥಗಳಲ್ಲಿ [3] (ನೀಲಕಂಠ ಶಿವಾಚಾರ್ಯಕೃತ) ಕ್ರಿಯಾಸಾರವು ಮೊದಲನೆಯದು. ಅದರಲ್ಲಿ ಶ್ರೀಕರಭಾಷ್ಯದಲ್ಲಿ ಉಕ್ತವಾದ ಅನೇಕ ವಿಷಯಗಳು ಯಥಾವತ್ತಾಗಿ ಕಂಡುಬರುತ್ತವೆ.

[1] ಗುರುವಂಶಕಾವ್ಯ– (ಸರ್ಗ. ೫.೩೯. ಮತ್ತು ಸಂ. ೬.೧.೩.) ಶ್ರೀರಂಗ ವಾಣೀವಿಲಾಸ ಪ್ರೆಸ್ ಸಂ. ೩.

[2] ಶಿವತತ್ತ್ವರತ್ನಾಕರ ತ. ೧೨. ಮದರಾಸ್ ಓರಿಯಂಟಲ್ ಲೈಬ್ರೆರಿ ಪ್ರಕಾಶ.

[3] ನೀಲಕಂಠಶಿವಾಚಾರ್ಯ– ಕ್ರಿ. ಶ ೧೪೦೦

(ಆ) ವಿಷಯವಾಕ್ಯ– ಉದಾಹರಣೆಗಾಗಿ ಶ್ರೀಕರಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ಪ್ರಯುಕ್ತವಾಗಿರುವ "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬ ವಿಷಯವಾಕ್ಯವೇ ಕ್ರಿಯಾಸಾರದಲ್ಲಿಯೂ ಸಹ

[1] ತತ್ರಾಮೃತಸ್ಯ ವಾಕ್ಯೋಕ್ತ ಲಿಂಗಧಾರಣವೈಭವೇ ।
ಲಿಂಗಾಂಗಸಾಮರಸ್ಯೇ ಚ ಫಲಂ ಮೋಕ್ಷಂ ಪ್ರಚಕ್ಷತೇ ॥

ಎಂದು ಲಿಂಗಧಾರಣವು ಸಮರ್ಥಿತವಾಗಿದೆ. ಪ್ರಾಯಃ ಶ್ರೀಪತಿಯೂ ಕೂಡ ಕ್ರಿಯಾಸಾರಕ್ಕೆ ಮೂಲವಾದ ನೀಲಕಂಠಭಾಷ್ಯದಿಂದಲೇ ಇದನ್ನು ಎತ್ತಿಕೊಂಡಿರಬಹುದು.

(ಆ) ಭೇದಾಭೇದ– [2] ಶಿವಜೀವರಿಗೆ ಹೇಳಿರುವ ಭೇದಾಭೇದವಾದವು ಶ್ರೀಕರಭಾಷ್ಯದಲ್ಲಿ "ಅಹಿಕುಂಡಲಾಧಿಕರಣ" ಮುಂತಾದ ಯಾವ ಯಾವ ಅಧಿಕರಣಗಳಲ್ಲಿ ಪ್ರತಿಪಾದಿತವಾಗಿದೆಯೋ ಅಲ್ಲಿಲ್ಲ ಕ್ರಿಯಾಸಾರದಲ್ಲಿಯೂ ಕೂಡ ಭೇದಾಭೇದವು ಸಮರ್ಥಿಸಲ್ಪಟ್ಟಿದೆ.

[3] ನಜೀವ ಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿ ವ್ಯಾಚಕ್ಷತೇ ಶಕ್ತಿವಿಶಿಷ್ಟಂ ವಿಷಯಸ್ತ್ವಿತಿ ॥ ೧೪ ॥
ಅಗ್ನಿಸ್ಫುಲಿಂಗಯೋರ್ನಾಸ್ತಿ ತಥಾಭೇದಃ ಸ್ವರೂಪತಃ ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್ ॥ ೧೫ ॥
ಯಥಾಹಿ ಕುಂಡಲಮಿತಿ ಭೇದಾಭೇದೌ ತಥಾತ್ರ ಚ ।
ತಸ್ಮಾಚ್ಛಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್ ॥೧೬॥

ಮುಂತಾಗಿ ಹೇಳಲಾಗಿದೆ.

ಅನಂತರ ಸಾಸಲ ಚಿಕ್ಕಣಾರಾಧ್ಯನು [4] ರಚಿಸಿರುವ 'ಪಂಚಬ್ರಹ್ಮೋದಯಭಾಷ್ಯದಲ್ಲಿ' ಶ್ರೀಪತಿಪಂಡಿತ ವಿರಚಿತ ಭಾಷ್ಯದ ಉಲ್ಲೇಖವು ಸೂಚಿತವಾಗಿದೆ. ಅಲ್ಲಿ " ವೇಮಂತ್ರಕ್ಕೆ " 'ಸಾನಂದ ಮುನಿ'ಯು ಶಂಭು (ಬ್ರಹ್ಮ) ಸೂತ್ರವೆಂಬ ೩೬ ಸಾವಿರಗ್ರಂಥಪರಿಮಿತವಾದ ೭೨ ಅಧ್ಯಾಯಗಳ ಭಾಷ್ಯವನ್ನು ಬರೆದನು. ಅನಂತರ ಶ್ರೀಪತಿಪಂಡಿತನು ಅದರ ಅರ್ಥವನ್ನು ಸಂಗ್ರಹಿಸಿ, ' ಆರಾಧ್ಯ ಸಂಹಿತೆ ' ಎಂಬ ೧೨ ಸಾವಿರ ಗ್ರಂಥ ಪರಿಮಿತವಾದ ೧೬ ಅಧ್ಯಾಯಗಳ ಭಾಷ್ಯವನ್ನು ರಚಿಸಿದನು." ಎಂದು ಹೇಳಿರುವ ಅಂಶವು ಕನ್ನಡಕವಿಚರಿತೆಯಲ್ಲಿಯೂ ಉದ್ಧೃತವಾಗಿದೆ. [5] ಇಲ್ಲಿ ಶ್ರೀಕರಭಾಷ್ಯದ ೧೬ ಪಾದಗಳನ್ನೇ ೧೬ ಅಧ್ಯಾಯಗಳೆಂದು ಭಾವಿಸಿರಬೇಕು. (K. 1674 ತಾಳೆ ಓಲೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪು. ೪೯)

ಅನಂತರ ಕ್ರಿ. ಶ. ೧೭೦೦ ಶತಮಾನದಲ್ಲಿ ರಚಿತವಾದ [6]ನಂದಿಕೇಶ್ವರನ " ಲಿಂಗಧಾರಣ ಚಂದ್ರಿಕೆ "ಯಲ್ಲಿ ಶ್ರೀಕರಭಾಷ್ಯ ಕರ್ತೃ ಶ್ರೀಪತಿಪಂಡಿತರ ಹೆಸರು ಸ್ಪಷ್ಟವಾಗಿಯೇ ನಿರ್ದಿಷ್ಟವಾಗಿದೆ.

---

[1] ಕ್ರಿಯಾಸಾರ ೧-೫.

[2] ಶ್ರೀಕರಭಾಷ್ಯ (೩–೨–೨೩ II ಪು. ೨೪೩)

[3] ಕ್ರಿಯಾಸಾರ (ಪು. ೫೨–೫೩ ಮತ್ತು ಪು. ೧೩೪ ಇತ್ಯಾದಿ) ಉ. ೧. ೯೬.

[4] ಸಾಸ. ಚಿಕ್ಕಣಾರಾಧ್ಯನ ಕಾಲ ಕ್ರಿ. ಶ. ೧೬೫೦.

[5] ಕನ್ನಡ ಕವಿಚರಿತೆ. ಭಾಗ ೩. ಪು. ೩೭೮.

[6] ಲಿಂಗದಾರಣ ಚಂದ್ರಿಕೆ– ನಂದಿಕೇಶ್ವರಕೃತ. ವಾರಾಣಸೀ ಪ್ರಕಟನ. 1905.

ಅಲ್ಲಿ ಶ್ರೀಕರಭಾಷ್ಯದಲ್ಲಿನ ಅಂತರ್ಲಿಂಗಧಾರಣ, ಬಹಿರ್ಲಿಂಗಧಾರಣ ಮುಂತಾದ ಅನೇಕ ವಿಷಯಗಳು ಶ್ರೀಕರಭಾಷ್ಯದಲ್ಲಿದ್ದಂತೆಯೇ ಉದ್ಧೃತವಾಗಿವೆ. ವೇದಾರ್ಥಪ್ರಣೇತೃಗಳಾದ ವಿದ್ಯಾರಣ್ಯರು "ಸರ್ವಲಿಂಗಂ ಸ್ಥಾಪಯತಿ" ಎಂಬ ಮಂತ್ರಕ್ಕೆ ಲಿಂಗಧಾರಣಪರವಾಗಿ ವ್ಯಾಖ್ಯಾನ ಮಾಡದಿರುವುದ ರಿಂದ ಆ ಮಂತ್ರಕ್ಕೆ ಲಿಂಗಧಾರಣ ಪರವಾಗಿ ವ್ಯಾಖ್ಯಾನ ಮಾಡುವುದು ಹೇಗೆ? ಎಂಬ ಶಂಕೆಗೆ "ಅವರು ವ್ಯಾಖ್ಯಾನ ಮಾಡದಿದ್ದರೂ ಕಾಲಹಸ್ತಿದೀಕ್ಷಿತ-ಮಂಚಣ-ಪಂಡಿತಾರಾಧ್ಯ ಮುಂತಾದವರು ಲಿಂಗಧಾರಣಪರವಾಗಿ ವ್ಯಾಖ್ಯಾನಮಾಡಿರುವರು" ಮುಂತಾಗಿ ಶ್ರೀಪತಿಪಂಡಿತರ ಹೆಸರನ್ನು ಉಲ್ಲೇಖಿಸಲಾಗಿದೆ.

ಆದರೆ ಇಲ್ಲಿ ಉಲ್ಲೇಖಗೊಂಡ ಪಂಡಿತಾರಾಧ್ಯ 'ಶ್ರೀಪತಿಪಂಡಿತನಲ್ಲ ; ಬದಲಾಗಿ ತೈತ್ತಿರೀಯೋಪನಿಷತ್ತಿಗೆ ಭಾಷ್ಯವನ್ನು ಬರೆದಿರುವ ವೃಷಭಪಂಡಿತ' ಎಂದು ಲಿಂ|| ಎಂ. ಆರ್. ಸಾಖರೆ ಎಂಬುವರು ಸಂಪಾದಿಸಿರುವ ಲಿಂಗಧಾರಣ ಚಂದ್ರಿಕೆಯ ಉಪೋದ್ಘಾತದಲ್ಲಿ (ಪು. ೬೫೭) ಹೇಳಿದೆ. ಆದರೆ ಅದು ಒಪ್ಪತಕ್ಕುದಲ್ಲ ; ಏಕೆಂದರೆ ವೃಷಭಪಂಡಿತನೂ ಕೂಡ ತನ್ನ ತೈತ್ತಿರೀಯೋಪನಿಷತ್ ಭಾಷ್ಯದ ಪ್ರಾರಂಭದಲ್ಲಿ ಶ್ರೀಪತಿಯನ್ನು ಭಕ್ತಿಯಿಂದ ನೆನೆದಿದ್ದಾನೆ.

ವೇದವ್ಯಾಸಂ ಸೂತ್ರಕಾರಂ ದೂರ್ವಾಸಂ ವೃತ್ತಿಕಾರಕಂ ।
ಭಾಷ್ಯಕೃತ್ ಪಂಡಿತಾರಾಧ್ಯಂ ಪ್ರಪದ್ಯೇ ಪಾಶಮುಕ್ತಯೇ ॥ ಎಂದು.

ಎರಡನೆಯದಾಗಿ ಈತ ತನ್ನ ಭಾಷ್ಯದಲ್ಲಿ ಶ್ರೀಕರಭಾಷ್ಯವನ್ನು ಸಂಪೂರ್ಣವಾಗಿ ಸಂಗ್ರಹಿಸಿದ್ದಾನೆ. ಮೇಲಾಗಿ- ಶ್ರೀ ಮರಿತೋಂಟದಾರ್ಯ ಪ್ರಣೀತವಾದ[1] ವೀರಶೈವಾನಂದಚಂದ್ರಿಕೆ (ವಾದಕಾಂಡ) ಮತ್ತು ಉಮಚಗಿ ಶಂಕರಶಾಸ್ತ್ರಿಗಳ ಉಪನಿಷದ್ಭಾಷ್ಯಾದಿಗಳಲ್ಲಿಯೂ ಕೂಡ ಶ್ರೀಕರ ಭಾಷ್ಯಾನುಸರಣವು ಸಂಪೂರ್ಣವಾಗಿ ಕಂಡುಬರುತ್ತದೆ.

ಈ ಕಾರಣಗಳಿಂದ ಶ್ರೀಪತಿಪಂಡಿತಾರಾಧ್ಯ ಪ್ರಣೀತವಾದ ಶ್ರೀಕರಭಾಷ್ಯವನ್ನು ಕ್ರಿ. ಶ. ೧೧ ನೆಯ ಶತಮಾನದಿಂದ ಮೊದಲುಗೊಂಡು ಇಂದಿನವರೆಗೂ ಸಹ ವೀರಶೈವಶಾಸ್ತ್ರಕಾರರು ಪ್ರಮಾಣವಾಗಿ ಸ್ವೀಕರಿಸುತ್ತ ಬಂದಿದ್ದಾರೆ.

೧೪

## ವೀರಶೈವಸಿದ್ಧಾಂತ ಸ್ವರೂಪ

ನಿಗಮಾಗಮ ಪ್ರಸಿದ್ಧವಾದ ಈ ಸಿದ್ಧಾಂತವು ಸನಾತನ, ಶಿವಾಗಮ ಪ್ರಸಿದ್ಧ. ರೇಣುಕ ಭಗವತ್ಪಾದಾಚಾರ್ಯರು-

[2] ಸಿದ್ಧಾಂತಾಖ್ಯೇ ಮಹಾ ತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಮ್ ॥

ಎಂದು ಈ ಸಿದ್ಧಾಂತವು ಕಾಮಿಕಾದಿ ವಾತುಲಾಂತವಾದ 'ಸಿದ್ಧಾಂತ'ವೆಂಬ ಶಿವಾಗಮಗಳ ಕಡೆಯಲ್ಲಿ ಉಕ್ತವಾಗಿದೆ ಎಂದಿದ್ದಾರೆ.

---

[1] ವೀರಶೈವಾನಂದಚಂದ್ರಿಕಾರ ರಾದ ಶ್ರೀಮರಿತೋಂಟದಾರ್ಯರ ಕಾಲ ಕ್ರಿ. ಶ. ೧೬೦೦.

[2] ಸಿ. ಶಿ. ೫. ೨೪

ಶ್ರೀಪತಿಪಂಡಿತಾರಾಧ್ಯರೂ ಕೂಡ ತಮ್ಮ ಭಾಷ್ಯದ ಸ್ವರೂಪವನ್ನು ಭಾಷ್ಯದ ಪ್ರಾರಂಭದಲ್ಲಿ ಹೀಗೆ ಹೇಳಿದ್ದಾರೆ–

ಶ್ರುತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ॥
ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಎಂದರೆ ದ್ವೈತ ಮತ್ತು ಅದ್ವೈತ ಮತಗಳಲ್ಲಿ ಶ್ರುತಿಯ ಕೆಲವು ಭಾಗಗಳನ್ನು ಪ್ರಮಾಣವೆಂದು ಹೇಳಲಾಗಿದೆ. ಆದರೆ 'ದ್ವೈತಾದ್ವೈತ' ಮತ್ತು 'ವಿಶೇಷಾದ್ವೈತ'ವೆಂಬ ಹೆಸರಿನ ಶುದ್ಧವಾದ ವೀರಶೈವ ಸಿದ್ಧಾಂತದಲ್ಲಿ ಎಲ್ಲ ಶ್ರುತಿಗಳೂ ಸಮನ್ವಯವಾಗುತ್ತವೆ ಎಂದು ಹೇಳಿದ್ದಾರೆ.

ವೀರಶೈವ ಎಂಬ ಶಬ್ದದ ನಿರ್ವಚನವು ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಿದೆ–

[1] ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾಃ ವೀರಶೈವಾಃ ಪ್ರಕೀರ್ತಿತಾಃ ॥

"ವೀರಶೈವ" ಎಂಬಲ್ಲಿ "ವೀ" ಎಂದರೆ ಶಿವ ಮತ್ತು ಜೀವ ಇವರಿಗೆ ಐಕ್ಯವನ್ನು ಬೋಧಿಸುವ ವಿದ್ಯೆ. ಅಂಥ ವಿದ್ಯೆಯಲ್ಲಿ "ರ" ರಮಿಸುವವರೇ ವೀರಶೈವರು ಎಂದು ನಿರ್ವಚನ ಮಾಡಲಾಗಿದೆ.

ಅದರಂತೆ ಶ್ರೀಪತಿಪಂಡಿತಾಚಾರ್ಯರೂ ಸಹ ಶ್ರೀಕರಭಾಷ್ಯವು 'ಭೇದಾಭೇದ' ಅಥವಾ 'ದ್ವೈತಾದ್ವೈತಾತ್ಮಕ' ಎಂದು ಹೇಳಿದ್ದರೂ ಈ ಭಾಷ್ಯವು "ವಿಶೇಷಾದ್ವೈತ" ಪರ ಎಂದಿದ್ದಾರೆ. ಅದರ ಸ್ವರೂಪವನ್ನು ಸಹ ಅಲ್ಲಿಯೇ ಹೇಳಲಾಗಿದೆ.

ವೀಶಬ್ದೇನೋಚ್ಯತೇ ಶಂಭುಃ ಹಂಸಹಂಸೇತಿ ಮಂತ್ರತಃ ।
ಶೇಷಶಬ್ದೇನ ಶಾರೀರೋ "ಯಥಾಗ್ನೇ" ರಿತಿ ಮಂತ್ರತಃ ।
ಅದ್ವೈತೇನ ಭವೇದ್ಯೋಗೋ 'ಯಥಾನದ್ಯ' ಇತಿ ಶ್ರುತೇಃ ॥

ಎಂದು ಹೇಳಿರುವುದಲ್ಲದೆ "ವಿಶೇಷಾದ್ವೈತ" ಎಂಬ ಪದ ನಿರ್ವಚನವನ್ನು ಮುಂದೆ ಭಾಷ್ಯದಲ್ಲಿ ಮತ್ತೆ ನಿರ್ವಚಿಸಲಾಗಿದೆ–

'ವಿಶೇಷಾದ್ವೈತ'– ಎಂಬಲ್ಲಿ ವಿ– [2]ಪರಮಾತ್ಮ, ಶೇಷ–ಶಿವಾಂಶನಾದ ಜೀವ "ಹಂಸಹಂಸ" "ಯಥಾಗ್ನೇಃ" ಎಂಬ ಮಂತ್ರಗಳು ಈ ಅರ್ಥವನ್ನು ಸಮರ್ಥಿಸುತ್ತವೆ. ಹೀಗಿರುವಾಗ ಶಿವ-ಜೀವರಿಗೆ "ಯಥಾನದ್ಯಃ" ಎಂಬ ಶ್ರುತ್ಯರ್ಥದಿಂದ ಆಗುವ ಅದ್ವೈತ ಅಥವಾ ಅಭೇದವೇ ಲಿಂಗಾಂಗ ಸಾಮರಸ್ಯವೆಂಬ ಶಿವಯೋಗ. ಇದನ್ನೇ ಶಿವಾದ್ವೈತ-ಶಕ್ತಿವಿಶಿಷ್ಟಾದ್ವೈತ-ಭೇದಾಭೇದ-ವಿಶಿಷ್ಟಾದ್ವೈತ ಅಥವಾ ಷಟ್‌ಸ್ಥಲಸಿದ್ಧಾಂತ ಎಂಬ ಪದಗಳಿಂದ ವ್ಯವಹರಿಸುತ್ತಾರೆ. ಈ ಪರ್ಯಾಯ ಪದಗಳ ನಿರ್ವಚನವನ್ನು ಹೀಗೆ ಸಂಗ್ರಹಿಸಬಹುದು.

ಅ) **ವಿಶೇಷಾದ್ವೈತ**– ವಿಶ್ಚ ಶೇಷಶ್ಚ ವಿಶೇಷೌ; ತಯೋರದ್ವೈತಮ್ ವಿಶೇಷಾದ್ವೈತಮ್.

---

[1] ಸಿ. ಶಿ. ೫.

[2] ವಿಃ ಪಕ್ಷಿಪರಮಾತ್ಮನೋಃ (ಕೋಶ)

ಆ) **ಶಕ್ತಿವಿಶಿಷ್ಟಾದ್ವೈತ**– ಶಕ್ತಿಶ್ಚ ಶಕ್ತಿಶ್ಚ ಶಕ್ತೀ : ತಾಭ್ಯಾಂ ವಿಶಿಷ್ಟೌಜೀವೇಶೌ ; ತಯೋರದ್ವೈತಂ-ಶಕ್ತಿವಿಶಿಷ್ಟಾದ್ವೈತಮ್, ಎಂದರೆ– ಶಕ್ತಿಯು ಎರಡು ವಿಧ. ಸ್ಥೂಲಚಿತ್ ಶಕ್ತಿ ಮತ್ತು ಸ್ಥೂಲ ಅಚಿತ್‌ಶಕ್ತಿ ; ಹಾಗೂ ಸೂಕ್ಷ್ಮಚಿತ್‌ಶಕ್ತಿ ಮತ್ತು ಸೂಕ್ಷ್ಮಅಚಿತ್‌ಶಕ್ತಿ ಎಂದು. "ಶಕ್ತಿಶ್ಚ ಶಕ್ತಿಶ್ಚ ಶಕ್ತೀ" ಎಂಬಲ್ಲಿ ಮೊದಲನೆಯ ಶಕ್ತಿಪದಕ್ಕೆ ಸ್ಥೂಲಚಿತ್ ಮತ್ತು ಸ್ಥೂಲ ಅಚಿತ್ ಶಕ್ತಿ ; ಎಂದರೆ ಕ್ರಮವಾಗಿ 'ಕಿಂಚಿಜ್ಞತ್ವ' ಮತ್ತು 'ಕಿಂಚಿತ್ ಕರ್ತೃತ್ವ ಶಕ್ತಿ' ಎಂದು ಅರ್ಥ. ಎರಡನೆಯ ಶಕ್ತಿಪದಕ್ಕೆ 'ಸೂಕ್ಷ್ಮಚಿತ್‌ಶಕ್ತಿ ಮತ್ತು ಸೂಕ್ಷ್ಮ ಅಚಿತ್‌ಶಕ್ತಿ' ಎಂದರೆ ಕ್ರಮವಾಗಿ 'ಸರ್ವಜ್ಞತ್ವ' ಮತ್ತು 'ಸರ್ವಕರ್ತೃತ್ವಶಕ್ತಿ' ಎಂದು ಅರ್ಥ. ಈ ಬಗೆಯ ಎರಡು ವಿಧವಾದ ಶಕ್ತಿಗಳಿಂದ ಕೂಡಿದವರು ಜೀವ-ಶಿವರು. ಇವರಲ್ಲಿ ಜೀವನು 'ಕಿಂಚಿಜ್ಞತ್ವ' ಮತ್ತು 'ಕಿಂಚಿತ್‌ಕರ್ತೃತ್ವ' ಶಕ್ತಿ ಯುಳ್ಳವನು. ಅದರಂತೆ ಶಿವನು 'ಸರ್ವಜ್ಞತ್ವ' ಮತ್ತು 'ಸರ್ವಕರ್ತೃತ್ವ'ಶಕ್ತಿಯುಳ್ಳವನು ಎಂದಾಯಿತು. ಇವರಲ್ಲಿ ಜೀವನು ಗುರುಮುಖದಿಂದ ಶಿವದೀಕ್ಷೆ ಪಡೆದು ಅಂಗನೆನಿಸಿ ಷಟ್‌ಸ್ಥಲಾನುಸಂಧಾನದಿಂದ ತನ್ನಲ್ಲಿರುವ ಕಿಂಚಿಜ್ಞತ್ವ ಮತ್ತು ಕಿಂಚಿತ್‌ಕರ್ತೃತ್ವಗಳನ್ನು ಕಳೆದುಕೊಂಡು ಜೀವಭಾವವಳಿದು ಸರ್ವಜ್ಞತ್ವ-ಸರ್ವಕರ್ತೃತ್ವಗಳನ್ನು ಪಡೆದು ಲಿಂಗರೂಪ ಶಿವನೇ ಆಗುತ್ತಾನೆ. ಇದೇ ಲಿಂಗಾಂಗ ಸಾಮರಸ್ಯ. ಇದನ್ನೇ 'ಯಥಾನ್ಯದ್ಯಃ' ಎಂಬ ಶ್ರುತಿಯೂ "ಜಲೇ ಜಲಮಿವ ನ್ಯಸ್ತಂ" ಎಂಬ ಸ್ಮೃತಿ (ಸಿದ್ಧಾಂತ ಶಿಖಾಮಣಿ)ಯೂ ಸಮರ್ಥಿಸಿವೆ.

"ಶಕ್ತಿವಿಶಿಷ್ಟಾದ್ವೈತ" ಎಂಬ ಪದವನ್ನು ಭಾಷ್ಯಕಾರರು "ಶಕ್ತಿವಿಶೇಷವಿಶಿಷ್ಟಶಿವಾದ್ವೈತ" ಎಂದೂ, ಕ್ರಿಯಾಸಾರಕಾರರಾದ ನೀಲಕಂಠಶಿವಾಚಾರ್ಯರು "ತಸ್ಮಾಚ್ಛಕ್ತಿವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್" ಎಂದೂ, ವೀರಶೈವಾನಂದ ಚಂದ್ರಿಕೆಯಲ್ಲಿ ಮರಿತೋಂಟದಾರ್ಯರು [1]"ವೀರಶೈವಸಿದ್ಧಾಂತಸ್ಯ ಲಿಂಗಾಂಗಸಾಮರಸ್ಯಾತ್ಮಕ ಪರಿಣಾಮ್ಯುಪಾದನ ರೂಪಶಕ್ತಿವಿಶಿಷ್ಟಶಿವಾದ್ವೈತಸ್ಯ ಸಕಲ ದ್ವೈತ ವಿಲಕ್ಷಣತ್ವೇನ ಸಾಧನೀಯತಯಾ" ಎಂದು ನಿರ್ದೇಶಿಸಿದ್ದಾರೆ.

ಮತ್ತು ಶ್ರೀಕರಭಾಷ್ಯದಲ್ಲಿ– "ಏತದ್ವೈತಾದ್ವೈತಮೇವ ಕೇಚಿತ್ ವಿಶೇಷಾದ್ವೈತಮಿತಿ, ಸೇಶ್ವರಾದ್ವೈತಮಿತಿ, ಸರ್ವಶ್ರುತಿಸಾರಮತಮಿತಿ, ಪರ್ಯಾಯತ್ವೇನ ಪ್ರವದಂತಿ" ಎಂದು ದ್ವೈತಾದ್ವೈತ, ವಿಶೇಷಾದ್ವೈತ, ಸೇಶ್ವರಾದ್ವೈತ ಮತ್ತು ಸರ್ವಶ್ರುತಿಸಾರ ಮತ ಮುಂತಾದ ಪದಗಳು ಪರ್ಯಾಯವಾಚಕಗಳೆಂದು ಹೇಳಲಾಗಿದೆ.

ಇ) **ವಿಶಿಷ್ಟಾದ್ವೈತಮ್**– ವಿಶಿಷ್ಟಂ ಚ ವಿಶಿಷ್ಟಂ ಚ ವಿಶಿಷ್ಟೇ ಲಿಂಗಾಂಗೇ ; ಇಲ್ಲಿ ಮೊದಲ "ವಿಶಿಷ್ಟ" ಪದಕ್ಕೆಚಿಚ್ಛಕ್ತಿ ವಿಶಿಷ್ಟ ಪರಶಿವನೆಂದೂ, ಅವನೇ ರುದ್ರ ಮುಂತಾದ ಹೆಸರುಗಳುಳ್ಳ 'ಲಿಂಗ'ವೆಂದೂ ಎರಡನೆಯ "ವಿಶಿಷ್ಟಪದಕ್ಕೆ ಚಿತ್ತಶಕ್ತಿವಿಶಿಷ್ಟನಾದ ಶಿವಾಂಶರೂಪ ಅಂಗ ಶಬ್ದವಾಚ್ಯ ಜೀವನೆಂದೂ ಅರ್ಥ. ಈ ಬಗೆಯ ಲಿಂಗ-ಅಂಗಗಳಿಗೆ ಆಗುವ ಅದ್ವೈತ ಎಂದರೆ ಸಾಮರಸ್ಯವೇ ವಿಶಿಷ್ಟಾದ್ವೈತ.

ಈ) **ಶಿವಾದ್ವೈತ**– ಶಿವೇ ಅದ್ವೈತಂ ಶಿವಾದ್ವೈತಂ ಅಥವಾ ಶಿವಶ್ಚ ಶಿವಶ್ಚ ಶಿವೌ ; ತಯೋರದ್ವೈತಂ ಶಿವಾದ್ವೈತಮ್. ಇಲ್ಲಿಯೂ ಕೂಡ ಮೊದಲನೆಯ ಶಿವಪದಕ್ಕೆ ಸೂಕ್ಷ್ಮಚಿದ ಚಿಚ್ಛಕ್ತಿವಿಶಿಷ್ಟನಾದ ಶಿವ (ಲಿಂಗ) ಎಂದೂ ಎರಡನೆಯ ಶಿವಪದಕ್ಕೆ ಸ್ಥೂಲಚಿದಚಿಚ್ಛಕ್ತಿ

---

[1] ವೀರಶೈವಾನಂದ ಚಂದ್ರಿಕಾ ಪು. ೨೩

ವಿಶಿಷ್ಟನೂ, ಅನಾದಿ ಅವಿದ್ಯೆಯಿಂದ ಕೂಡಿದವನೂ ಆದ ಶಿವಾಂಶಜೀವನೆಂದೂ ಅಥವಾ ಈತನೇ ಶಿವದೀಕ್ಷೆಯಿಂದ ಮಲತ್ರಯ ವಿಮುಕ್ತನಾದ ಅಂಗನೆನಿಸುವನು. ಈ ಬಗೆಯ ಲಿಂಗಾಂಗರಿಗೆ ಆಗುವ ಅದ್ವೈತ ಎಂದರೆ ಸಾಮರಸ್ಯವೇ ಶಿವಾದ್ವೈತ'. ಸಿದ್ಧಾಂತಶಿಖಾಮಣಿಯಲ್ಲಿ "ಶಿವಸಿದ್ಧಾಂತಮಿತಿ"[1] "ಮದದ್ವೈತಪರಂ ಶಾಸ್ತ್ರಂ" "ಶಿವಾದ್ವೈತಪರಿಜ್ಞಾನಂ" "ಶಿವಾದ್ವೈತಪರಾನಂದಂ" ಮುಂತಾಗಿ ಪ್ರಯುಕ್ತವಾಗಿದೆ.

ಉ) **ಶಿವಯೋಗ**–ಶಿವೇ ಯೋಗಃ ಶಿವಯೋಗಃ ಎಂದರೆ ಸೂಕ್ಷ್ಮ ಚಿದಚಿಚ್ಛಕ್ತಿ ವಿಶಿಷ್ಟನಾದ ಶಿವನಲ್ಲಿ ಶೀವದೀಕ್ಷೆಯಿಂದ ನಷ್ಟಮಲನಾದ ಜೀವನಿಗೆ ಆಗುವ 'ಯೋಗ' ಎಂದರೆ 'ಸಾಮರಸ್ಯ'ವೇ ಶಿವಯೋಗ.

ನೀಲಕಂಠ ಶಿವಾಚಾರ್ಯರು ಈ ಸಿದ್ಧಾಂತವನ್ನು ವಿಶಿಷ್ಟಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ ಎಂದು ಕರೆದಿದ್ದಾರೆ.

ಆದರೆ ಶ್ರೀಕಂಠಶಿವಾಚಾರ್ಯ ಮತ್ತು ಶ್ರೀ ರಾಮಾನುಜರು ತಮ್ಮತಮ್ಮ ಮತಗಳು ವಿಶಿಷ್ಟಾದ್ವೈತ ಎಂದೇ ಹೇಳಿದ್ದಾರೆ. ಆದರೆ ಅಲ್ಲಿರುವ ವೈಶಿಷ್ಟ್ಯವು ಹಿಂದೆ ಹೇಳಿದಂತೆ ಶ್ರೀಕಂಠಮತದಲ್ಲಿ ಅಂತರ್ಗಣಿಕಾ ಭೇದರೂಪವಾಗಿಯೂ ರಾಮಾನುಜೀಯರಲ್ಲಿ ಅಪೃಥಕ್‌ಸಿದ್ಧತ್ವರೂಪವಾಗಿಯೂ ಇದೆ. ಆದರೆ ಕ್ರಿಯಾಸಾರದಲ್ಲಿ ಉಕ್ತವಾಗಿರುವ ವೈಶಿಷ್ಟ್ಯವೇ ಬೇರೆ ; ಏಕೆಂದರೆ ಶ್ರೀಕಂಠ-ರಾಮಾನುಜರ ವೈಶಿಷ್ಟ್ಯವನ್ನು ಶ್ರೀಪತಿಪಂಡಿತರು ನಿರಾಕರಿಸಿದ್ದಾರೆ.

[2]"ಏವಂ ವಿಶಿಷ್ಟಾದ್ವೈತಸ್ಯ ಅಸಂಗತತ್ವಾತ್ ವಿಶೇಷಾದ್ವೈತಮೇವ ಮುಮುಕ್ಷುಭಿರಾದರಣೀಯಮ್" (ಶ್ರೀಕರಭಾಷ್ಯ.೧-೩-೨.ಪು.೨೭೧) ಎಂದೂ ಮತ್ತೊಂದೆಡೆಯಲ್ಲಿ– "ಅತ್ರಕೇಚಿತ್" ಎಂದು ಆರಂಭಿಸಿ "ಆನಂದಮಯನಾದ ಬ್ರಹ್ಮನಲ್ಲಿ ಜೀವನಿಗೆ 'ಯೋಗಂ' ಶೇಷತ್ವ ರೂಪ ಸಂಬಂಧಂ "ಶಾಸ್ತಿ" ಶಾಸ್ತ್ರವು ಪ್ರತಿಪಾದಿಸುತ್ತದೆ. ಆದ್ದರಿಂದ ವಿಶಿಷ್ಟಾದ್ವೈತವೇ ಮುಖ್ಯ ಎಂದು ಗಳಹುತ್ತಾರೆ. ಆದರೆ ಇದು ಅವೈದಿಕವಾದ್ದರಿಂದ ಆ ದಾರಿಯು ಮುಮುಕ್ಷುಗ್ರಾಹ್ಯವಲ್ಲ ; ಏಕೆಂದರೆ "ವಿಶಿಷ್ಟಾದ್ವೈತ" ಎಂಬ ಉಕ್ತಿಯೇ ವಿರುದ್ಧವಾದದ್ದು. ವಿಶಿಷ್ಟ ಎಂಬುದನ್ನು ನಿರೂಪಿಸುವುದು ಕಷ್ಟ ; ಮತ್ತು ಅದು ಮಿಥ್ಯೆಯೂ ಕೂಡ. ವಿಶಿಷ್ಟವೆಂದರೆ ವಿಶೇಷಣ ವಿಶೇಷ್ಯ ಸಂಬಂಧವುಳ್ಳದ್ದು ....ಆದ್ದರಿಂದ[3] ವಿಶಿಷ್ಟಸ್ಯ ವಿಶೇಷಣ-ವಿಶೇಷ್ಯ ಸಂಬಂಧೇಭ್ಯಃ ಸತ್ವಾಽಸತ್ವಾಭ್ಯಾಂ ದುರ್ನಿರೂಪ್ಯತ್ವೇನ ಮಿಥ್ಯಾತ್ವಾತ್ ಶಿವಾದ್ವೈತಮೇವ ಗ್ರಾಹ್ಯಂ"ಎಂದು ಶ್ರೀಕರಭಾಷ್ಯಕಾರರು ಶ್ರೀಕಂಠರ.ವಿಶಿಷ್ಟಾದ್ವೈತವನ್ನು ನಿರಾಕರಿಸಿ, [4]"ಶಕ್ತಿವಿಶಿಷ್ಟ ಶಿವಾದ್ವೈತಹಾನೇಃ" ಎಂದು ಶಕ್ತಿ ವಿಶಿಷ್ಟಾದ್ವೈತವನ್ನು ಸಮರ್ಥಿಸಿದ್ದಾರೆ.

---

[1] ಸಿ. ಶಿಖಾಮಣಿ ೧-೧೭, ೩-೭೦, ೪-೫, ೬-೬೧.

[2] ಶ್ರೀಕರಭಾಷ್ಯ ೧. ೧. ೨೧. ಪು. ೧೩೮-೧೪೯.

[3] ಶ್ರೀಕರಭಾಷ್ಯ ೧. ೧. ೧೧. ಪು. ೧೩೮-೧೪೯.

[4] ಶ್ರೀಕರಭಾಷ್ಯ ೧. ೧. ೪. ಪು. ೮೭.

## ಶಿವನಿಗೆ ಶಕ್ತಿವೈಶಿಷ್ಟ್ಯ ಪ್ರತಿಪಾದನ

ಈ ಸಿದ್ಧಾಂತದಲ್ಲಿ ಬ್ರಹ್ಮವು ಅದ್ವೈತದಲ್ಲಿ ಹೇಳಿರುವಂತೆ ಕೇವಲ 'ಶುದ್ಧ'ವಲ್ಲ; ಇಲ್ಲಿ ಜೀವ ಮತ್ತು ಶಿವರು ವಿಶಿಷ್ಟರು. ಆ ವೈಶಿಷ್ಟ್ಯವು ವಿಶೇಷಣ ವಿಶಿಷ್ಟರೂಪ. ಕ್ರಿಯಾಸಾರದಲ್ಲಿ–

[1]"ಯಥಾ ಘಟ ಇತಿ ಜ್ಞಾನೇ ಘಟತ್ವಂ ಸ್ಯಾತ್ ವಿಶೇಷಣಮ್ ।
ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತಿರಿತ್ಯಭಿಧೀಯತಾಮ್ ॥

ನ ಜೀವಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿ ವ್ಯಾಚಕ್ಷತೇ ಶಕ್ತಿವಿಶಿಷ್ಟಂ ವಿಷಯಸ್ತ್ವಿತಿ ॥

ತಸ್ಮಾಚ್ಛಕ್ತಿ ವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್" ಎಂದು ಹೇಳಿದೆ.

ವೀರಶೈವಸಿದ್ಧಾಂತಕ್ಕೆ ಶಕ್ತಿವೈಶಿಷ್ಟ್ಯವು ಅಸಾಧಾರಣ ಲಕ್ಷಣವೆನಿಸಿದೆ. "ಶಕ್ತಿಯು ಪರ ಶಿವಬ್ರಹ್ಮದಲ್ಲಿ ಅವಿನಾಭಾವ ಸಂಬಂಧದಿಂದಿದೆ; ಹಾಗೂ ಅದು ನಿತ್ಯ ಎಂಬುದು ಆರಂಭಣಾಧಿಕರಣ (ಪು. ೩೯೨)ದಲ್ಲಿ ಚನ್ನಾಗಿ ಪ್ರತಿಪಾದಿತವಾಗಿದೆ. ಶ್ರುತಿ ಮತ್ತು ಆಗಮುಗಳಲ್ಲಿ ಈ ಶಕ್ತಿಯ ಸ್ವರೂಪವು ಬಹಳವಾಗಿ ವಿಸ್ತರಿಸಲ್ಪಟ್ಟಿದೆ.

ಈ ದಿಸೆಯಲ್ಲಿ ಋಗ್ವೇದೀಯ "**ನಾಸದೀಯ ಸೂಕ್ತ**" ವು ವಿಶೇಷ ಬೆಳಕು ಚೆಲ್ಲಿದೆ. ಅಲ್ಲಿ "ಸೃಷ್ಟಿಗೆ ಪೂರ್ವದಲ್ಲಿ ಸದಸತ್ತುಗಳಾಗಲಿ, ಆಕಾಶ-ಅಂತರಿಕ್ಷಗಳಾಗಲಿ, ಹಗಲು-ರಾತ್ರಿಗಳಾಗಲಿ, ಅಮೃತವಾಗಲಿ, ಮೃತ್ಯುವಾಗಲಿ ಇರಲಿಲ್ಲ; ಆದರೆ ಆಗ "**ಅನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ**" ಎಂದರೆ 'ಅವಾತಂ' ವಾಯುವಿಲ್ಲದಿದ್ದರೂ 'ಅನೀತ್' ಚೈತನ್ಯದ ಸ್ಫುರಣೆಯಿದ್ದಿತು. ಎಂದರೆ ಸೃಷ್ಟಿಗೆ ಮೊದಲು ವಾಯುವೇ ಇರಲಿಲ್ಲ; ಹಾಗಾದರೆ ಆ ಸ್ಫುರಣೆ ಯಾವುದರಿಂದ? ಎಂದರೆ ಅದು 'ಸ್ವಧಯಾ' ಸ್ವಶಕ್ತಿಯಿಂದ ಮಾತ್ರ ಸ್ಫುರಿಸುತ್ತಿತ್ತು" ಎಂದು ಅಲ್ಲಿ ಶಕ್ತಿವೈಶಿಷ್ಟ್ಯವನ್ನು ಸೂಚಿಸಲಾಗಿದೆ.

[2] ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ।
ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ ॥
[3] ತೇ ಧ್ಯಾನಯೋಗಾನುಗತಾ ಅಪಶ್ಯನ್ ।
ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್ ॥

ಎಂದರೆ ಇಲ್ಲಿ 'ಸ್ವಾಭಾವಿಕೀ' 'ದೇವಾತ್ಮಶಕ್ತಿಂ' ಮುಂತಾದ ಪದಗಳ ಸ್ವಾರಸ್ಯದಿಂದ ಶಕ್ತಿಯು ಪರ ಶಿವಬ್ರಹ್ಮದಲ್ಲಿ ಸ್ವಭಾವಸಿದ್ಧವಾದುದು ಎಂದು ತಿಳಿದುಬರುತ್ತದೆ. ಆ ಶಕ್ತಿಯು ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಮುಂತಾದ ಪ್ರಭೇದಗಳಿಂದ ಅನೇಕ ಬಗೆಯಾಗಿದೆ.

---

[1] ಕ್ರಿಯಾಸಾರ. ೧-೯೩-೯೬.

[2] ಶ್ವೇತಾ. ೬. ೭.

[3] ಶ್ವೇ. ೧. ೨

[1] ಯದಾ ತಮಸ್ತನ್ನದಿವಾ ನ ರಾತ್ರಿಃ ನ ಸನ್ನ ಚಾ ಸಚ್ಛಿವ ಏವ ಕೇವಲಃ |
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ ||

ಇಲ್ಲಿ 'ಪುರಾಣೀ' ಅನಾದಿಸಂಸಿದ್ಧಾ ಪ್ರಜ್ಞಾ-ಚಿಚ್ಛಕ್ತಿಯು ಪರಶಿವಬ್ರಹ್ಮದ ದೆಸೆಯಿಂದ ಹೊರಹೊಮ್ಮಿತು ಎಂದರೆ ಕ್ರಿಯಾಶಕ್ತಿ ಮುಂತಾಗಿ ಪ್ರಕಟವಾಯಿತೆಂದು ಅರ್ಥ.

[2] "ಮಾಯಾಂ ತು ಪ್ರಕೃತಿಂ ವಿಂದ್ಯಾತ್ ಮಾಯಿನಂ ತು ಮಹೇಶ್ವರಂ"

'ಮಾಯೆ' ಎಂದರೆ 'ಪ್ರಕೃತಿ', ಮಾಯೆಯಿಂದ ಕೂಡಿದವನು ಮಹೇಶ್ವರ ಎಂಬುದರಿಂದ ಇಲ್ಲಿನ ಮಾಯಾ ಶಬ್ದಕ್ಕೆ ಅದ್ವೈತಿಗಳು ಹೇಳುವ "ಮೂಲಾವಿದ್ಯಾ" ರೂಪವಾದ ಮಾಯೆಯಲ್ಲ ; ಬದಲಾಗಿ ಅದು ಶಿವನಲ್ಲಿ ಅವಿನಾಭಾವಸಂಬಂಧದಿಂದಿರುವ '**ವಿಮರ್ಶಶಕ್ತಿ**' ಎಂದು ತಿಳಿಯಬೇಕು. ಏಕೆಂದರೆ ಸಿದ್ಧಾಂತಾಗಮದಲ್ಲಿ–

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ |
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ||

ಎಂದರೆ ಮಂ–ಶಿವ ; ಆ ಶಿವನಲ್ಲಿ "ಆಯತಿ" ಸ್ವಭಾವವಾಗಿ ಅಡಗಿದೆ ಎಂಬುದರಿಂದ 'ಮಾಯೆ' ಎನಿಸಿದೆ.

ಶ್ರೀಕರಭಾಷ್ಯದಲ್ಲಿಯೂ ಕೂಡ–

[3] "ಆಖುಸ್ತೇ ರುದ್ರ ಪಶುಸ್ತಂ ಜುಷ ಸ್ವೈಷತೇ ರುದ್ರಭಾಗಃ |
ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ ||

ಎಂದರೆ ಇಲ್ಲಿರುವ 'ಸ್ವಸ್ರಾ' 'ಅಂಬಿಕಯಾ' ಎಂಬ ಪದಗಳನ್ನು ಪರ್ಯಾಲೋಚಿಸಿದಲ್ಲಿ ಪರಮಾತ್ಮನಲ್ಲಿ ಶಕ್ತಿಯು ಸ್ವಾಭಾವಿಕವೆಂದು ಸಿದ್ಧವಾಗುತ್ತದೆ. ರುದ್ರಾಧ್ಯಾಯದಲ್ಲಿಯೂ ಕೂಡ

[4] "ನಮಃ ಸೋಮಾಯ ಚ ರುದ್ರಾಯ ಚ" ಎಂಬಲ್ಲಿ ಪರಮೇಶ್ವರನು 'ಉಮಯಾ ಸಹಿತಃ ಸೋಮಃ' ಎಂಬ ವ್ಯುತ್ಪತ್ತಿಯಿಂದ "ಉಮಾರೂಪ ಶಕ್ತಿವಿಶಿಷ್ಟ" ಎಂದು ತಿಳಿದು ಬರುತ್ತದೆ. ಇದೇ ಅರ್ಥವು ಕೈವಲ್ಯೋಪನಿಷತ್ತಿನಲ್ಲಿ ಹೀಗೆ ಸಮರ್ಥಿಸಲ್ಪಟ್ಟಿದೆ– "ಉಮಾಸಹಾಯಂ ಪರಮೇಶ್ವರಂ ಪ್ರಭುಂ" ಎಂದೂ, ರೇಣುಕ ಭಗವತ್ಪಾದಾಚಾರ್ಯರ-ಸಿದ್ಧಾಂತ ಶಿಖಾಮಣಿಯಲ್ಲಿ–

[5] ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ |
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ||

ತದಿಚ್ಛಯಾಽಭವತ್ ಸಾಕ್ಷಾತ್ ತತ್ಸ್ವರೂಪಾನುಕಾರಿಣೀ |
ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ||

---

[1] ಶ್ವೇತಾ ೧–೧೮.
[2] ಶ್ವೇತಾ ೪–೧೦.
[3] ಯಜು. ೧-೮-೬.
[4] ಯಜು. ೪.೫-೮.
[5] ಸಿ. ಶಿ. ಮಣಿ. ಪ. ೨೦,

ಯಸ್ಮಿನ್ ಪ್ರತಿಷ್ಠಿತಂ ಬ್ರಹ್ಮ ತದಿದಂ ವಿಶ್ವಭಾಜನಮ್ ॥
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥

ಸಚ್ಚಿದಾನಂದಾತ್ಮಕವಾದ ಈ ಪರಶಿವ ಶಕ್ತಿಯು ಸಮಸ್ತಲೋಕ ನಿರ್ಮಾಣಕ್ಕಾಗಿ ಪರಶಿವಬ್ರಹ್ಮದಲ್ಲಿ ಅಡಗಿದೆ. "ತದಿಚ್ಛಯಾऽಭವತ್ ಸಾಕ್ಷಾತ್" ಎಂಬುದರಿಂದ ಶಕ್ತಿಯು ಪರಶಿವನಿಗೆ ಅಭಿನ್ನವಾದು ದೆಂದೂ, ವಿಶ್ವರಚನೆಯಲ್ಲಿ ಉಪಾದಾನಕಾರಣವೆಂದೂ ಸ್ಪಷ್ಟವಾಗುತ್ತದೆ. ಮಹಾಕವಿ ಕಾಳಿದಾಸನೂ ಕೂಡ ಶಿವ-ಶಕ್ತಿಗಳಿಗೆ ಇರುವ ಅವಿನಾಭಾವ ಸಂಬಂಧವನ್ನು

[1] ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥

ಎಂಬಲ್ಲಿ ಸೂಚಿಸಿದ್ದಾನೆ.

**ಶಿವ-ಶಕ್ತಿಗಳಿಗೆ ಭೇದಾಭೇದ ಪ್ರತಿಪಾದನ**

ಏಷಾ ಶಕ್ತಿಃ ಶಿವಾಹ್ಯೇತಚ್ಛಕ್ತಿ ಮಾನುಚ್ಯತೇ ಶಿವಃ ।
ಶಕ್ತಿ-ಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ ॥
ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವ ಚಿಂತಕಾಃ ॥

ಹಿಂದೆ ಹೇಳಿದ ಕೂರ್ಮಪುರಾಣವಚನದಂತೆ ಶಿವ-ಶಕ್ತಿಯರಿಗೆ ಭೇದಾಭೇದವು ಪಾರ ಮಾರ್ಥಿಕವಾಗಿಯೇ ಸಿದ್ಧಿಸುತ್ತದೆ. ಮೃತ್ಯುಂಜಯಭಟ್ಟಾರಕದಲ್ಲಿಯೂ ಕೂಡ–

ಸಾ ಮಮೇಚ್ಛಾ ಪರಾ ಶಕ್ತಿರವಿಯುಕ್ತಾ ಸ್ವಭಾವಜಾ ।
ವಹ್ನೇರೂಷ್ಮೇವ ವಿಜ್ಞೇಯಾ ರಶ್ಮಿರೂಪಾ ರವೇರಿವ ॥
ಸರ್ವಸ್ಯ ಜಗತೋ ವಾಪಿ ಸಾ ಶಕ್ತಿಃ ಕಾರಣಾತ್ಮಿಕಾ ।

ಆ ಪರಾಶಕ್ತಿಯು ನನ್ನ ಇಚ್ಛಾಶಕ್ತಿಯೇ. ಬೆಂಕಿಯಲ್ಲಿನ ಹಬೆಯಂತೆ ರವಿಯ ಕಿರಣದಂತೆ ಅದು ನನ್ನಲ್ಲಿ ಸ್ವಾಭಾವಿಕ; ಆ ಶಕ್ತಿಯೇ ಜಗತ್ತಿಗೆ ಕಾರಣವಾದದ್ದು.

**ಜಗತ್ತು ಶಕ್ತಿವಿಶಿಷ್ಟ**

ಈ ಸಿದ್ಧಾಂತದಲ್ಲಿ ಪರಶಿವಬ್ರಹ್ಮವು ನಿರ್ವಿಶೇಷವಲ್ಲ; ಸವಿಶೇಷ. ಆ ವಿಶೇಷವು ಶಕ್ತಿಯೆ. ಶಕ್ತಿಯ ವೈಶಿಷ್ಟ್ಯವಿರುವುದರಿಂದಲೇ ಪರಶಿವಬ್ರಹ್ಮವು ಚರಾಚರಾತ್ಮಕವಾದ ಜಗತ್ತನ್ನು ಸೃಜಿಸಿದ್ದು. ಶಕ್ತಿವಿಶಿಷ್ಟ ಪರಶಿವಬ್ರಹ್ಮದಿಂದ ಜನಿಸಿದ ಜಗತ್ತೂ ಕೂಡ ಶಕ್ತಿವಿಶಿಷ್ಟವೇ ಆಗಿದೆ. "ಕಾರಣ ಗುಣ ಗಳು ಕಾರ್ಯದಲ್ಲಿಯೂ ಇರುವುದು ಸರಿಯಷ್ಟೆ!. ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳೂ ಒಂದೊಂದು ಬಗೆಯ ಶಕ್ತಿಯಿಂದ ಕೂಡಿಯೇ ಇವೆ.

ಉದಾಹರಣೆಗಾಗಿ– ಪೃಥಿವಿಯಲ್ಲಿ ಧಾರಣಶಕ್ತಿ, ಜಲದಲ್ಲಿ ಆಪ್ಯಾಯನ ಶಕ್ತಿ, ತೇಜಸ್ಸಿನಲ್ಲಿ ಜ್ವಲನಶಕ್ತಿ, ವಾಯುವಿನಲ್ಲಿ ಸ್ಪಂದನಶಕ್ತಿ, ಆಕಾಶದಲ್ಲಿ ವ್ಯಾಪನಶಕ್ತಿ, ಆತ್ಮನಲ್ಲಿ ಬುದ್ಧಿಶಕ್ತಿ

---

[1] ರಘುವಂಶ ೧-೧

ಮುಂತಾಗಿ. ಇದರಂತೆ ವೃಕ್ಷಾದಿಗಳಲ್ಲಿ ಜಲಾಕರ್ಷಣಶಕ್ತಿ, ಅಯಸ್ಕಾಂತದಲ್ಲಿ ಸೂಚಿ ಮೊದಲಾದುವನ್ನು ಆಕರ್ಷಿಸುವ ಶಕ್ತಿ ಇತ್ಯಾದಿ. ಇವನ್ನೇ ಶ್ರೀಕರಭಾಷ್ಯ (ಪು. ೨೪೮, ೨೮೧, ೨೯೩, ೩೪೮)ದಲ್ಲಿ ಸಮರ್ಥಿಸಲಾಗಿದೆ.

## ಬ್ರಹ್ಮಲಕ್ಷಣ

"ವೇದಾಗಮೋಭಯವೇದಾಂತಪ್ರತಿಪಾದಿತ ಸ್ವಾಭಾವಿಕಾನಂತಶಕ್ತಿವಿಶಿಷ್ಟ ಜಗದುಭಯಕಾರಣ ಪಶು-ಪಾಶನಿಯಾಮಕ ಸಕಲ-ನಿಷ್ಕಲ-ಸ್ಥೂಲ-ಸೂಕ್ಷ್ಮ-ಚಿದಚಿತ್ ಪ್ರಕಾಶಕ ಸತ್ಯಜ್ಞಾನಾನಂತ ಕಲ್ಯಾಣಗುಣ ವಿಭವಾಶ್ರಯತ್ವಂ ಬ್ರಹ್ಮತ್ವಂ" ಎಂದು[1] ಬ್ರಹ್ಮಲಕ್ಷಣವನ್ನು ನಿರ್ವಚಿಸಲಾಗಿದೆ.

ಶಿವಶರಣರು ಸೃಷ್ಟಿಪೂರ್ವದಲ್ಲಿನ ಬ್ರಹ್ಮಸ್ವರೂಪವನ್ನು **ಸಹಜ, ಬಯಲು, ಸರ್ವಶೂನ್ಯ, ನಿಶ್ಶೂನ್ಯ, ನಿರಾಲಂಬ** ಮುಂತಾಗಿ ವಿಶ್ಲೇಷಿಸಿದ್ದಾರೆ. ಆ ಸರ್ವಶೂನ್ಯವು ಅಸ್ತಿತ್ವವಿಲ್ಲದ ಶೂನ್ಯವಲ್ಲ; ಅದು ಬೌದ್ಧರ ಶೂನ್ಯ (VOID) ವಲ್ಲ ; ಅದು ಎಲ್ಲವನ್ನೂ ಒಳಗೊಂಡ ಸರ್ವಾಸ್ತಿವಾಚಕ. ಆದ್ದರಿಂದಲೇ ಅದು "ಪರಿಪೂರ್ಣ"ವೆನಿಸಿದೆ.

## ಬ್ರಹ್ಮ

"ಸಚ್ಚಿದಾನಂದಂ ಬ್ರಹ್ಮ" ಎಂಬ ಶ್ರುತಿವಾಕ್ಯವು ಸರ್ವಶ್ರುತ. ಇಲ್ಲಿ ಆ ಬ್ರಹ್ಮವು "ಅಸ್ಮಿ-ಪ್ರಕಾಶೇ-ನಂದಾಮಿ" ಇದ್ದೇನೆ, ಬೆಳಗುತ್ತಿದ್ದೇನೆ ಮತ್ತು ಆನಂದಪಡುತ್ತಿದ್ದೇನೆ ಎಂಬ ಅನುಭವವುಳ್ಳದ್ದು. ಈ ಅನುಭವವೇ ಬ್ರಹ್ಮದ ವಿಮರ್ಶಶಕ್ತಿ. ಅನುಭವವಿಲ್ಲದಲ್ಲಿ ಬ್ರಹ್ಮದ ಪ್ರಕಾಶವು ಸ್ಫಟಿಕಾದಿಗಳ ಪ್ರಕಾಶದಂತೆ ಜಡವಾದೀತು ! ಅಂಧನಿಗೆ ಅವನ ಸೌಂದರ್ಯದ ಜ್ಞಾನವಿಲ್ಲದ ಮೇಲೆ ಆ ಸೌಂದರ್ಯವು ವ್ಯರ್ಥವಲ್ಲವೆ ? ಇದರಂತೆ ಬ್ರಹ್ಮಕ್ಕೂ ಕೂಡ ಸ್ವಸ್ವರೂಪವಾದ ಸಚ್ಚಿದಾನಂದ ಪರಿಜ್ಞಾನವಿಲ್ಲದಲ್ಲಿ ಅದೂ ವ್ಯರ್ಥವೇ ಆಗಬೇಕಾಗುತ್ತದೆ. ಆದ್ದರಿಂದ "ಸಚ್ಚಿದಾನಂದಸ್ವರೂಪ" ಎಂದರೆ ಸಚ್ಚಿದಾನಂದಾನುಭವರೂಪಶಕ್ತಿವಿಶಿಷ್ಟವೇ ! ಆದ್ದರಿಂದ ಬ್ರಹ್ಮವು ಶಕ್ತಿವಿಶಿಷ್ಟವೆಂದು ಸಿದ್ಧವಾಯಿತು.

ಬ್ರಹ್ಮದಲ್ಲಿರುವ ವಿಮರ್ಶಶಕ್ತಿಯು ಸೂಕ್ಷ್ಮ ಚಿದಚಿದಾತ್ಮಕವೆಂದು ಹಿಂದೆಯೇ ಹೇಳಲಾಯಿತು. ಈ ಬಗೆಯ ಸರ್ವಜ್ಞತ್ವ (ಸೂಕ್ಷ್ಮ ಚಿತ್) ಸರ್ವಕರ್ತೃತ್ವ (ಸೂಕ್ಷ್ಮ ಅಚಿತ್) ರೂಪವಾದ ಎರಡು ಬಗೆಯ ಶಕ್ತಿಗಳಿಗೆ ಆಶ್ರಯವಾದದ್ದು ಬ್ರಹ್ಮ. ಹೀಗೆ ಇಚ್ಛಾ (ವಿಮರ್ಶ) ಶಕ್ತಿ ಅಥವಾ ಸೂಕ್ಷ್ಮ ಚಿದಚಿದಾತ್ಮಕವಾದ ಶಕ್ತಿವಿಶಿಷ್ಟವಾದ ಬ್ರಹ್ಮವೇ "ಅಥಾತೋ ಬ್ರಹ್ಮಜಿಜ್ಞಾಸಾ" "ಚೈತನ್ಯಮಾತ್ಮಾ" ಮುಂತಾದ "ಬ್ರಹ್ಮಸೂತ್ರ" "ಶಿವಸೂತ್ರ"ಗಳಿಂದ ಪ್ರತಿಪಾದ್ಯವಾಗಿದೆ.

ಈ ವಿಮರ್ಶಾಶಕ್ತಿಯಲ್ಲಿ ಮಯೂರಾಂಡರಸನ್ಯಾಯದಂತೆ ಸಕಲ ಚರಾಚರಾತ್ಮಕವಾದ ಜಗತ್ತು ಅಂತರ್ಗತವಾಗಿದೆ. ಈ ವಿಮರ್ಶಶಕ್ತಿಯು ಸ್ವವಿಭಾಗಪರಾಮರ್ಶದೆಶೆಯಲ್ಲಿ ಸತ್ವರಜಸ್ತಮೋ

---

[1] ಶ್ರೀಕರಭಾಷ್ಯ I ಪು. ೭.

ಗುಣಾತ್ಮಕವಾಗಿರುತ್ತದೆ. ಉತ್ತಮ ಕರ್ತೃತ್ವವಿಲ್ಲದ ಆ ಶಕ್ತಿಯ ಜ್ಞಾನಾಂಶದಲ್ಲಿ ಸತ್ವಗುಣಾತ್ಮಕವಾದ ವಿದ್ಯಾಶಕ್ತಿಯು ಉದಿಸುತ್ತದೆ. ಉತ್ತಮ ಜ್ಞಾತೃತ್ವವಿಲ್ಲದ ಕ್ರಿಯಾಂಶದಲ್ಲಿ ಕಿಂಚಿತ್ ಸತ್ವ-ತಮೋಗುಣಮಿಶ್ರಿತ ರಜೋಗುಣಶಕ್ತಿಯು ಉದಿಸುತ್ತದೆ. ಜ್ಞಾನ-ಕ್ರಿಯೆಗಳಿಗೆ ಸ್ವಾಭಾವಿಕವಾಗಿಯೇ ಐಕ್ಯವುಂಟು ; ಆದರೂ ಸೃಷ್ಟಿದೆಶೆಯಲ್ಲಿ ಜ್ಞಾನ-ಕ್ರಿಯಾಶಕ್ತಿಗಳು ಪರಸ್ಪರ ವಿಭಾಗವನ್ನು ಪಡೆಯುತ್ತವೆ. ಆದ್ದರಿಂದ "ಜ್ಞಾನಂ ಕ್ರಿಯಾ ನ ಭವತಿ ಕ್ರಿಯಾ ಜ್ಞಾನಂ ನ ಭವತಿ" ಎಂಬ ನ್ಯಾಯದಂತೆ ಭೇದಬುದ್ಧಿರೂಪವಾದ ತಮೋಗುಣಶಕ್ತಿಯು ಉದಿಸುತ್ತದೆ.

ಈ ತಮೋಗುಣಶಕ್ತಿಯೇ ಜಡಮಾಯೆ. ಹೇಗೆ ಸೂರ್ಯರಶ್ಮಿಯು ಸೂರ್ಯಕಾಂತಶಿಲೆಯ ಸಂಪರ್ಕದಿಂದ ಪ್ರತಿಸ್ಫುರಣಗತಿಯಿಂದ ಅಗ್ನಿಕಣವಾಗಿ ಅರಳೆಯನ್ನು ಹೊಕ್ಕು ಅಗ್ನಿಯ ರೂಪು ತಳೆಯುತ್ತದೆಯೋ, ಅದರಂತೆ ಪರಶಿವಬ್ರಹ್ಮದ ಈ ವಿಮರ್ಶಶಕ್ತಿಯೂ ಕೂಡ ಪ್ರತಿಸ್ಫುರಣಗತಿಯಿಂದ ಜಡಮಾಯಾಶಕ್ತಿಯನ್ನು ಪ್ರವೇಶಿಸಿ, ಸುಖ-ದುಃಖ-ಮೋಹ ಜನಕವೆನಿಸಿ, ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿರೂಪು ತಳೆಯುತ್ತದೆ. ಇದೇ ಪ್ರಕೃತಿಯನ್ನೇ ಚಿತ್ತವೆನ್ನುವರು. ಈ ಚಿತ್ತಶಕ್ತಿ ವಿಶಿಷ್ಟವಾದ ಶಿವಾಂಶವೇ ಜೀವ.

### ಜೀವಲಕ್ಷಣ

"ಅನಾದಿಸ್ವಾಭಾವಿಕ ಮಾಯಾಪಾಶಬದ್ಧಘೋರಾಪಾರನಿಸ್ಸಾರ ಸಂಸಾರವ್ಯಾಪಾರ ತಾಪತ್ರಯಾನಲದಂದಹ್ಯಮಾನ ನಾನಾ ಶರೀರ ಪ್ರವೇಶ ನಿರ್ಗಮನ ವರ್ಣಾಶ್ರಮಾಭಿಮಾನವಿಶಿಷ್ಟ-ದಂದಹ್ಯಮಾನ-ಕಾಮಕ್ರೋಧಾದ್ಯನುಸ್ಯೂತ-ಸುಖದುಃಖಾಶ್ರಯತ್ವಂ ಜೀವತ್ವಂ" [1]

ಶಿವಶರಣರು ಜೀವಸ್ವರೂಪವನ್ನು ಕುರಿತು– "ಅಖಂಡ ಜ್ಯೋತಿರ್ಮಯವಾದ ಮಹಾಲಿಂಗವು ತನ್ನ ಸ್ವಲೀಲಾ ಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಪೂಜಿಸಿಕೊಳ್ಳುವ ಒಂದು ಲೀಲಾವಿಲಾಸದಿಂದ ತನ್ನ ಅಖಂಡ ಚಿಚ್ಛಕ್ತಿಯ ಸಹಸ್ರಾಂಶದೊಳಗೊಂದಂಶವನ್ನು ಬೇರ್ಪಡಿಸಿತು. ಅದೇ ಜೀವಾತ್ಮವಾಯಿತು ಎನ್ನುತ್ತಾರೆ.

### ಜೀವ

ಈ ಜೀವನೂ ಸ್ಥೂಲ ಚಿದಚಿದಾತ್ಮಕಶಕ್ತಿವಿಶಿಷ್ಟ. ಜೀವನ ಸ್ಥೂಲ ಚಿಚ್ಛಕ್ತಿಯು ಕಿಂಚಿಜ್ಞತ್ವರೂಪ. ಸ್ಥೂಲ ಅಚಿತ್‌ಶಕ್ತಿಯು ಕಿಂಚಿತ್ ಕರ್ತೃರೂಪ. ಈ ಬಗೆಯ ಎರಡು ವಿಧ ಶಕ್ತಿಗಳಿಗೆ ಆಶ್ರಯವಾದ ಇಚ್ಛಾಶಕ್ತಿಯಿಂದ ವಿಶಿಷ್ಟನಾದವನೇ ಜೀವ.

ಈ ಸಿದ್ಧಾಂತದಲ್ಲಿ ಜೀವನು ಶಿವಾಂಶವೆಂಬುದು ನಿಶ್ಚಿತವಾಗಿದೆ. ರೇಣುಕಭಗವತ್ಪಾದರು–

[2] "ಅನಾದ್ಯವಿದ್ಯಾಸಂಬಂಧಾತ್ ತದಂಶೋ ಜೀವನಾಮಕಃ ।"

---

[1] (ಶ್ರೀಕರಭಾಷ್ಯ I ಪು. ೭)

[2] ಸಿ. ಶಿ. ೫.

ಎಂದರೆ "ಅನಾದಿ ಅವಿದ್ಯಾಸಂಬಂಧದಿಂದ ಶಿವಾಂಶವೇ ಜೀವನೆನಿಸುವುದು" ಎಂದಿದ್ದಾರೆ. ಬಾದರಾಯಣರ ಅಂಶೋ ನಾನಾ ವ್ಯಪದೇಶಾತ್[1] ಎಂಬ ಸೂತ್ರಭಾಷ್ಯದಲ್ಲಿ ಶ್ರೀಪತಿಪಂಡಿತಭಗವತ್ಪಾದರು ಜೀವನು ಶಿವಾಂಶನೆಂಬುದು ಸಕಾರಣವಾಗಿ ಸಮರ್ಥಿಸಿದ್ದಾರೆ. ಮುಂಡಕ ಶ್ರುತಿಯಲ್ಲಿ–

[2]"ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಸ್ತಥಾಕ್ಷರಾದ್ವಿವಿಧಾಃ ಸೋಮ್ಯಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ" ಎಂದೂ ಶ್ರೀಕರಭಾಷ್ಯದಲ್ಲಿ

[3]"ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ।
ಜೀವೋ ಭಾಗಸ್ಸವಿಜ್ಞೇಯೋ ಹೃದಯೇ ಸರ್ವದೇಹಿನಾಂ ॥"

ಎಂದೂ ಹೇಳಿದೆ.

"ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" ಮುಂತಾದ ಶ್ರುತಿಗಳಲ್ಲಿ ಜೀವನಿಗೆ ಅಣುತ್ವವು ನಿರ್ದಿಷ್ಟವಾಗಿದೆ. ಪ್ರಜ್ವಲಿಸುವ ಬೆಂಕಿಯಿಂದ ಅಗ್ನಿಯ ಅಂಶರೂಪವಾದ ಕಣಗಳು ಸಿಡಿಯುವಂತೆ ಪರಶಿವಬ್ರಹ್ಮದ ದೆಶೆಯಿಂದ ತದಂಶರೂಪರಾದ ಅನಂತ ಜೀವರು ಅವರವರ ಅನಾದಿ ಪ್ರಾರಬ್ಧಕರ್ಮವಶದಿಂದ ಆವಿರ್ಭವಿಸುತ್ತಾರೆ. ಮತ್ತೆ ಅವರು ಅಲ್ಲಿಯೇ ಅಡಗುತ್ತಾರೆ. ಸಂಸಾರವು ಅನಾದಿಯಾದ್ದರಿಂದ ಜೀವನೂ ಅನಾದಿ.

**ಶಿವ-ಜೀವರಿಗೆ ಭೇದಾಭೇದಸಮರ್ಥನ**

ಅನಾದ್ಯಂತಮಜಂ ಲಿಂಗಂ ತತ್ಪರಂ ಪರಮಂ ಪ್ರತಿ ।
ಯದ್ಗಚ್ಛತಿ ಮಹಾಭಕ್ತ್ಯಾ ತದಂಗಮಿತಿ ನಿಶ್ಚಿತಮ್ ॥
ಅಂ ಭವೇತ್ ಪರಮಂ ಬ್ರಹ್ಮ ತದ್ಗತಂ ತತ್ಪರಾಯಣಮ್ ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವವಿಶಾರದಾಃ ॥

(– ಅನುಭವಸೂತ್ರ ಅ. ೨)

ಈ ಸಿದ್ಧಾಂತದಲ್ಲಿ ಶಿವ-ಶಕ್ತಿಗಳಿಗೆ ಮತ್ತು ಶಿವ-ಜೀವರಿಗೆ ಭೇದಾಭೇದವು ಅಂಗೀಕೃತವಾಗಿದೆ ಎಂಬುದು ಕೂರ್ಮಪುರಾಣದ ಈ ಕೆಳಕಂಡ ಉಕ್ತಿಯಿಂದ ಸ್ಪಷ್ಟವಾಗುತ್ತದೆ.

ಏಷಾ ಶಕ್ತಿಶ್ಶಿವಸ್ಯೈತಚ್ಛಕ್ತಿಮಾನುಚ್ಯತೇ ಶಿವಃ ।
ಶಕ್ತಿ ಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ ॥
ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವಚಿಂತಕಾಃ ।

ಅಲ್ಲದೆ ಶಿವ-ಜೀವರಿಗಿರುವ ಭೇದಾಭೇದವು ಪಾರಮಾರ್ಥಿಕ. ಹೇಗೆಂದರೆ ಬೆಂಕಿಯಿಂದ ಸಿಡಿದ ಕಿಡಿಗಳಿಗೂ ಮತ್ತು ಬೆಂಕಿಗೂ ಕೇವಲ ಭೇದವಾಗಲಿ, ಕೇವಲ ಅಭೇದವಾಗಲಿ ಹೇಳಲಾಗುವುದಿಲ್ಲ;

---

[1] ಬ್ರ೦. ಸೂ. ೨-೩. ೪೦

[2] ಮುಂಡಕ ೨. ೧. ೧

[3] ಶ್ರೀಕರಭಾಷ್ಯ ಪು. ೨೯೦

ಅದಕ್ಕೆ ಬದಲಾಗಿ ಭೇದಾಭೇದವನ್ನೇ ಹೇಳಬೇಕು ; ಅದರಂತೆ ಶಿವನಿಂದ ಆವಿರ್ಭವಿಸಿದ ಶಿವಾಂಶರೂಪರೂ ಹಾಗೂ ಅಂಗಶಬ್ದವಾಚ್ಯರೂ ಆದ ಜೀವರಿಗೆ ಮತ್ತು ಲಿಂಗಶಬ್ದವಾಚ್ಯನಾದ ಶಿವನಿಗೆ ಕೇವಲ ಭೇದವನ್ನಾಗಲಿ ; ಕೇವಲ ಅಭೇದವನ್ನಾಗಲಿ ಹೇಳಲು ಸಾಧ್ಯವಿಲ್ಲ. "ಭೇದಾಭೇದ"ವನ್ನೇ ಹೇಳಬೇಕು. ಅಂಶಿ (ಬೆಂಕಿ) ಮತ್ತು ಅಂಶ (ಕಿಡಿ) ಗಳಿಗೆ ಕೇವಲ ಅಭೇದವನ್ನು ಒಪ್ಪಿದರೆ ಬೆಂಕಿಯಿಂದ ಆಗುವ ಪಾಕಾದಿ ಕ್ರಿಯೆಗಳು ಬೆಂಕಿಯ ಅಂಶವೆನಿಸಿದ ಕಿಡಿಗಳಿಂದಲೂ ಆಗಬೇಕಾಗುತ್ತದೆ. ಇನ್ನು ಅದೇ ಅಂಶಾಂಶಿಗಳಿಗೆ ಕೇವಲ ಭೇದವನ್ನು ಹೇಳುವುದಾದರೆ ಬೆಂಕಿಗೆ ಅತ್ಯಂತ ಭಿನ್ನವಾದ ಜಲಾದಿಗಳಿಂದಲೂ ದಾಹಾದಿ ಕ್ರಿಯೆಗಳು ಆಗಬೇಕಾಗುತ್ತದೆ. ಅಷ್ಟೇ ಅಲ್ಲದೆ ಜಲದಿಂದ ದಾಹವು ಹುಟ್ಟದಿರುವಂತೆ ಬೆಂಕಿಯಕಿಡಿಯಿಂದಲೂ ದಾಹವು ಹುಟ್ಟಬಾರದು ಎಂದಾಗುತ್ತದೆ. ಆದರೆ ಅಗ್ನಿಕಣಗಳು ಅರಳಿ ಮುಂತಾದ ರಂಜಕ ದ್ರವ್ಯವನ್ನು ಪ್ರವೇಶಿಸಿ ದಾಹವನ್ನುಂಟುಮಾಡುತ್ತಿರುವುದು ಎಲ್ಲರಿಗೂ ತಿಳಿದೇ ಇದೆ.

ಇದರಂತೆ ಶಿವಾಂಶನಾದ ಜೀವ ಮತ್ತು ಶಿವರಿಗೆ ಕೇವಲ ಅಭೇದವನ್ನು ಒಪ್ಪಿದರೆ ಶಿವನಲ್ಲಿರುವ ಸರ್ವಜ್ಞತ್ವ ಮುಂತಾದುವು ಜೀವಾತ್ಮನಲ್ಲಿಯೂ ಇರಬೇಕಾಗುತ್ತದೆ ; ಇನ್ನು ಅವರಿಬ್ಬರಿಗೆ ಕೇವಲ ಭೇದವನ್ನು ಒಪ್ಪಿದರೆ ಶಿವಭಿನ್ನವಾದ ಘಟ-ಪಟಾದಿಗಳಿಂದ ಜ್ಞಾನವು ಉದಿಸದಿರುವಂತೆ ಜೀವನಿಗೂ ಜ್ಞಾನವಿರಬಾರದು ಎಂದಾಗುತ್ತದೆ. ಆದರೆ ಜೀವಾತ್ಮರಿಗೆ ಘಟ-ಪಟಾದಿ ವಸ್ತುಜ್ಞಾನವಿರುವುದು ಸುಪ್ರಸಿದ್ಧ. ಆದ್ದರಿಂದಲೇ ಶ್ರೀಪತಿಪಂಡಿತಭಗವತ್ಪಾದರು "ದ್ವೈತಾದ್ವೈತಾತ್ಮಕವಾದ ವಿಶೇಷಾದ್ವೈತ"ವನ್ನು ಒಪ್ಪಿದ್ದು.

ಶ್ರುತಿಗಳಲ್ಲಿ 'ದ್ವಾ ಸುಪರ್ಣಾ'[1] ಮುಂತಾದವುಗಳಲ್ಲಿ ಶಿವ-ಜೀವರಿಗೆ ದ್ವೈತವನ್ನು ಹೇಳಿದೆ. ಅದರಂತೆ "ತತ್ತ್ವಮಸಿ"[2] "ಅಹಂ ಬ್ರಹ್ಮಾಸ್ಮಿ"[3] ಮುಂತಾದವುಗಳಲ್ಲಿ ಅದ್ವೈತವನ್ನು ಹೇಳಿದೆ. ಈ ಎರಡು ಬಗೆಯ ಶ್ರುತಿಗಳಿಗೂ ಸಮನ್ವಯವನ್ನು ಹೇಳಬೇಕಾದದ್ದು ವೈದಿಕರ ಕರ್ತವ್ಯ. ಅದನ್ನು ಪರಮ ವೈದಿಕರಾದ ವೀರಶೈವಾಚಾರ್ಯರು ಶ್ರದ್ಧೆಯಿಂದ ಅನುಷ್ಠಾನಮಾಡಿದ್ದಾರೆ. ಶ್ರೀಪತಿಪಂಡಿತ ಭಗವತ್ಪಾದರು

> "ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಿತೇ ।
> ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಎಂದು ವೀರಶೈವದ ವೈಶಿಷ್ಟ್ಯವನ್ನು ಘೋಷಿಸಿದ್ದಾರೆ.

### ಜಗತ್ ಸೃಷ್ಟಿಯಲ್ಲಿ ಪರಿಣಾಮವಾದದ ಸ್ಥಾನ

ಈ ಜಗತ್ತು ಶಕ್ತಿ ವಿಶಿಷ್ಟಬ್ರಹ್ಮದ ಪರಿಣಾಮ. ಹೇಗೆ ಸುವರ್ಣವು ಆಭರಣಾದಿಗಳಾಗಿ ಪರಿಣಮಿಸುವುದೋ, ಅದರಂತೆ ಜಗತ್ ಸೃಷ್ಟಿಯಲ್ಲಿ ತೊಡಗಿದ ಶಕ್ತಿವಿಶಿಷ್ಟಬ್ರಹ್ಮವು ಜಗದ್ರೂಪವಾಗಿ ಪರಿಣಮಿಸುತ್ತದೆ ಎಂಬುದನ್ನು ಕೆಳಗಿನ ವಾಕ್ಯಗಳು ಸಮರ್ಥಿಸುತ್ತವೆ.

---

[1] ಮುಂಡಕ ೩. ೩. ೧.

[2] ಛಾಂದೋಗ್ಯ ೬. ೮. ೭.

[3] ಬೃಹದಾರಣ್ಯಕ ೧. ೪. ೧೦.

[1] ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ॥ ೬೫ ॥

ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥ ೬೬ ॥

[2] ವೃಕ್ಷಸ್ಯ ಪತ್ರಪುಷ್ಪಾದಿ ವಟಬೀಜೇ ಸ್ಥಿತಂ ಯಥಾ ।
ತಥಾ ಹೃದಯಬೀಜಸ್ಥಂ ವಿಶ್ವಮೇತತ್ಪರಾತ್ಮನಃ ॥ ೬೭ ॥

[3] ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ
[4] ಶಕ್ತಿಶ್ಚಶಕ್ತಿಮಾಂಶ್ಚೈವ ಪದಾರ್ಥದ್ವಯಮುಚ್ಯತೇ ।
ಶಕ್ತಯೋಽಸ್ಯ ಜಗತ್ ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ ॥

[5] ಬಹುಸ್ಯಾಂ ಪ್ರಜಾಯೇಯ

ಯಥೋರ್ಣನಾಭಿಃ ಸೃಜತೇ ಗೃಹ್ಯತೇ ಚ

ಜಗತ್ತು ಸತ್ಯ

ಅದ್ವೈತದಲ್ಲಿ " ಬ್ರಹ್ಮವು ಮಾತ್ರ ಸತ್ಯ. ಜಗತ್ತು ಮಿಥ್ಯೆ " ಎಂದು ಜಗತ್ತು – ಜೀವರಿಗೆ ಮಿಥ್ಯಾತ್ವವನ್ನು ಹೇಳಿದೆ. ಶಿವಾದ್ವೈತದಲ್ಲಾದರೆ ಜೀವ-ಜಗತ್ತುಗಳು ಪರಶಿವನ ಪರಿಣಾಮವಾದ್ದರಿಂದ ಸತ್ಯ ಎಂದು ಹೇಳಿದೆ.[7] " ಶಿವನು ಜಗತ್ತನ್ನು ಸೃಜಿಸಿ, ತಾನೂ ಅದರಲ್ಲಿಯೇ ಪ್ರವೇಶಿಸಿದನು " ಎಂದು ಹೇಳಿರುವುದರಿಂದ ಜಗತ್ತು ಸತ್ಯ.

[8] ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನಭಿದ್ಯತೇ ।
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನಭಿದ್ಯತೇ ॥

ಹೇಗೆ ನೊರೆ, ತೆರೆ, ಬುದ್ಬುದಾದಿಗಳು ಸಮುದ್ರಕ್ಕಿಂತ ಬೇರೆಯಲ್ಲವೋ ಅದರಂತೆ ಶಿವತತ್ತ್ವದಿಂದ ಹುಟ್ಟಿದ ಜಗತ್ತು ಶಿವನಿಗಿಂತ ಬೇರೆಯಲ್ಲ. ಸತ್ಯಸ್ವರೂಪನಾದ ಶಿವನಿಂದ ಉದಿಸಿದ ಜಗತ್ತೂ ಸತ್ಯವೇ ಆಗಿದೆ.

---

[1] ಸಿ. ಶಿ. ಪ. ೧೦.
[2] ಸಿ. ಶಿ. ಪ. ೨೦.
[3] ಶಿವಸೂತ್ರಂ. ೩-೩೦.
[4] ಸರ್ವಮಂಗಲಾ ಗ್ರಂಥಃ
ಛಾಂ. ೬. ೨. ೩.
[6] ಮುಂ. ೧. ೧. ೮.
[7] ತೈ. ಆ. ೬.
[8] ಸಿ. ಶಿ. ಪ. ೧೦.

### ವೀರಶೈವ ಸಿದ್ಧಾಂತದಲ್ಲಿ ಸೃಷ್ಟಿಕ್ರಮ

ಪರಶಿವನು ಸಚ್ಚಿದಾನಂದ ವಿಶಿಷ್ಟ, ನಿತ್ಯ, ನಿರ್ವಿಕಲ್ಪ, ಅಪ್ರಾಕೃತವೈಭವ, ಉಪಮಾತೀತ, ಸರ್ವಜ್ಞ, ಶಾಂತ, ಜಗನ್ಮಯ, ಚರಾಚರ ಪ್ರಪಂಚಾತೀತ ಮತ್ತು ಸರ್ವಶಕ್ತ.

ಶಿವಾಂಶವಾದ ಜೀವನು ಕಿಂಚಿಜ್ಞ, ಕಿಂಚಿತ್ಕರ್ತೃ, ಕಿಂಚಿತ್‌ಶಕ್ತಸಮನ್ವಿತ, ಅವಿದ್ಯಾಮೋಹಿತ. ಅವನಿಗೆ ಬ್ರಹ್ಮವನ್ನು ಸೇರಬೇಕು ಎಂಬ ಪರಿಜ್ಞಾನವಿಲ್ಲ. ಘೋರಾಪಾರನಿಸ್ಸಾರ ಸಂಸಾರತಾಪತ್ರಯಾನಲದಂದಹ್ಯಮಾನ ಜನನ ಮರಣಾನ್ವಿತ ಮತ್ತು ಬದ್ಧ.

### ಪ್ರವೃತ್ತಿ (ಸೃಷ್ಟಿ) ನಿವೃತ್ತಿ (ಲಯ) ಮಾರ್ಗಗಳಲ್ಲಿ ಶಕ್ತಿ ಮತ್ತು ಭಕ್ತಿಗಳ ಸ್ಥಾನ

ಪರಶಿವನು ತನ್ನ ಲೀಲೆಗಾಗಿ ಜಗತ್ತನ್ನು ಸೃಷ್ಟಿಸಿದ. "ಸ ಏಕಾಕೀ ನ ರಮತೇ, ಸ ದ್ವಿತೀಯಮೈಚ್ಛತ್" "ಸಚ್ಚಾಸಚ್ಚಾಭವತ್" "ಶಿವನು ಒಬ್ಬನೇ ರಮಿಸನು, ಅವನಿಗೆ ತನ್ನನ್ನು ತಾನೇ ಅರ್ಚಿಸಿಕೊಳ್ಳುವ ಬಯಕೆ; ಅದಕ್ಕಾಗಿ ಅವನು ಎರಡನೆಯದನ್ನು ಬಯಸಿದನು. ಅವನು ಸತ್ ಮತ್ತು ಅಸತ್ ರೂಪವಾಗಿ (ಉಪಾಸ್ಯೋಪಾಸಕ ರೂಪವಾಗಿ) ಆದನು" ಎಂಬ ಶ್ರುತಿಯಂತೆ ಎರಡಾದನು.

ಆಗಮದಲ್ಲಿ "ಜಗತ್ಕಾರಣವಾದ ಬ್ರಹ್ಮವು "ಸ್ಥಲ" ಎಂದು ಕರೆಯಲ್ಪಡುತ್ತದೆ. ಸ್ಥಲವು ಬ್ರಹ್ಮದ ಸ್ವಸ್ಥಾವಸ್ಥೆ.

"ಸ್ಥೀಯತೆ ಲೀಯತೇ ಯತ್ರ ಜಗದೇತಚ್ಚರಾಚರಮ್ ।
ತದ್ಬ್ರಹ್ಮಸ್ಥಲಮಿತ್ಯಾಹುಃ ಸ್ಥಲತತ್ತ್ವವಿಶಾರದಾಃ ॥[1]

ಚರಾಚರಾತ್ಮಕವಾದ ಈ ಜಗತ್ತು ಸೃಷ್ಟಿಪೂರ್ವದಲ್ಲಿ ಎಲ್ಲಿತ್ತೋ, ಸೃಷ್ಟಿಯಕಡೆಯಲ್ಲಿ ಇದು ಮತ್ತೆ ಎಲ್ಲಿ ಅಡಗುತ್ತದೆಯೋ ಅದು ಸ್ಥಲ. ಇದು ಶಿವಶರಣರು ಹೇಳುವ "ಸಹಜ" ಸ್ಥಿತಿ. ಇದನ್ನು ಬಯಲು, ನಿರ್ಬಯಲು, ಶೂನ್ಯ, ನಿಶ್ಶೂನ್ಯ, ಸರ್ವಶೂನ್ಯ ಮುಂತಾಗಿ ಅವರು ಹೇಳುತ್ತಾರೆ.

ಬ್ರಹ್ಮದಲ್ಲಿ "ತಾನು ಸೃಜಿಸಬೇಕು" ಎಂಬ ಇಚ್ಛೆ ಉದಿಸುವುದು **ಕ್ಷುಭಿತಾವಸ್ಥೆ.**[2] (ಕ್ಷುಭಿ ಕಿಂಚಿಚ್ಚಲನೇ) ಎಂದರೆ ಪ್ರಜ್ಞಾಶಕ್ತಿಯ ಸ್ಫುರಣ. ಆಗಲೇ ಅದು ಎರಡಾದದ್ದು. ಒಂದು ಲಿಂಗಸ್ಥಲ; ಮತ್ತೊಂದು **ಅಂಗಸ್ಥಲ.** ಲಿಂಗಸ್ಥಲವು ಉಪಾಸ್ಯ, ಅಂಗಸ್ಥಲವು ಉಪಾಸಕ. "ಬಹುಸ್ಯಾಂ ಪ್ರಜಾಯೇಯ" ಸಚ್ಚಾಸಚ್ಚಾಭವತ್" ಎಂಬ ಶ್ರುತಿಗಳು ಈ ಸ್ಥಿತಿಯನ್ನು ವರ್ಣಿಸಿವೆ. ಇದು ಸ್ಥಲದ "ಕ್ಷುಭಿತಾವಸ್ಥೆ".

**ಲಿಂಗಸ್ಥಲ**–[3]ಈ ಚರಾಚರಾತ್ಮಕವಾದ ವಿಶ್ವವು ಪ್ರಲಯದಲ್ಲಿ ಎಲ್ಲಿ ಅಡಗಿದ್ದು ಮತ್ತೆ ಸೃಷ್ಟಿಯಲ್ಲಿ ಯಾವುದರ ದೆಶೆಯಿಂದ ಆವಿರ್ಭವಿಸುತ್ತದೆಯೋ ಅದು ಲಿಂಗಸ್ಥಲ".

---

[1] ಅನುಭವಸೂತ್ರ. ೨-೧.

[2] ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಮ್ ॥
(ಅನು. ಸೂ. ೧. ೧.)

[3] ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಮ್ ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ॥
(ಅನು. ಸೂ. ೩. ೨.)

**ಅಂಗಸ್ಥಲ**– [4]" ಅಂ ಎಂದರೆ ಪರಬ್ರಹ್ಮ ; ಆ ಬ್ರಹ್ಮ ಪರವಾಗಿಯೂ, ಬ್ರಹ್ಮಪರಾಯಣ ವಾಗಿಯೂ ಇರುವುದೇ ಅಂಗಸ್ಥಲವೆನಿಸುತ್ತದೆ.

ಹೀಗೆ ಸ್ಥಲಶಬ್ದವಾಚ್ಯವಾದ ಶಕ್ತಿವಿಶಿಷ್ಟ ಪರಬ್ರಹ್ಮವೇ ಲಿಂಗಸ್ಥಲ ಮತ್ತು ಅಂಗಸ್ಥಲರೂಪ ವಾಗಿ ವಿಭಾಗವಾದಮೇಲೆ ಆ ಬ್ರಹ್ಮದಲ್ಲಿರುವ ಶಕ್ತಿಯೂಕೂಡ ಎರಡಾಗುತ್ತದೆ. "ಹೇಗೆ ಸ್ಥಲವು ಎರಡಾಯಿತೋ ಆಗಲೇ ಆ ಸ್ಥಲತತ್ತ್ವಗತವಾದ ಶಕ್ತಿಯೂ ಎರಡಾಯಿತು. ಆ ಶಕ್ತಿಯು ಉಪ ಮಾನವಿಲ್ಲದುದು. ಸಾಕ್ಷಾತ್ ಶಿವನೊಡನೆ ಸಹಧರ್ಮಿಣಿ. ಸಾಕ್ಷಿ, ಸತ್ಯ ಸಂಪೂರ್ಣಾ, ನಿರ್ವಿಕಲ್ಪ, ಅಂಥ ಮಾಹೇಶ್ವರೀ, ಶಕ್ತಿಯು ತನ್ನ ಸ್ವಾತಂತ್ರ್ಯ ಬಲದಿಂದಲೂ, ಸಮಾನಧರ್ಮವುಳ್ಳದ್ದಾದ್ದ ರಿಂದಲೂ, ಭಕ್ತರಲ್ಲಿ ವಾತ್ಸಲ್ಯವುಳ್ಳದ್ದಾದ್ದರಿಂದಲೂ ಅದು ತಾನೇ ಎರಡಾಯಿತು. ಅವುಗಳಲ್ಲಿ ಒಂದು ಲಿಂಗಸ್ಥಲವನ್ನು ಆಶ್ರಯಿಸಿ 'ಕಲೆ'ಯೆಸಿತು. ಮತ್ತೊಂದು ಅಂಗಸ್ಥಲವನ್ನು ಆಶ್ರಯಿಸಿತು. ಅಂಗಸ್ಥಲವನ್ನು ಆಶ್ರಯಿಸಿದ ಶಕ್ತಿಯು "ಭಕ್ತಿ"ಯೆನಿಸತು. ಆ ಭಕ್ತಿಯು ಭವವನ್ನು ತೊಲಗಿಸು ವಂಥದು. ಹೇಗೆ ಮಹಾನಲಜ್ವಾಲೆಯು ತಾನೇ ದೀಪವಾಗಿ ಪರಿಣಮಿಸುವುದೋ ಹಾಗೆ ಮಾಹೇ ಶ್ವರೀ ಶಕ್ತಿಯು ಭಕ್ತಿರೂಪು ತಳೆಯಿತು. ಜ್ವಾಲೆ ತಮ (ಕಪ್ಪು) ಸ್ವಿನಿ, ದೀಪವು ಸುಪ್ರಕಾಶ ಆದ್ದ ರಿಂದಲೇ ಶಕ್ತಿಯು ಸವಾಸನಾ ಭಕ್ತಿಯು ನಿರ್ವಾಸನಾ ; ಭಕ್ತಿಯು ಮಹತ್ವವುಳ್ಳದ್ದು, ಶುದ್ಧ, ಸೂಕ್ಷ್ಮ, ಶೋಭನಾ ಮತ್ತು ಪರಾ ಎನಿಸಿದೆ. ಮೇಲಾಗಿ ಅದು ಸಚ್ಚಿದಾನಂದರೂಪ, ಭುಕ್ತಿ ಮುಕ್ತಿಗಳನ್ನು ಕೊಡಬಲ್ಲದು. ಒಟ್ಟಿನಲ್ಲಿ ಶಕ್ತಿಯೇ ಭಕ್ತಿ ; ಭಕ್ತಿಯೇ ಶಕ್ತಿ."

ನಿಜವಾಗಿ ಹೇಳುವುದಾದರೆ ಶಕ್ತಿ-ಭಕ್ತಿಗಳಿಗೆ ಭೇದವೇ ಇಲ್ಲ. ಆದರೂ ವಿಚಾರಮಾಡಿದಲ್ಲಿ ಅವೆರಡರಲ್ಲಿ ಬಹಳ ಅಂತರವಿದೆ.

೧. ಶಕ್ತಿ ಪ್ರವೃತ್ತಿ – ಭಕ್ತಿನಿವೃತ್ತಿ
೨. ಶಕ್ತಿಯಿಂದ ಪ್ರಪಂಚ ಸೃಷ್ಟಿ – ಭಕ್ತಿಯಿಂದ ಪ್ರಪಂಚ ಲಯ.
೩. ಶಕ್ತಿವೈಚಿತ್ರ್ಯದಿಂದ ನಿರೂಪವೂ ರೂಪುಗೊಳ್ಳುತ್ತದೆ– ಭಕ್ತಿವೈಚಿತ್ರ್ಯದಿಂದ ರೂಪವೂ ನಿರೂಪವಾಗುತ್ತದೆ
೪. ಪ್ರಪಂಚವನ್ನು ಬೆಳೆಸುವ ಬಯಕೆ ಶಕ್ತಿಗೆ – ಭಕ್ತಿಗೆ ಪ್ರಪಂಚವನ್ನು ಮುಗಿಸುವ ಅಪೇಕ್ಷೆ
೫. ಶಕ್ತಿಯು ಅಧೋಮುಖಿ – ಭಕ್ತಿಯು ಊರ್ಧ್ವಮುಖಿ
೬. ಸಮಾಯೆಶಕ್ತಿ – ಭಕ್ತಿ ನಿರ್ಮಾಯೆ
೭. ಶಕ್ತಿಯದು ಉಪಾಸ್ಯತ್ವ – ಭಕ್ತಿಯದು ಉಪಾಸಕತ್ವ
೮. ಶಕ್ತಿಯು ಲಿಂಗಸ್ಥಲವನ್ನು ಆಶ್ರಯಿಸಿದೆ – ಭಕ್ತಿಯು ಅಂಗಸ್ಥಲವನ್ನು ಆಶ್ರಯಿಸಿದೆ[1]

ಯಾವ ದೃಷ್ಟಿಯಿಂದ ನೋಡಿದರೂ ಶಕ್ತಿಗಿಂತ ಭಕ್ತಿಯೇ ಮಿಗಿಲು.

---

[4] ಅಂಭವೇತ್ ಪರಮಂ ಬ್ರಹ್ಮ ತತ್ಪರಂ ತತ್ಪರಾಯಣಮ್ ।
ಅಂಗಸ್ಥಲಮಿತಿಪ್ರಾಹುಃ ಅಂಗತತ್ತ್ವ ವಿಶಾರದಾಃ ॥
(ಅನು. ಸೂ. ೪.೩.)

ಪ್ರವೃತ್ತಿಮಾರ್ಗ– ಮುವತ್ತಾರು ತತ್ತ್ವಗಳು.

ಸಚ್ಚಿದಾನಂದರೂಪವಾದ ಪರಶಿವಬ್ರಹ್ಮದಲ್ಲಿನ ವಿಮರ್ಶಶಕ್ತಿಯ ಪರಿಣಾಮವೇ ಜಗತ್ತು ಎಂದು ಹೇಳಲಾಯಿತು. ಶಿವಶಕ್ತಿಯು ಜಗತ್ ಸೃಷ್ಟಿಯಲ್ಲಿ ಪ್ರವೃತ್ತವಾದಾಗ ಅದು ಕ್ರಮವಾಗಿ ಮುವತ್ತಾರು ತತ್ತ್ವಗಳಾಗಿ ಪರಿಣಮಿಸುತ್ತದೆ.

ಶುದ್ಧ ತತ್ತ್ವಗಳು ೫.

ಶಿವ-ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯಾ,

ಮಿಶ್ರ ತತ್ತ್ವಗಳು ೭.

ಮಾಯಾ-ಕಲಾ-ವಿದ್ಯಾ-ರಾಗ-ಕಾಲ-ನಿಯತಿ-ಪುರುಷ.

ಅಶುದ್ಧ ತತ್ತ್ವಗಳ ೨೪.

ಪ್ರಕೃತಿ-
ಚಿತ್ತ-ಬುದ್ಧಿ-ಅಹಂಕಾರಮನಸ್ಸಿನ ಪ್ರವೃತ್ತಿಗಳು. (ಅಂತಃಕರಣಗಳು)
ಶ್ರೋತ್ರ-ತ್ವಕ್-ನೇತ್ರ-ಜಿಹ್ವಾ-ಘ್ರಾಣ. (ಜ್ಞಾನೇಂದ್ರಿಯ ಪಂಚಕ)
ವಾಕ್-ಪಾಣಿ-ಪಾದ-ಪಾಯು-ಉಪಸ್ಥಾ (ಕರ್ಮೇಂದ್ರಿಯ ಪಂಚಕ)
ಶಬ್ದ-ಸ್ಪರ್ಶ-ರೂಪ-ರಸ-ಗಂಧ. (ತನ್ಮಾತ್ರ ಪಂಚಕ)
ಆಕಾಶ-ವಾಯು-ವಹ್ನಿ-ಜಲ-ನೆಲ. (ಭೂತ ಪಂಚಕ)

ಎಂಬ[1] ಮುವತ್ತಾರು ತತ್ತ್ವಗಳಾಗಿ ಪರಿಣಮಿಸಿ ಜಗತ್ತು ನಿರ್ಮಿತವಾದುದನ್ನು ಹಿಂದೆಯೇ (ಪು. ೫೭–೬೧) ಹೇಳಿದೆ. ಹೀಗೆ ಶಕ್ತಿವಿಶಿಷ್ಟ ಪರಶಿವಬ್ರಹ್ಮವು 'ಬಹುಸ್ಯಾಂ ಪ್ರಜಾಯೇಯ'[2] ಎಂಬ ಉಕ್ತಿಯಂತೆ ಸೃಷ್ಟಿಗೆ ಉನ್ಮುಖವಾದಾಗ ಬ್ರಹ್ಮನಿಷ್ಠವಾದ ಶಕ್ತಿಯೇ ಜಗದ್ರೂಪವಾಗಿ ಪರಿಣಮಿಸಿ ಜಗತ್ತು ಸೃಷ್ಟಿಯಾಯಿತು.

ನಿವೃತ್ತಿಮಾರ್ಗ–

ಜಗತ್ ಪ್ರವೃತ್ತಿಯಲ್ಲಿ ಶಿವನಿಗೆ ನೆರವಾದ ಶಕ್ತಿಯೇ ಜಗತ್ತಿನ ನಿವೃತ್ತಿಯಲ್ಲಿ ತಾನೇ ಶಕ್ತಿಯಾಗಿ ಜೀವ (ಅಂಗ) ನನ್ನು ಆಶ್ರಯಿಸುತ್ತದೆ ಎಂದು ಹೇಳಲಾಯಿತು. ಹೀಗೆ ಭಕ್ತಿಯು ಜೀವ

---

ಪುನಸ್ತಂ ಹೋವಾಚ ಕಾನಿ ಷಟ್‌ತ್ರಿಂಶತ್ ತತ್ತ್ವಾನೀತಿ ಸ ಆತ್ಮಾ ಆಹ ಶಿವ-ಶಕ್ತ-ಸದಾಶಿವೇಶ್ವರ ಶುದ್ಧವಿದ್ಯಾ ಏತಾನಿ ಶುದ್ಧಾನಿ ಪಂಚತತ್ತ್ವಾನಿ, ಮಾಯಾ ಕಾಲೋ ನಿಯತಿ ಕಲಾ ವಿದ್ಯಾರಾಗ ಪುರುಷ ಇತಿ ಶುದ್ಧಾಶುದ್ಧಾನಿ ಸಪ್ತತತ್ತ್ವಾನಿ ...... "ವೃದ್ಧ ಜಾಬಾಲೋಪನಿಷತ್.

[2] ಅನಾದಿನಿಧನಾತ್ ಶಾಂತಾತ್ ಶಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತೋsತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ।

(ಶಿವಾಗಮ)

ನನ್ನು ಹೊಂದಬೇಕಾದರೆ ಅವನಲ್ಲಿದ್ದ ಪಾಪವು ಸಂಪೂರ್ಣವಾಗಿ ಅಳಿದು ಪುಣ್ಯವು ಮಿಗಿಲಾಗಿರಬೇಕು. ಅನೇಕ ಜನ್ಮಗಳಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಪಾಪವು ಅಳಿದು ಭಕ್ತಿಯುದಿಸುತ್ತದೆ.[1] ಇಂಥ ಶುದ್ಧಾಂತಃಕರಣನಾದ ಜೀವಿಯು 'ಪಿಂಡ'ನೆನಿಸುತ್ತಾನೆ. [2] ಆಗ ಅವನ ಮೇಲೆ ಶಿವನ ಕೃಪೆ ಬೀಳುತ್ತದೆ. ಇದನ್ನು 'ಶಕ್ತಿಪಾತ' ಎಂದು ಕರೆಯಲಾಗಿದೆ. ಹಾಗಾದಾಗ ಜೀವಿಯಲ್ಲಿ ಕೆಲವು ಬದಲಾವಣೆಗಳಾಗುತ್ತವೆ. "ಶಿವನಲ್ಲಿ, ಶಿವಭಕ್ತರಲ್ಲಿ, ಶಿವಶಾಸ್ತ್ರಗಳಲ್ಲಿ ಆಸಕ್ತಿ, ಶ್ರದ್ಧೆ, ಭವದಲ್ಲಿ ನಿರಾಸಕ್ತಿ, ವಿಷಯಗಳಲ್ಲಿ ಅನಾಸಕ್ತಿ ಮುಂತಾದ ಲಕ್ಷಣಗಳು ಕಾಣುತ್ತವೆ. ಎಡಬಿಡದಿರುವ ಈ ಲಕ್ಷಣಗಳನ್ನು ಗುರ್ತಿಸಿ, ಗುರು ಅಂಥವನಿಗೆ ಶಿವದೀಕ್ಷೆ ಎಸಗುತ್ತಾನೆ. [3]

ದೀಕ್ಷೆಯೆಂದರೆ [4] ಪಾಶಸಂಚಯವನ್ನು ಕಳೆದು ಶಿವಜ್ಞಾನವನ್ನು ಉಂಟುಮಾಡುವುದು ದೇಹಿಯು ಮೂರು ಬಗೆಯಾದ ಪಾಶಗಳಿಂದ ಬಂಧಿಸಲ್ಪಟ್ಟಿರುತ್ತಾನೆ. ಅವುಗಳಿಂದ ಬಿಡಿಸಿಕೊಂಡು ಅವನು ಶಾಶ್ವತವಾದ ಶಿವತ್ವವನ್ನು ಪಡೆಯುವನು. ಅಂಥವನಿಗೆ ಮತ್ತೆ ಪಶುತ್ವದ ತೊಡಕಿಲ್ಲ.

**ಮಲ-**

ಅನಾದಿ ಕರ್ಮವಶದಿಂದ ಜೀವನಲ್ಲಿ **ಆಣವ, ಮಾಯೀಯ** ಮತ್ತು **ಕಾರ್ಮ** ಎಂಬ ಮಲಗಳು ಸ್ವಾಭಾವಿಕವಾಗಿರುತ್ತವೆ ; ತಾಮ್ರದಲ್ಲಿ ಕಿಲುಬು ಇರುವಂತೆ. ತಾಮ್ರದಲ್ಲಿದ್ದ ಕಿಲುಬು

---

[1] ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಮ್ ।
ನರಾಣಾಂ ಕ್ಷೀಣ ಪಾಪಾನಾಂ ಶಿವೇ ಭಕ್ತಿಃ ಪ್ರಜಾಯತೇ ॥
(ಕ್ರಿಯಾಸಾರ ೧-೧೪.)

[2] ಬಹುಜನ್ಮ ಕೃತೈಃ ಪುಣ್ಯೈ ಪ್ರಕ್ಷೀಣೇ ಪಾಪಪಂಜರೇ ।
ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ ॥
ಪುಣ್ಯಾಧಿಕಃ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ ।
(ಸಿ. ಶಿ. ಪ. ೫. ೩೧-೩೨)

[3] ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ ॥
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾತಚ್ಛಾಸಕೇ ಶಿವೇ ।
ಏಭಿರ್ಲಕ್ಷೈಶ್ಚೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ॥
ಅನುಮೇಯಃ ಸದೀಕ್ಷೈಶ್ಚ ಶಕ್ತಿಪಾತಾನುಸಾರತಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ ॥
(ಪಾರಮೇಶ್ವರ-ಮೃಗೇಂದ್ರಾಗಮಗಳು)

[4] ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಸಂಚಯಃ ।
ತಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥ (ಸಿ. ಶಿ. ಪ. ೫.)

[5] ದೀಕ್ಷಯಾ ಮುಚ್ಯತೇ ದೇಹೀ ತ್ರಿವಿಧಾತ್ ಪಾಶಬಂಧನಾತ್ ।
ಶಿವತ್ವಂ ಯಾತಿ ಸತತಂ ನ ಪುನಃ ಪಶುತಾಂ ವ್ರಜೇತ್ ॥ (ವೀರಶೈವಾಚಾರಕೌಸ್ತುಭ)

ರಸವೇಧ ಅಥವಾ ಸ್ಪರ್ಶಮಣಿಯ ಸಂಪರ್ಕದಿಂದ ನಷ್ಟವಾಗಿ ತಾಮ್ರವು ಸುವರ್ಣವಾಗುತ್ತದೆ. ಆಗ ಮತ್ತೆ ಅದರಲ್ಲಿ ಕಿಲುಬಿಗೆ ಅವಕಾಶವಿರುವುದಿಲ್ಲ. ಅದರಂತೆ ಜೀವನಲ್ಲಿ ಆಣವಾದಿ ಮಲಗಳು ಸ್ವಾಭಾವಿಕವಾದರೂ ಸದ್ಗುರುವಿನ ಕೃಪೆಗೆ ಪಾತ್ರನಾಗಿ ಶಿವದೀಕ್ಷೆ ಪಡೆದ ಮೇಲೆ ಅವು ನಾಶವಾಗುವುವು. ಆಗ ಅವನು ಭಕ್ತನೆನಿಸುತ್ತಾನೆ.

**ಮಲ ಸ್ವರೂಪ**

ಜೀವನು ಶಿವನ ಅಂಶ ಎಂದು ಹೇಳಲಾಯಿತು. ಅಂದಮೇಲೆ ಶಿವನಲ್ಲಿ ಪರಿಪೂರ್ಣತ್ವ, ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವರೂಪಗುಣಗಳಿದ್ದವು, ಜೀವನು ಮೂಲತಃ ಶಿವನೆ; ಆದರೂ ಅವನು ಅನಾದಿಕರ್ಮವಶದಿಂದ ಬೆಂಕಿಯಿಂದ ಕಿಡಿಗಳು ಸಿಡಿದಂತೆ ಶಿವಾಂಶವಾಗಿ ಬೇರ್ಪಟ್ಟನು. ಆಗ ಶಿವನಲ್ಲಿದ್ದ ಪರಿಪೂರ್ಣತ್ವವು ಮರೆಯಾಗಿ "ತಾನು ಅಪೂರ್ಣ" ಎಂಬ ಭಾವ ಆತನಲ್ಲಿ ಮೂಡಿತು. ಇದೇ "**ಆಣವಮಲ**". ತಾನು ಮೊದಲು ಸರ್ವಜ್ಞನಾದರೂ ಈಗ ಅವನು ಕಿಂಚಿಜ್ಞನೆನಿಸಿದ. ಇದೇ "**ಮಾಯಾಮಲ**". ಶಿವನಲ್ಲಿದ್ದ ಸರ್ವಕರ್ತೃತ್ವಶಕ್ತಿಯು ಮರೆಯಾಗಿ, ತಾನು ಕಿಂಚಿತ್‌ಕರ್ತೃ ಎಂಬ ತಿಳಿವುದಿಸಿತು ಇದೇ "**ಕಾರ್ಮಮಲ**". ಈ ಬಗೆಯ ಮೂರು ಮಲಗಳಿಂದ ಆವೃತನಾದ ಜೀವನು ಸಂಸಾರಿಯೆನಿಸಿ, ಜನನ-ಮರಣಗಳ ಸುಳಿಯಲ್ಲಿ ಬಿದ್ದು ಪರಿಭ್ರಮಿಸತೊಡಗಿದ. ಶಿವದೀಕ್ಷೆ ಈ ಮಲಗಳನ್ನು ತೊಡೆಯುತ್ತದೆ.

ದೀಕ್ಷೆ ಮೂರು ವಿಧ,[1] **ವೇಧಾ-ಮಂತ್ರ** ಮತ್ತು **ಕ್ರಿಯಾ** ಎಂದು. ಗುರುವು ಶಿಷ್ಯನನ್ನು ಹತ್ತಿರ ಕರೆದು ಅವನನ್ನು ಕೃಪಾದೃಷ್ಟಿಯಿಂದ ನೋಡಿ, ಅವನ ಮಸ್ತಕದ ಮೇಲೆ ತನ್ನ ವರದಹಸ್ತವನ್ನಿಡುವುದೇ "**ವೇಧಾದೀಕ್ಷೆ**". ಇದರಿಂದ ಜೀವನ ಆಣವಮಲವು ನಷ್ಟವಾಗುತ್ತದೆ. ತರುವಾಯ ಶಿವದೀಕ್ಷಾಂಗವಾಗಿ ಎಸಗುವ ಮಂತ್ರದೀಕ್ಷೆಯಿಂದ ಅವನಲ್ಲಿದ್ದ ಮಾಯಾಮಲವು ಅಳಿಯುತ್ತದೆ. ಕುಂಡ-ಮಂಡಲ-ಕಲಶಸ್ಥಾಪನಾದಿ ಕ್ರಿಯಾದೀಕ್ಷೆಯಿಂದ ಕಾರ್ಮಮಲವು ಅಳಿದು, ಅವನು ಪರಿಶುದ್ಧನಾದ ಅಪರಂಜಿಯಂತೆ ಬೆಳಗಿ, ಅಮಲ ಶಿವಭಕ್ತನೆನಿಸುತ್ತಾನೆ.

**ಮುಕ್ತಿ ಉಪಾಯ–**

ಶಿವದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸಿತು. ಈ ಭಕ್ತಿಯು **ಶ್ರದ್ಧಾ-ನಿಷ್ಠಾ-ಅವಧಾನ-ಅನುಭವ-ಆನಂದ** ಮತ್ತು **ಸಮರಸ** ಎಂಬ ಆರು ಹಂತಗಳಲ್ಲಿ ಭಕ್ತನನ್ನು ಮೇಲೆ ಮೇಲೆ ಕೊಂಡೊಯ್ದು ಅವನನ್ನು ಶಿವನಲ್ಲಿ ಸಮರಸಗೊಳಿಸುತ್ತದೆ. ಆ ಕ್ರಮವು ಹೀಗಿದೆ–

**ಲಿಂಗಾಂಗ ಸ್ಥಲವಿವೇಕ**

ಶಿವದೀಕ್ಷೆಯ ತರುವಾಯ ಹಿಂದೆ ಹೇಳಿದಂತೆ ಚಿತ್‌ಶಕ್ತಿ ವಿಶಿಷ್ಟ ಜೀವನು ಅಂಗನೆನಿಸಿದನು. ಚಿಚ್ಛಕ್ತಿ ವಿಶಿಷ್ಟಶಿವನು ಶಿವದೀಕ್ಷೆಯಿಂದ ಅಂಗವನ್ನು ಸೇರಿ ಲಿಂಗವೆನಿಸಿದನು. ಈ ಲಿಂಗವು

---

[1] ಸಾದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮ ವಿಶಾರದೈಃ ।
ವೇಧಾರೂಪಾ-ಕ್ರಿಯಾರೂಪಾ ಮಂತ್ರರೂಪಾ ಚ ತಾಪಸ ॥

(ಸಿ. ಶಿ. ಪ. ೫.)

ಭಕ್ತನನ್ನು ಅನುಗ್ರಹಿಸುವುದಕ್ಕಾಗಿ ಏರ್ಪಟ್ಟುದು. ದೀಕ್ಷೆಯಲ್ಲಿ ಗುರುವು ಭಕ್ತನ ಸ್ಥೂಲ (ತ್ಯಾಗಾಂಗ) ಸೂಕ್ಷ್ಮ (ಭೋಗಾಂಗ) ಮತ್ತು ಕಾರಣ (ಯೋಗಾಂಗ) ಶರೀರಗಳಲ್ಲಿ ಕ್ರಮವಾಗಿ **ಇಷ್ಟ-ಪ್ರಾಣ-ಭಾವ** ಲಿಂಗಗಳನ್ನು ಧಾರಣಮಾಡಿರುತ್ತಾನೆ. ಅವುಗಳಲ್ಲಿ ಇಷ್ಟಲಿಂಗವು **ಆಚಾರ ಲಿಂಗ-ಗುರುಲಿಂಗವೆಂದೂ,** ಪ್ರಾಣಲಿಂಗವು **ಶಿವಲಿಂಗ-ಚರಲಿಂಗವೆಂದೂ,** ಭಾವಲಿಂಗವು **ಪ್ರಸಾದಲಿಂಗ-ಮಹಾಲಿಂಗವೆಂದೂ** ಮತ್ತೆ ಎರಡೆರಡು ತೆರನಾಗಿ ವಿಭಾಗ ಹೊಂದಿ ಆರು ಬಗೆ ಯಾಗುತ್ತದೆ. ಅದರಂತೆ ತ್ಯಾಗಾಂಗವು ಕೂಡ **ಭಕ್ತ-ಮಾಹೇಶ** ಎಂದೂ, ಭೋಗಾಂಗವು **ಪ್ರಸಾದಿ-ಪ್ರಾಣಲಿಂಗಿಯೆಂದೂ,** ಯೋಗಾಂಗವು **ಶರಣ-ಐಕ್ಯವೆಂದೂ** ವಿಭಾಗಿಸಲ್ಪಟ್ಟು ಆರು ಬಗೆಯಾಗುತ್ತದೆ.

ಮುಂದೆ ಅಂಗಸ್ಥಲವು ಅವಾಂತರ ಭೇದದಿಂದ ನಲವತ್ತುನಾಲ್ಕು (೪೪) ಬಗೆಯಾಗಿಯೂ, ಲಿಂಗಸ್ಥಲವು ಐವತ್ತೇಳು (೫೭) ಬಗೆಯಾಗಿಯೂ ವಿಭಾಗಗೊಂಡು ಒಟ್ಟು ಒಂದುನೂರಒಂದು (ಏಕೋತ್ತರಶತ ೧೦೧) ಸ್ಥಲಗಳಾಗುತ್ತವೆ. ಈ ನೂರೊಂದು ಸ್ಥಲಗಳ ಲಿಂಗಾಂಗಗಳಲ್ಲಿನ ಸಾಮರಸ್ಯ ಜ್ಞಾನವೇ ಮೋಕ್ಷಕ್ಕೆ ಮೂಲವೆಂಬುದು ಈ ಸಿದ್ಧಾಂತದ ಹೃದಯ.

**ಲಿಂಗಸ್ಥಲಸ್ವರೂಪ–**

ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ ।
ಪ್ರಾಣಲಿಂಗಂ ತು ತತ್ ಸೂಕ್ಷ್ಮಂ ಯದಂತರ್ಭಾವನಾಮಯಂ ॥
ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ।

ಸ್ಥೂಲ ಶರೀರದ ಮೇಲೆ ಧರಿಸುವುದು ಇಷ್ಟಲಿಂಗ ; ಸೂಕ್ಷ್ಮ ಶರೀರದ ಮೇಲೆ ಧರಿಸುವುದು ಪ್ರಾಣ ಲಿಂಗ ; ಕಾರಣ ಶರೀರದ ಮೇಲೆ ಧರಿಸುವುದು ಭಾವಲಿಂಗ. ಇನ್ನು ಈ ಮೂರು ಲಿಂಗಗಳ ಪ್ರಭೇದ ಗಳೆನಿಸಿರುವ **ಆಚಾರಾದಿಲಿಂಗಗಳು** ಇವು–

ಆಚಾರಲಿಂಗಂ ಘ್ರಾಣಾಖ್ಯಂ ಭಕ್ತ ಸ್ಥಲ ಸಮಾಶ್ರಯಮ್ ।
ನಿವೃತ್ತಿ ಕಲಯೋಪೇತಂ ಗ್ರಂಧಗ್ರಹಣ ಸಾಧನಮ್ ॥ ೧ ॥
ಗುರುಲಿಂಗಂ ತು ಜಿಹ್ವಾಖ್ಯಂ ಮಾಹೇಶಸ್ಥಲ ಸಂಶ್ರಯಮ್ ।
ಪ್ರತಿಷ್ಠಾ ಕಲಯೋಪೇತಂ ರಸಗ್ರಹಣ ಸಾಧನಮ್ ॥ ೨ ॥
ಶಿವಲಿಂಗಂ ತು ನೇತ್ರಾಖ್ಯಂ ಪ್ರಸಾದಿ ಸ್ಥಲ ಸಂಶ್ರಯಮ್ ।
ವಿದ್ಯಾಕಲಾಸಮಾಯುಕ್ತಂ ರೂಪಗ್ರಹಣ ಸಾಧನಮ್ ॥ ೩ ॥
ತ್ಯಗಾಖ್ಯಂ ಜಂಗಮಂ ಲಿಂಗಂ ಪ್ರಾಣಲಿಂಗ ಸ್ಥಲಾಶ್ರಯಮ್ ।
ಶಾಂತ್ಯಾಖ್ಯ ಕಲಯೋಪೇತಂ ಸ್ಪರ್ಶಗ್ರಹಣ ಸಾಧನಮ್ ॥ ೪ ॥
ಪ್ರಸಾದಲಿಂಗಂ ಶ್ರೋತ್ರಾಖ್ಯಂ ಶರಣಸ್ಥಲಸಂಶ್ರಯಮ್ ।
ಶಾಂತ್ಯತೀತಕಲೋಪೇತಂ ಶಬ್ದಗ್ರಹಣ ಸಾಧನಮ್ ॥ ೫ ॥
ಮಾನಸಂ ತು ಮಹಾಲಿಂಗಂ ಐಕ್ಯಸ್ಥಲಸಮಾಶ್ರಯಮ್ ।
ಶಾಂತ್ಯತೀತೋತ್ತರೋಪೇತಂ ಸರ್ವಗ್ರಹಣ ಸಾಧನಮ್ ॥ ೬ ॥

ಆಚಾರಲಿಂಗ– ಘ್ರಾಣತತ್ತ್ವ-ಗಂಧಗ್ರಹಣಸಾಧನ-ಭಕ್ತಸ್ಥಲ-ನಿವೃತ್ತಿಕಲೆ.
ಗುರುಲಿಂಗ– ಜಿಹ್ವಾತತ್ತ್ವ-ರಸಗ್ರಹಣಸಾಧನ, ಮಾಹೇಶಸ್ಥಲ-ಪ್ರತಿಷ್ಠಾಕಲೆ.
ಶಿವಲಿಂಗ– ನೇತ್ರತತ್ತ್ವ-ರೂಪಗ್ರಹಣಸಾಧನ, ಪ್ರಸಾದಿಸ್ಥಲ, ವಿದ್ಯಾಕಲೆ.
ಜಂಗಮಲಿಂಗ– ತ್ವಕ್‌ತತ್ತ್ವ-ಸ್ಪರ್ಶಗ್ರಹಣಸಾಧನ-ಪ್ರಾಣಲಿಂಗಿಸ್ಥಲ, ಶಾಂತಿಕಲೆ.
ಪ್ರಸಾದಲಿಂಗ– ಶ್ರೋತ್ರತತ್ತ್ವ-ಶಬ್ದಗ್ರಹಣಸಾಧನ, ಶರಣಸ್ಥಲ, ಶಾಂತ್ಯತೀತಕಲೆ.
ಮಹಾಲಿಂಗ– ಮನಸ್ತತ್ತ್ವ-ಸರ್ವಗ್ರಹಣಸಾಧನ, ಐಕ್ಯಸ್ಥಲ, ಶಾಂತ್ಯತೀತೋತ್ತರಕಲೆ.

**ಭಕ್ತಾದಿ ಅಂಗಸ್ಥಲಗಳ ಸ್ವರೂಪ–**

ಅಂಗಸ್ಥಲವು **ಯೋಗಾಂಗ-ಭೋಗಾಂಗ** ಮತ್ತು **ತ್ಯಾಗಾಂಗ** ಎಂದು ಮೂರು ಬಗೆ. ಇಲ್ಲಿ ಭಕ್ತನು ಗುರು ಲಿಂಗ-ಜಂಗಮಗಳಲ್ಲಿ ಸಮಬುದ್ಧಿಯನ್ನಿಟ್ಟು ಆರಾಧಿಸುವುದು **'ಯೋಗಾಂಗ'** ಗುರು-ಲಿಂಗ-ಜಂಗಮಾರ್ಪಿತ ಪ್ರಸಾದವನ್ನು ಸೇವಿಸಿ ಲಿಂಗಭೋಗೋಪಭೋಗಿಯಾಗುವುದು **ಭೋಗಾಂಗ.** ಗುರು-ಲಿಂಗ-ಜಂಗಮರಿಗೆ ನಿರ್ವಂಚನೆಯಿಂದ ತನು-ಮನೋಧನಗಳನ್ನು ಸಮರ್ಪಿಸಿ-ದಾಸೋऽಹಂ ಭಾವದಿಂದಿರುವುದು **ತ್ಯಾಗಾಂಗ** ವೆನಿಸುವುದು.[1]

ಸದಾಚಾರಃ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।
ಲಾಂಛನೇ ಶರಣೇ ಭಕ್ತಿರ್ಭಕ್ತಸ್ಥಲಮನುತ್ತಮಮ್ ॥ ೧ ॥
ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।
ಬ್ರಹ್ಮಾದಿಸ್ಥಾನ ವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥ ೨ ॥
ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲ ಜ್ಞಾನಕಾರಣಂ ।
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ॥ ೩ ॥
ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।
ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥ ೪ ॥
ಸತೀಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂ ಪ್ರಭುಃ ।
ಪ್ರಾಪಂಚಿಕಸುಖಂ ನಾಸ್ತಿ ಶರಣಸ್ಥಲಮುತ್ತಮಂ ॥ ೫ ॥
ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೇಯಿವಾನ್ ।
ಶರಣಾಖ್ಯಃ ಶಿವೇನೈಕ್ಯಭಾವನಾದೈಕ್ಯವಾನ್ ಭವೇತ್ ॥ ೬ ॥

ಸದಾಚಾರಶೀಲನೂ, ಗುರುಲಿಂಗ-ಜಂಗಮಗಳಲ್ಲಿ ಭೇದಬುದ್ಧಿಯಿಲ್ಲದವನೂ ಶಿವಲಾಂಛನವುಳ್ಳವರಲ್ಲಿ ಭಕ್ತಿಯುಳ್ಳವನೂ ಆದವನೇಭಕ್ತ. ಸಹಜದಾನಿಯೂ ಶಿವನಲ್ಲಿ ತತ್ಪರನೂ, ಬ್ರಹ್ಮಾದಿಸ್ಥಾನಗಳಲ್ಲಿ ವಿಮುಖನೂ ಆದ ಭಕ್ತನೇ ಮಾಹೇಶ್ವರ. ಮನಸ್ಸಿನ ಪ್ರಸನ್ನತೆಗಾಗಿಯೂ ನಿರ್ಮಲಜ್ಞಾನಕ್ಕೆ ಕಾರಣವಾಗಿಯೂ ಇರುವ ಶಿವಪ್ರಸಾದವನ್ನು ಸೇವಿಸುವವನೇ ಪ್ರಸಾದಿ. ಚಿದಾತ್ಮಕವಾದ ಬ್ರಹ್ಮವೇ ಲಿಂಗ ; ಶಿವಶಕ್ತಿಯೇ ಪ್ರಾಣಸ್ವರೂಪವಾಗಿರುವ ತತ್ತ್ವ ಎಂದು ಬಲ್ಲವನೇ ಪ್ರಾಣಲಿಂಗಿ. ನಾನೇ

---

[1] ಶರೀರಾದಿಪದಾರ್ಥಾಂಶ್ಚದತ್ವಾ ದಾನಂ ಸಮರ್ಪಣಮ್ ।
ಸಮರ್ಪ್ಯ ಸೋऽಹಮಸ್ಮೀತಿ ದಾಸೋऽಹಂ ಭಾವಉಚ್ಯತೇ ॥
(–ಅನುಸೂತ್ರ ೭. ೬೧)

ಸತಿ, ಲಿಂಗವೇ ಪತಿ ಎಂಬ ಭಾವನೆಯುಳ್ಳವನಾಗಿ, ಸ್ವಯಂಪ್ರಭುವಾಗಿ, ಪ್ರಾಪಂಚಿಕ ಸುಖ ವಿಮುಖನಾದವನೇ **ಶರಣ**. ಪ್ರಾಣಲಿಂಗಾದಿಯೋಗದಿಂದ ಸುಖಾತಿಶಯವನ್ನು ಹೊಂದಿದ ಶರಣನು ಶಿವನಲ್ಲಿ ಐಕ್ಯಭಾವವನ್ನು ಹೊಂದಿ ಐಕ್ಯನೆನಿಸುತ್ತಾನೆ.

**ಷಟ್‌ಸ್ಥಲರೋಹಣ**

ಮುಕ್ತಿಗೆ ಮುಖ್ಯ ಉಪಾಯವೆನಿಸಿರುವ ಭಕ್ತಿಯು, ಭಕ್ತರನ್ನು ಉದ್ಧರಿಸಲು ಉದ್ಯುಕ್ತವಾದ ಮಾತೃ ಸ್ವರೂಪಿಣಿಯಾದ ಶಕ್ತಿಯ ಪರಿಣಾಮ. ಅದು ಸಾಧಕನನ್ನು ಉದ್ಧರಿಸಲು ಆರು ವಿಧವಾಗುತ್ತದೆ; **ಶ್ರದ್ಧಾ-ನಿಷ್ಠಾ-ಅವಧಾನ-ಅನುಭವ-ಆನಂದ** ಮತ್ತು ಐಕ್ಯ ಎಂದು. ಭಕ್ತನನ್ನು ಹೊಂದಿದ ಈ ಭಕ್ತಿಯು ಸಂಕುಚಿತಜ್ಞಾನಶಕ್ತಿ-ಕ್ರಿಯಾಶಕ್ತಿಗಳಿಂದ ಕೂಡಿದ ಜೀವಾತ್ಮನನ್ನು ಕ್ರಮವಾಗಿ ಭಕ್ತ-ಮಾಹೇಶ-ಪ್ರಸಾದಿ-ಪ್ರಾಣಲಿಂಗಿ-ಶರಣ ಮತ್ತು ಐಕ್ಯ ಎಂಬ ಸ್ಥಾನಗಳನ್ನು ಹೊಂದಿಸಿ ಶಿವಸಾಮರಸ್ಯ ಅಥವಾ ಶಿವತ್ವಾಭಿವ್ಯಕ್ತಿಯನ್ನು ಸಂಪಾದಿಸುತ್ತದೆ.

**ಭಕ್ತಸ್ಥಳ**– ಇದು 'ಬೀಜವೃಕ್ಷನ್ಯಾಯಸ್ಥಳ' ಪರಶಿವಶಕ್ತಿಪಾತ (ಕೃಪೆ) ದಿಂದ ಕೃತಾರ್ಥ ನಾಗಿ ಶಿವದೀಕ್ಷೆ ಪಡೆದ ಅಂಗನಲ್ಲಿ ಭಕ್ತಿಯು **ಶ್ರದ್ಧಾ**ರೂಪವಾಗಿ ಇರುತ್ತದೆ. ಆಗ ಅವನಲ್ಲಿ ದೇಹಾದಿಗಳ ಅಭಿಮಾನವು ನಷ್ಟವಾಗಿ ಅವನಿಗೆ **ಗುರು-ಲಿಂಗ-ಜಂಗಮ-ಭಸ್ಮ-ರುದ್ರಾಕ್ಷ-ಮಂತ್ರ-ಪಾದೋದಕ** ಮತ್ತು **ಪ್ರಸಾದ** ಎಂಬ ಅಷ್ಟಾವರಣಗಳಲ್ಲಿ **ಲಿಂಗಾಚಾರ-ಸದಾಚಾರ-ಶಿವಾಚಾರ-ಗಣಾಚಾರ** ಮತ್ತು ಭೃತ್ಯಾಚಾರ ಎಂಬ ಪಂಚಾಚಾರಗಳಲ್ಲಿ ಶ್ರದ್ಧೆಮೂಡಿ, ಅವುಗಳನ್ನು ಅನುಷ್ಠಾನಮಾಡುವ ಪ್ರವೃತ್ತಿಯುಂಟಾಗುತ್ತದೆ. ಈ ಬಗೆಯ ಅನುಷ್ಠಾನದ ಪ್ರಭಾವದಿಂದ ಬೆಣ್ಣೆ ತೆಗೆಯಲು ಮೊಸರನ್ನು ಮಥಿಸುವಂತೆ ಜೀವಾತ್ಮನಲ್ಲಿ ಶಿವತ್ವ ಅಭಿವ್ಯಕ್ತಿಗಾಗಿ ಪ್ರೇಮಮಂಥನವು ಆರಂಭವಾಗುತ್ತದೆ. ಆಗ ಭಕ್ತಿಬೀಜವು ಭಕ್ತನಲ್ಲಿ ಅಂಕುರಿಸಿ ಬೆಳೆಯತೊಡಗುತ್ತದೆ.

**ಮಾಹೇಶ್ವರಸ್ಥಳ**– ಇದು ಸಲಿಲಮುಕ್ತನ್ಯಾಯಸ್ಥಲ. ಕಡಲಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿ ಬಿದ್ದ ಸ್ವಾತೀಮಳೆಯ ಹನಿ ಕಾಲಾಂತರದಲ್ಲಿ ಗಟ್ಟಿಗೊಂಡು ಮುತ್ತು ಆಗುವಂತೆ ಭಕ್ತನ ಈಶ್ವರಾಭಿಮುಖವಾದ ಶ್ರದ್ಧೆಯೇ ಚಿತ್ತಸ್ಥೈರ್ಯ ರೂಪದಿಂದ ಘನೀಭಾವ ಹೊಂದಿ ನಿಷ್ಠೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಈ ಸ್ಥಲದಲ್ಲಿನ ಭಕ್ತಿಗೆ **'ನಿಷ್ಠಾಭಕ್ತಿ'** ಎಂದು ಹೆಸರು. ಅದರಿಂದ ಸಾಧಕನು ತನ್ನ ಆಚಾರ ವಿಚಾರ ಮತ್ತು ಅನುಷ್ಠಾನಗಳಲ್ಲಿ ದೃಢವ್ರತನಾಗುತ್ತಾನೆ. ಅವನೇ ಶಿವಪ್ರತಿ, ತನ್ನವೆನಿಸಿದ್ದ ತನು, ಮನಸ್ಸು ಮತ್ತು ಧನವೆಂಬ ತ್ರಿವಿಧವನ್ನು ದಾಸೋಽಹಂಭಾವದಿಂದ ದಾನಮಾಡಿ ಬ್ರಹ್ಮಪದವಿಯೇ ಮೊದಲಾದುವನ್ನೆಲ್ಲ ತೃಣಕ್ಕೆ ಸಮಾನವಾಗಿ ಭಾವಿಸುವ ಭಕ್ತನೇ ಮಾಹೇಶ್ವರನೆನಿಸುತ್ತಾನೆ.

**ಪ್ರಸಾದಿಸ್ಥಲ**– ಇದು 'ಅನಲಕಾಷ್ಠನ್ಯಾಯಸ್ಥಲ'. ಇಲ್ಲಿಯ ಭಕ್ತಿಯು ಚಿತ್ತಶುದ್ಧಿಯ ಮೂಲಕ **'ಅವಧಾನಭಕ್ತಿ'** ಎನಿಸುತ್ತದೆ; ಕಾಷ್ಠಕ್ಕೆ ಸೋಂಕಿದ ಬೆಂಕಿಯು ಕಾಷ್ಠವನ್ನು ಹೊರಗೊಳಗೆ ಸಂಪೂರ್ಣವಾಗಿ ವ್ಯಾಪಿಸಿ ಸುಟ್ಟು ಹೇಗೆ ಕಾಷ್ಠದ ಗುಣಗಳನ್ನು ಕಳೆಯುತ್ತದೆಯೋ ಅದರಂತೆ ಈಶ್ವರ ಪ್ರೇಮವು ಅವಧಾನವೆನಿಸಿ, ತ್ರಿಕರಣಗಳನ್ನು ವ್ಯಾಪಿಸಿ ಅಲ್ಲಿಯ ಶಬ್ದ, ಸ್ಪರ್ಶ ಮುಂತಾದ ತನ್ಮಾತ್ರೆಗಳಿಗೆ ವಿಷಯಗಳೆನಿಸಿದ ಸ್ರಕ್, ಚಂದನಾದಿಗಳನ್ನು ಭಸ್ಮಗೊಳಿಸಿ, ಅವನ್ನು ಪ್ರಸಾದರೂಪವಾಗಿ ಪರಿವರ್ತಿಸುತ್ತದೆ. ಆಗ ಸಾಧಕನಲ್ಲಿ ಚಿತ್ತಪ್ರಸನ್ನತೆ ಮೂಡುತ್ತದೆ. ಅಂಥ ಭಕ್ತನ ವ್ಯವಹಾರವೆಲ್ಲ ಶಿವರೂಪ, ಅವನ ಆಚಾರ ಶಿವಾಚಾರ, ಆಗ ಅವನು **'ಪ್ರಸಾದಕಾಯ'** ನೆನಿಸುತ್ತಾನೆ.

ಪ್ರಾಣಲಿಂಗಸ್ಥಲ–ಇಲ್ಲಿಯದು 'ಅನುಭವಭಕ್ತಿ' ಅವನ ಅನುಭವವು 'ಭ್ರಮರವನೆನೆನೆ ನೆನೆದು ಕೀಟವು ಭ್ರಮರವೇ ಆಗುವ ಪರಿ.

ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಮ್ ।
ಶಿವಭಕ್ತಃ ಶಿವಯೋಗೇನ ಶಿವೋ ಭವತಿ ನಿಶ್ಚಿತಮ್ ॥

ಎಂಬಂತೆ ಜೀವಭ್ರಮೆ ಅಳಿದು ಸಾಧಕನು ಶಿವಾನುಭಾವಿಯಾಗುತ್ತಾನೆ. ನಿರಂತರವೂ ಶಿವಚಿಂತನದಲ್ಲಿರುವ ಸಾಧಕನು ಶಿವಧ್ಯಾನ, ಪೂಜೆ, ಜಪಾದಿಗಳಲ್ಲಿ ಶಿವನ ಅನುಭವಪಡೆಯುತ್ತಾನೆ. ಇದು 'ಭ್ರಮರಕೀಟನ್ಯಾಯ'ಸ್ಥಳ.

ಶರಣಸ್ಥಲ– 'ಸತೀಪತಿನ್ಯಾಯ ಸ್ಥಲ' ಇದು. ಇಲ್ಲಿಯದು ಆನಂದಭಕ್ತಿ ಶಿವನ ನಿತ್ಯತ್ವದ ವಿಷಯದಲ್ಲಿ ಉಂಟಾದ ನಿಶ್ಚಿಂತತೆಯಿಂದ ಅವನಿಗೆ ಆನಂದ. ಸಾವಿಲ್ಲದ, ಕೇಡಿಲ್ಲದ ಪತಿಯನ್ನು ಪಡೆದ ಸತಿಯಂತೆ. ಇಲ್ಲಿಯ ಸಾಧಕ ಶಿವಾನಂದಿ. ಈ ಸ್ಥಿತಿಯನ್ನು ಶ್ರುತಿಯು 'ತದ್ಯಥಾ ಪ್ರಿಯಯಾಸ್ತ್ರಿಯಾ ಸಂಪರಿಷ್ವಕ್ತೋ ನಬಾಹ್ಯಂ ಕಿಂಚನ ವೇದನಾಂತರಂ ! ತಥಾ ಬ್ರಹ್ಮಣಾ ಸಂಪರಿಷ್ವಕ್ತಃ ನ ಕಿಂಚಿತ್ ವೇದನಾಂತರಂ "[1] ಎಂದರೆ "ತನ್ನ ಪ್ರಿಯೆಯನ್ನು ಆಲಿಂಗಿಸಿದಾಗ ಒಳಹೊರಗಿನ ಎಚ್ಚರವಿಲ್ಲದೆ ತಾನೇ ತಾನಾಗಿರುವಂತೆ ಈ ಪುರುಷನು ಪರಮಾತ್ಮನೊಡನೆ ಒಂದಾದಾಗ ಅಂತರ್ಬಾಹ್ಯಗಳನ್ನು ಮರೆತು, ತಾನೇ ತಾನಾಗಿರುವನು". ಅವನೇ ಆಪ್ತಕಾಮ, ಆತ್ಮಕಾಮ, ಅಕಾಮ, ಶೋಕರಹಿತ.

ಐಕ್ಯಸ್ಥಲ– ಇದು 'ಶಿಖಿಕರ್ಪೂರನ್ಯಾಯ'ಸ್ಥಳ. ಇಲ್ಲಿಯದು 'ಸಮರಸಭಕ್ತಿ'. ಭೂತವಸ್ತುಗಳೆನಿಸಿದ ಶಿಖಿ ಮತ್ತು ಕರ್ಪೂರಗಳು ಅಗ್ನಿ ಸಂಯೋಗಮಾತ್ರದಿಂದ ಒಂದಾಗಿ ಉರಿದು, ಕಡೆಗೆ ಎರಡೂ ಇಲ್ಲವಾಗುವಂತೆ, ಶರಣನೆನಿಸಿದ ಸಾಧಕನು ಸಮರಸ ಭಕ್ತಿಯ ಪ್ರಭಾವದಿಂದ ಕಿಂಚಿಜ್ಞತ್ವ, ಕಿಂಚಿತ್ಕರ್ತೃತ್ವಾದಿ ಜೀವಗುಣವಳಿದು, ಸರ್ವಜ್ಞತ್ವ-ಸರ್ವಕರ್ತೃತ್ವಗಳು ಮೂಡಿ, ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆವಂತೆ 'ನದೀ ಸಮುದ್ರನ್ಯಾಯ'ದಂತೆ ಮುಕ್ತನಾಗಿ ಸಾಮರಸ್ಯ ಪಡೆಯುತ್ತಾನೆ.

### ಲಿಂಗಾಂಗಸಾಮರಸ್ಯ ಪ್ರಕಾರ

[2]"ಹಿಂದೆ ಹೇಳಿದಂತೆ ಸ್ಥೂಲ-ಸೂಕ್ಷ್ಮ-ಶರೀರಗಳಲ್ಲಿ ಜೀವನು ತನ್ನ ಗುರುವಿನಿಂದ ಕ್ರಮವಾಗಿ ಇಷ್ಟ-ಪ್ರಾಣ-ಭಾವಲಿಂಗಗಳನ್ನು ಪಡೆದ ತರುವಾಯ, ಆ ಲಿಂಗಗಳ ವಿಭಾಗವೆನಿಸಿದ ಆಚಾರಾದಿ ಲಿಂಗಗಳಿಗೆ ಆಯಾ ಪದಾರ್ಥಗಳನ್ನು ಸಮರ್ಪಿಸಿ, ಅನುಸಂಧಾನದಿಂದ, ಭಕ್ತಿಯಿಂದ ಘನಲಿಂಗದಲ್ಲಿ ಸಮರಸ ಹೊಂದಿ ಐಕ್ಯಸ್ಥಿತಿ ಎಂಬ ಮಹಾನಂದವನ್ನು ಅನುಭವಿಸುತ್ತಾನೆ. ಭಕ್ತಿ ಮತ್ತು ಆನಂದಗಳ ಕ್ಷೇಮಾತಿಶಯದಿಂದ ಜೀವನ್ಮುಕ್ತನಾಗುತ್ತಾನೆ "ಈ ಕ್ರಮವು ಹೀಗಿದೆ–

ಭಕ್ತನು– ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗಕ್ಕೆ ; ಶ್ರದ್ಧಾಭಕ್ತಿಯಿಂದ, ಸುಚಿತ್ತ ಹಸ್ತದಿಂದ, 'ನ'ಕಾರ ಮಂತ್ರವನ್ನು ಸ್ಮರಿಸುತ್ತಾ ಗಂಧಪದಾರ್ಥವನ್ನು ಘ್ರಾಣೇಂದ್ರಿಯ ಮುಖದಲ್ಲಿ ಸಮರ್ಪಿಸಿ, ತತ್ಪ್ರಸಾದ ಭೋಗಿಯಾಗಿ ಆನಂದವನ್ನನುಭವಿಸುತ್ತಾನೆ.

---

[1] ಬೃಹದಾರಣ್ಯಕಉ. (ಅ. ೪. ಬ್ರಾಂ. ೩-೨೧)

[2] ಶಿವಾದ್ವೈತ ಪರಿಭಾಷಾ. ಪು. ೭೪.

" ಆಚಾರೇ ದಿವ್ಯಲಿಂಗೇ ನಿರುಪಮ ನಿಜಭಕ್ತ ಸ್ಥಲಾಗ್ರ್ಯೈಕ್ಯಭಾಜಿ
ಘ್ರಾಣಸ್ಥೇ ಚಿತ್ತಹಸ್ತೇನ ಚ ಘನಸುಖಿತೌ ಕ್ರಿಯಾಭಕ್ತಿಯುಕ್ತೇ ।
ಘ್ರಾತವ್ಯಂ ದ್ರವ್ಯಪುಷ್ಪಾರ್ಪಣ ವಿಧಾನೋಪದಿಷ್ಟಂ ಸಮರ್ಪ್ಯ
ಪ್ರಾಯಸ್ಸದ್ಭಕ್ತಿಪೂರ್ಣಸ್ಸ್ವಯಮನುಯಮಿಹ ಗಂಧ ಪ್ರಸಾದಂ ಭಜೇತ ॥ ೪೫ ॥

**ಮಾಹೇಶನು** ಜ್ಞಾನಶಕ್ತಿಯಿಂದ ಕೂಡಿದ ಗುರುಲಿಂಗಕ್ಕೆ, ನೈಷ್ಠಿಕಭಕ್ತಿಯಿಂದ ಸುಬುದ್ಧಿಹಸ್ತದಿಂದ "ಮ"ಕಾರ ಮಂತ್ರವನ್ನು ಸ್ಮರಿಸುತ್ತ, ರಸಪದಾರ್ಥವನ್ನು ರಸನೇಂದ್ರಿಯಮುಖ ದಲ್ಲಿ ಸಮರ್ಪಿಸಿ, ತತ್ಪ್ರಸಾದ ಭೋಗಿಯಾಗಿ ಆನಂದಿಸುತ್ತಾನೆ.

ಸ್ವಾಂಗೇ ಮಾಹೇಶ್ವರಾತ್ಮನ್ಯನುಪಮಸಹಜಜ್ಞಾನಶಕ್ತಿಪ್ರಯುಕ್ತೇ
ಜಿಹ್ವಾಸ್ಯೇ ಸುಪ್ರಸಿದ್ಧೇ ಪರತರ ಗುರುಲಿಂಗಾಭಿಧೇ ಸಂಸ್ಥಿತೇಽಸ್ಮಿನ್ ।
ನಿಷ್ಠಾ ಭಕ್ತಿ ಪ್ರಭಾವಪ್ರಣಿಹಿತ ಸುಮಹಾಬುದ್ಧಿಹಸ್ತೇನ ವಿದ್ವಾನ್
ರಸ್ಯಂ ದ್ರವ್ಯಂ ಸಮರ್ಪ್ಯ ಸ್ವಯಮಮಲರಸಾಖ್ಯಂ ಪ್ರಸಾದಂ ಭಜೇತ ॥ ೪೬ ॥

**ಪ್ರಸಾದಿಯು** ಇಚ್ಛಾಶಕ್ತಿಯಿಂದ ಕೂಡಿದ ಶಿವಲಿಂಗಕ್ಕೆ, ಸಾವಧಾನ ಭಕ್ತಿಯಿಂದ, ನಿರ ಹಂಕಾರಹಸ್ತದಿಂದ ರೂಪಪದಾರ್ಥವನ್ನು "ಶಿ" ಕಾರಮಂತ್ರವನ್ನು ಸ್ಮರಿಸುತ್ತಾ ನೇತ್ರೇಂದ್ರಿಯ ಮುಖ ದಲ್ಲಿ ಸಮರ್ಪಿಸಿ, ತತ್ಪ್ರಸಾದವನ್ನು ಭೋಗಿಸಿ ಆನಂದಿಸುತ್ತಾನೆ.

ಯೋಽಸೌ ನಿತ್ಯಂ ಪ್ರಸಾದಿಸ್ಥಲ ಪರಮಪದ ಪ್ರಾಪ್ತದಿವ್ಯಾಂಗಭಾಜಿ
ಸ್ವೇಚ್ಛಾಖ್ಯಶಕ್ತಿ ಪ್ರಯುಕ್ತೇ ದೃಶಿ ಜಗತಿಮುಖೇ ಪಾಣಿನಾಹಂಕೃತೇನ ।
ಸಾಕ್ಷಾಲ್ಲಿಂಗೇ ಶಿವಾಖ್ಯೇ ಸವಿನಯ ಮವಧಾನಾತ್ಮನಾ ಭಕ್ತಿಯುಕ್ತೋ
ದ್ರಷ್ಟವ್ಯಾಂಶಂ ಸಮರ್ಪ್ಯಾರ್ಪಣವಿನಿಹಿತ ರೂಪಪ್ರಸಾದಂ ಭಜೇತ ॥ ೪೭ ॥

**ಪ್ರಾಣಲಿಂಗಿಯು** ಆದಿಶಕ್ತಿಯುಕ್ತವಾದ ಜಂಗಮಲಿಂಗಕ್ಕೆ, ಅನುಭವಭಕ್ತಿಯಿಂದ ಸುಮನೋಹಸ್ತದಿಂದ ಸ್ಪರ್ಶಪದಾರ್ಥವನ್ನು "ವಾ" ಕಾರಮಂತ್ರವನ್ನು ಸ್ಮರಿಸುತ್ತಾ ತ್ವಗಿಂದ್ರಿಯ ಮುಖದಲ್ಲಿ ಸಮರ್ಪಿಸಿ, ತತ್ಪ್ರಸಾದ ಭೋಗಿಯಾಗಿ ಆನಂದಿಸುತ್ತಾನೆ.

ಸಂಸಕ್ತೇ ಪ್ರಾಣಲಿಂಗಿಸ್ಥಲಸಹಿತ ನಿಜಾಂಗೇ ಮನಃಪಾಣಿ ನಾಸೌ
ಲಿಂಗೇಸಾಕ್ಷಾಚ್ಚರಾಖ್ಯೇ ತ್ವಚಿ ಜಗತಿಮುಖೇ ಹ್ಯಾದಿಶಕ್ತಿಪ್ರಯುಕ್ತೇ ।
ಸ್ಪ್ರಷ್ಟವ್ಯಂಚಾರ್ಪಯಿತ್ವಾ ಸ್ವಯಮನುಭವಭಕ್ತಿಪ್ರಭಾವೋಪಪನ್ನೋ
ನಿತ್ಯಂ ಸ್ಪರ್ಶ ಪ್ರಸಾದಂ ನಿರತಿಶಯಸುಖಂ ತತ್ತ್ವವೇತ್ತಾ ಭಜೇತ ॥ ೪೮ ॥

**ಶರಣನು** ಪರಾಶಕ್ತಿಯುಕ್ತವಾದ ಪ್ರಸಾದಲಿಂಗಕ್ಕೆ ಆನಂದಭಕ್ತಿಯಿಂದ ಸುಜ್ಞಾನಹಸ್ತ ದಿಂದ ಶಬ್ದ ಪದಾರ್ಥವನ್ನು "ಯ" ಕಾರ ಮಂತ್ರವನ್ನು ಸ್ಮರಿಸುತ್ತಾ ಶ್ರೋತ್ರೇಂದ್ರಿಯ ಮುಖದಲ್ಲಿ ಸಮರ್ಪಿಸಿ, ತತ್ಪ್ರಸಾದ ಭೋಗಿಯಾಗಿ ಆನಂದಿಸುತ್ತಾನೆ.

ಲಿಂಗೇ ಸಾಕ್ಷಾತ್ಪ್ರಸಾದೇ ವಿಮಲ ಶರಣ ಸಂಜ್ಞಾಂಗ ಸಂಸ್ಥಾಪಿತೇಽಸ್ಮಿನ್
ಶ್ರೋತವ್ಯಂ ಶ್ರೋತ್ರವಕ್ತ್ರೇ ನಿಖಿಲಮಿಹ ಪರಾಶಕ್ತಿಯುಕ್ತೇ ಸಮರ್ಪ್ಯ ।
ಆನಂದಾಕಾರ ಭಕ್ತಿಸ್ಫುಟತರ ಪರಮಜ್ಞಾನ ಹಸ್ತೇನ ಸೋಽಯಂ
ಶಬ್ದಾಖ್ಯಂ ತತ್ಪ್ರಸಾದಂ ಸ್ವಯಮವಿರತಮತ್ಯಾಶ್ರಮಸ್ಥೋ ಭಜೇತ ॥ ೪೯ ॥

ಐಕ್ಯನು ಚಿಚ್ಛಕ್ತಿಯುಕ್ತವಾದ ಮಹಾಲಿಂಗಕ್ಕೆ ಸಮರಸ ಭಕ್ತಿಯಿಂದ ಸದ್ಭಾವಹಸ್ತದಿಂದ ತೃಪ್ತಿ ಪದಾರ್ಥವನ್ನು ಪ್ರಣವನನ್ನು ಸ್ಮರಿಸುತ್ತಾ ಮನಸ್ಸಿನ ಮುಖದಲ್ಲಿ ಸಮರ್ಪಿಸಿ, ತತ್ಪ್ರಸಾದವನ್ನು ಭೋಗಿಸಿ ಆನಂದಿಸುತ್ತಾನೆ.

ಐಕ್ಯಾಂಗಂ ಭಾಜಿಲಿಂಗೇ ಮಹತಿ ಹೃದಿಮುಖೇ ಚಿನ್ಮಹಾಶಕ್ತಿಯುಕ್ತೇ
ನಿತ್ಯಂ ಭಾವೇನ ಹಸ್ತೇನ ಚ ಸಮರಸ ಭಕ್ತಿಪ್ರಸಕ್ತಸ್ಸ್ವಯಂ ಸನ್ ।
ಸ್ಮರ್ತವ್ಯಂ ಚಾರ್ಪಯಿತ್ವಾ ವಿಶದ ಮತಿರವಶ್ಯಂ ಸದೈವಾರ್ಪಣೀಯಂ
ತಸ್ಮಾಲ್ಲಬ್ಧಂ ವಿಶುದ್ಧಂ ಘನತರ ಪರಿಣಾಮ ಪ್ರಸಾದಂ ಭಜೇತ ॥ ೫೦ ॥

ಹೀಗೆ ಸಮರ್ಪಿಸಿದ ಜೀವನು ಲಿಂಗಭೋಗೋಪಭೋಗಿಯಾದ್ದರಿಂದ ಜ್ಞಪ್ತಿಬ್ರಹ್ಮದಲ್ಲಿ ವಿಶ್ರಾಂತಿ ಹೊಂದಿರುವುದರಿಂದ ಅವನ ಶರೀರವೂ ಕೂಡ ಮಂತ್ರಲಿಂಗರೂಪವನ್ನು ತಳೆಯಿತು. ಅಲ್ಲಿಂದ ಮುಂದೆ ಶರೀರ ಅವಸಾನದವರೆಗೆ ಕ್ರಿಯಾಜ್ಞಾನ ಸಮುಚ್ಚಯದಿಂದ ಉಪಸಾನವೆಸಗುತ್ತಿರುವುದರಿಂದ ಶರೀರವನ್ನು ಬಿಡುವವರೆಗೆ ಲಿಂಗಾಂಗಸಾಮರಸ್ಯವು ನಿರಂತರವಾಗಿರುತ್ತದೆ.

"ಈ ಎಲ್ಲ ಉಪಾಸನವೂ ಇಷ್ಟಲಿಂಗದಲ್ಲಿ ನಟ್ಟ (ಕರಿಗೊಂಡ) ದೃಷ್ಟಿಯೋಗದ ಮೂಲಕ ಪ್ರಾಣಲಿಂಗವನ್ನು ಅನುಲಕ್ಷಿಸಿದ ಶಾಂಭವೀಮುದ್ರೆಯಿಂದ, ಶಿವಪಂಚಾಕ್ಷರೀ ಮಹಾಮಂತ್ರ ಜಪದಿಂದ ಸಿದ್ಧಿಸಿದ ಹೃದಯ ಕಮಲದಲ್ಲಿನ ಜ್ಯೋತಿರ್ಲಿಂಗಾನುಸಂಧಾನದಿಂದ ಪಶ್ಚಿಮ ಚಕ್ರದಲ್ಲಿ ವಿರಾಜಮಾನವಾಗಿರುವ ಭಾವಲಿಂಗದ, ಸಮರಸಾನಂದಾನುಭವವು ಲಭಿಸುತ್ತದೆ. ಆದ್ದರಿಂದ ಅನುಸಂಧಾನವೆಂಬ ಅಂತರ್ಲಿಂಗಧ್ಯಾನಬಲದಿಂದ ಈ ಉಪಾಸನವು ನಡೆಯುತ್ತದೆ."

ಹೀಗೆ ಹೃದಯ ಕಮಲದಲ್ಲಿ ಜ್ಯೋತಿರ್ಲಿಂಗಾನುಸಂಧಾನ ಮಾಡುತ್ತಿರುವ ಶಿವಯೋಗಿಗೆ ಸ್ವಸ್ವರೂಪ ಸಾಕ್ಷಾತ್ಕಾರದಿಂದ ಅಣಿಮಾದಿ ಅಷ್ಟಸಿದ್ಧಿಗಳು ಕೈವಶವಾಗಿರುತ್ತವೆ. ಆದರೂ ಅವುಗಳಲ್ಲಿ ಆತ ಆಸಕ್ತಿಬಿಟ್ಟು, ನಿರಂತರವೂ ಜ್ಯೋತೀರ್ಲಿಂಗಾನುಸಂಧಾನ ಮಾಡುತ್ತಿರುವುದರಿಂದ, ಆ ಶಿವಯೋಗಿಗೆ ತ್ರಿಲೋಚನತ್ವ-ನೀಲಕಂಠತ್ವ-ಉಮಾ ಸಹಾಯಕತ್ವವೇ ಮೊದಲಾದ ಮಂಗಲಸ್ವರೂಪವೂ ಸ್ವಾನಂದಾನುಭವವೂ ಆದ ಶಿವತತ್ತ್ವವು ಸಾಕ್ಷಾತ್ಕಾರವಾಗುತ್ತದೆ. ಅನಂತರ ತಮಃಪರವೂ, ನಿಷ್ಕಲ ಸಚ್ಚಿದಾನಂದಸ್ವರೂಪವೂ ಆದ ಘನಲಿಂಗದಲ್ಲಿ ಐಕ್ಯವಾಗಿ ಲೋಲಾಯಮಾನನಾಗಿರುವ ಆ ಶಿವಯೋಗಿಯು ಹಿಂದೆ ಹೇಳಿದ ಶಿಖಿ-ಕರ್ಪೂರನ್ಯಾಯದಂತೆ ಪರಬ್ರಹ್ಮ ಸ್ವರೂಪವೇ ಆಗುತ್ತಾನೆ.

ಹೀಗೆ ಅಂಗಸ್ಥಲ ಪ್ರತಿಪಾದ್ಯನಾದ ಭಕ್ತನು ಲಿಂಗಸ್ಥಲ ಪ್ರತಿಪಾದ್ಯವಾದ ಆಚಾರಲಿಂಗದಲ್ಲಿಯೂ, ಮಾಹೇಶ್ವರನು ಗುರುಲಿಂಗದಲ್ಲಿಯೂ, ಪ್ರಸಾದಿಯು ಶಿವಲಿಂಗದಲ್ಲಿಯೂ, ಪ್ರಾಣಲಿಂಗಿಯು ಜಂಗಮಲಿಂಗದಲ್ಲಿಯೂ, ಶರಣನು ಪ್ರಸಾದಲಿಂಗದಲ್ಲಿಯೂ, ಐಕ್ಯನು ಮಹಾಲಿಂಗದಲ್ಲಿಯೂ ಸಮರಸನಾಗುತ್ತಾನೆ.

ಇದರಂತೆ ಆಚಾರಲಿಂಗವು ಗುರುಲಿಂಗದಲ್ಲಿಯೂ, ಗುರುಲಿಂಗವು ಶಿವಲಿಂಗದಲ್ಲಿಯೂ, ಶಿವಲಿಂಗವು ಜಂಗಮಲಿಂಗದಲ್ಲಿಯೂ, ಜಂಗಮಲಿಂಗವು ಪ್ರಸಾದಲಿಂಗದಲ್ಲಿಯೂ, ಪ್ರಸಾದಲಿಂಗವು ಮಹಾಲಿಂಗರೂಪ ಪರಶಿವ ಘನಲಿಂಗದಲ್ಲಿಯೂ ಸಾಮರಸ್ಯವನ್ನು ಹೊಂದಿ, ಐಕ್ಯನು ಶಿಖಿಯುಂಡ ಕರ್ಪುರದಂತೆ ಅಖಂಡಾನಂದವನ್ನು ಅನುಭವಿಸುತ್ತಾನೆ.

ಯಥಾನದ್ಯಃ ಸ್ಯಂದಮಾನಾಃ ಸಮುದ್ರೇsಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್॥

(– ಮುಂಡಕ ೩.೨.೮)

ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಃ ।
ಪರೇ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ದೃಶ್ಯತೇ ॥

(– ಸಿ. ಶಿ. ಪ. ೨೦.೬೧)

ಹೀಗೆ ಪರಾಭಕ್ತಿಯು ಶಿವಾದ್ವೈತರೂಪವಾಗಿ ಪರಿಣಾಮಹೊಂದಿ ಸಾಧಕನನ್ನು ಪರಶಿವನಲ್ಲಿ ಸಮರಸಗೊಳಿಸುತ್ತದೆ.

**ಈ ವಿಷಯದಲ್ಲಿ ಭಾಷ್ಯಕಾರರ ಸಮ್ಮತಿ**

ಶ್ರೀಪತಿಪಂಡಿತಭಗವತ್ಪಾದಾಚಾರ್ಯರು ಸಂಧ್ಯಾಧಿಕರಣದಲ್ಲಿ "ದೇಹಯೋಗಾದ್ವಾ ಸೋsಪಿ" (೩.೨.೫) ಎಂಬ ಸೂತ್ರಭಾಷ್ಯದಲ್ಲಿ "ಶಕ್ತಿಪಾತ" ಮೊದಲ್ಗೊಂಡು ಐಕ್ಯಸ್ಥಲದವರೆಗೆ ಷಟ್‌ಸ್ಥಲಗಳ ಸ್ವರೂಪವನ್ನು ಚೆನ್ನಾಗಿ ನಿರೂಪಿಸಿದ್ದಾರೆ. ಉದಾ– "ಶಕ್ತಿಪಾತವು ತೀವ್ರ-ಮಂದ ಮುಂತಾದ ಭೇದದಿಂದ ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಆರು ಬಗೆಯಾಗುತ್ತದೆ. ಪತಿ-ಪಶು-ಪಾಶ ಮುಂತಾದ ಪರಮರಹಸ್ಯವನ್ನು ಪ್ರಕಾಶಪಡಿಸುವ ನಿಗಮ ಆಗಮರೂಪ ಉಭಯವೇದಾಂತ ಶಾಸ್ತ್ರಶ್ರವಣ-ಮನನ-ನಿದಿಧ್ಯಾಸನ ಕ್ರಮದಿಂದ ಖಂಡಾಕಾರವಾಕ್ಯಜನ್ಯ ಬುದ್ಧಿವೃತ್ತಿಯಲ್ಲಿ ನಿತ್ಯನಿರತಿಶಯಾನಂದಾತ್ಮಕ ಮಹೇಶ್ವರ ತತ್ತ್ವವು ಮೊದಲನೆಯ ಭಕ್ತಸ್ಥಲದಲ್ಲಿ ಆವಿರ್ಭಾವವಾಗುತ್ತದೆ.

..........ಐಕ್ಯಸ್ಥಲದಲ್ಲಿ ಹೇಳಲಾಗಿದೆ. ಈ ಬಗೆಯ ಶಕ್ತಿಪಾತಗಳಲ್ಲಿ ಪಿಪೀಲಿಕಾ-ಮರ್ಕಟ-ಪಕ್ಷಿ-ಗೋ-ಮತ್ಸ್ಯ-ಕಚ್ಛಪ ನ್ಯಾಯದಿಂದ ಸ್ವಾಭಾವಿಕ ಜೀವಭಾವನಿವೃತ್ತಿಪೂರ್ವಕ ಶಿವತ್ವಪ್ರಾಪ್ತಿಯೇ ಮೋಕ್ಷ ಎಂಬುವವರೆಗೆ ಷಟ್‌ಸ್ಥಲಸಿದ್ಧಾಂತಸ್ವರೂಪವು ವರ್ಣಿತವಾಗಿದೆ." (ಶ್ರೀಕರಭಾಷ್ಯ ಸಂ. II. ಪು. ೨೦೭-೨೦೯)

ಇದರಂತೆ "ತದಂತರ ಪ್ರತಿಪತ್ತ್ಯಧಿಕರಣ" (೩-೧-೨) ದಲ್ಲಿ "ಭಾಕ್ತಂ ವಾ ನಾತ್ಮವಿತ್ತ್ವಾತ್ತಥಾ ವಾ ದರ್ಶಯತಿ" (೩.೧.೭) ಎಂಬ ಸೂತ್ರಭಾಷ್ಯದಲ್ಲಿ "ಅತೋಭಕ್ತಾನಾಂ" ಎಂದು ಆರಂಭಿಸಿ "ಭಕ್ತರಿಗೆ ಭಕ್ತಾದಿಶರಣಾಂತವಾದ ಐದು ಸ್ಥಳಗಳಲ್ಲಿ ಅವರಿಗೆ ಜೀವಭಾವವಿರುವುದರಿಂದ ಸ್ವಾಮಿ-ಭೃತ್ಯನ್ಯಾಯದಂತೆ ಸ್ವಾಭಾವಿಕ ದ್ವೈತಸಿದ್ಧಿಯೂ ಐಕ್ಯಸ್ಥಲದಲ್ಲಿ 'ಯಥಾನದ್ಯ' ಮುಂತಾದ ನೂರಾರು ಶ್ರುತಿಗಳಿಂದ ಸಿದ್ಧವಾದ 'ನದೀ-ಸಮುದ್ರದಂತೆ ಜೀವ-ಬ್ರಹ್ಮರಿಗೆ ಐಕ್ಯವಾದ್ದರಿಂದ ಅದ್ವೈತವೂ ಸಿದ್ಧಿಸುತ್ತದೆ ಎಂಬುದೇ ಸಿದ್ಧಾಂತ." (ಸಂ. II. ಪು. ೧೭೭)

ಎರಡನೆಯದಾಗಿ ಶ್ರೀಕರಭಾಷ್ಯದಲ್ಲಿ ಜನ್ಮಾಧಿಕರಣದ ಕಡೆಯಲ್ಲಿ ಶೈವಾಗಮೋಕ್ತವಾದ ಪರಶಿವಾಂಗಭೂತ ಸರ್ವಜ್ಞತ್ವಾದಿ ಷಡಂಗಗಳಿಗೆ ಷಟ್‌ಸ್ಥಲಾತ್ಮಕತ್ವವು ಪ್ರದರ್ಶಿತವಾಗಿದೆ ಹೇಗೆಂದರೆ–

ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿಬೋಧತ್ವ, ಸ್ವತಂತ್ರತ್ವ, ಅಲುಪ್ತಶಕ್ತಿತ್ವ ಮತ್ತು ಅನಂತಶಕ್ತಿತ್ವಗಳು ವಿಭುವಾದ ಪರಶಿವನ ಆರು ಅಂಗಗಳು

ಇವುಗಳಲ್ಲಿ– ಭಕ್ತಸ್ಥಲವು –ಸರ್ವಜ್ಞತ್ವ
ಮಾಹೇಶ್ವರಸ್ಥಲವು – ನಿತ್ಯತೃಪ್ತತ್ವ
ಪ್ರಸಾದಿಸ್ಥಲವು – ಅನಾದಿಬೋಧತ್ವ
ಪ್ರಾಣಲಿಂಗಿಸ್ಥಲವು – ಸ್ವತಂತ್ರಶಕ್ತಿತ್ವ
ಶರಣಸ್ಥಲವು – ಅಲುಪ್ತಶಕ್ತಿತ್ವ
ಐಕ್ಯಸ್ಥಲವು – ಅನಂತಶಕ್ತಿತ್ವ

ಎಂದು ಅನ್ವಯಗೊಳಿಸಲಾಗಿದೆ.

ಮೂರನೆಯದಾಗಿ ಶ್ರೀಕರಭಾಷ್ಯ-ಪ್ರಥಮಪಾದದಲ್ಲಿ ಆಚಾರಾದಿ-ಷಟ್‌ಲಿಂಗಗಳ ಪ್ರತಿಪಾದನವನ್ನು ಒಂದೊಂದು ಸೂತ್ರಭಾಷ್ಯದಲ್ಲಿ ಚೆನ್ನಾಗಿ ಪ್ರತಿಪಾದಿಸಲಾಗಿದೆ. ಆ ಕ್ರಮವು ಹೀಗಿದೆ––

೧) ಅಂತಸ್ತದ್ಧರ್ಮೋಪದೇಶಾತ್ (೧.೧.೨೧) ಎಂಬ ಸೂತ್ರಭಾಷ್ಯದಲ್ಲಿ ಪರಶಿವಬ್ರಹ್ಮಕ್ಕೆ ಮಹಾಲಿಂಗಾತ್ಮಕತ್ವವನ್ನೂ,

೨) ಆಕಾಶಸ್ತಲ್ಲಿಂಗಾತ್ (೧-೧-೨೩) ಎಂಬಲ್ಲಿ ಪ್ರಸಾದಲಿಂಗಾತ್ಮಕತ್ವವನ್ನೂ,

೩) ಅತ ಏವ ಪ್ರಾಣಃ (೧-೧-೨೪) ಎಂಬಲ್ಲಿ ಚರಲಿಂಗಾತ್ಮಕತ್ವವನ್ನೂ,

೪) ಜ್ಯೋತಿಶ್ಚರಣಾಭಿಧಾನಾತ್ (೧-೧-೨೫) ಎಂಬಲ್ಲಿ ಶಿವಲಿಂಗಾತ್ಮಕತ್ವವನ್ನೂ,

೫) ಛಂದೋಽಭಿಧಾನಾತ್ (೧-೧-೨೬) ಎಂಬಲ್ಲಿ ಗುರುಲಿಂಗಾತ್ಮಕತ್ವವನ್ನೂ,

೬) ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ (೧-೧-೨೭) ಎಂಬಲ್ಲಿ ಪ್ರಸಾದಲಿಂಗಾತ್ಮಕತ್ವವನ್ನೂ ಹೇಳಿ,

೭) ಪ್ರಾಣಸ್ತಥಾನುಗಮಾತ್ (೧-೧-೨೮) ಎಂಬಲ್ಲಿ ಪ್ರಾಣಶಬ್ದಕ್ಕೆ ಇಷ್ಟಲಿಂಗಾತ್ಮಕತ್ವವನ್ನು ಸೂಚಿಸಲಾಗಿದೆ.

೮) ಜೀವಮುಖ್ಯಪ್ರಾಣಲಿಂಗಾತ್ (೧-೧-೩೨) ಎಂಬಲ್ಲಿ ಮಾತ್ರ ಇಷ್ಟ-ಪ್ರಾಣ-ಭಾವ-ಲಿಂಗರೂಪತ್ರಿವಿಧೋಪಾಸನವನ್ನು ಬಹುಮಾರ್ಮಿಕವಾಗಿ ಪ್ರತಿಪಾದಿಸಲಾಗಿದೆ.

ಇದರಂತೆ ಸರ್ವತ್ರಪ್ರಸಿದ್ಧ್ಯಧಿಕರಣದಲ್ಲಿ ' ನಿಧನಪತಯೇ ನಮಃ ' ಎಂದು ಆರಂಭಿಸಿ -ಪರಮಲಿಂಗಾಯ ನಮಃ' ಎಂಬುವವರೆಗೆ ದಶವಿಧ ಲಿಂಗಗಳನ್ನು ಹತ್ತು ಶುತ್ರಿಗಳಿಂದ ಪ್ರತಿಪಾದಿಸಿರುವ ಕ್ರಮವು ಮಹತ್ವಪೂರ್ಣವಾಗಿದೆ. ಹೇಗೆಂದರೆ–

೧) ನಿಧನಪತಯೇ ನಮಃ – ನಿಷ್ಕಲಶಿವತತ್ತ್ವ
೨) ಊರ್ಧ್ವಾಯ ನಮಃ – ಸದಾಶಿವತತ್ತ್ವ
೩) ಹಿರಣ್ಯಾಯ ನಮಃ – ಪಶ್ಚಿಮ-ಚಕ್ರಗತ-ಸ್ವಯಂಪ್ರಕಾಶಕಭಾವಲಿಂಗ
೪) ಸುವರ್ಣಾಯ ನಮಃ – ಶಿಖಾಚಕ್ರದಲ್ಲಿರುವ ಚಿತ್ಕಲಾತ್ಮಕ-ಪ್ರಾಣಲಿಂಗ
೫) ದಿವ್ಯಾಯ ನಮಃ – ಸಹಸ್ರಾರಚಕ್ರಸ್ಥ ಗುಣತ್ರಯ ಪ್ರಾಚುರ್ಯಾತ್ಮಕ ಇಷ್ಟಲಿಂಗ
೬) ಭವಾಯ ನಮಃ – ಆಗ್ನೇಯ-ಚಕ್ರದಲ್ಲಿನ ಮಹಾಲಿಂಗ

೭) ಶರ್ವಾಯ ನಮಃ – ವಿಶುದ್ಧಚಕ್ರದಲ್ಲಿನ ವ್ಯೋಮಾತ್ಮಕ-ಪ್ರಸಾದಲಿಂಗ

೮) ಶಿವಾಯ ನಮಃ – ಅನಾಹತಚಕ್ರದಲ್ಲಿನ ಪವನತತ್ತ್ವಾತ್ಮಕ ಚರಲಿಂಗ

೯) ಜ್ವಲಾಯ ನಮಃ – ಮಣಿಪೂರಕ-ಚಕ್ರಸ್ಥ-ತೇಜಸ್ತತ್ತ್ವಾತ್ಮಕ ಶಿವಲಿಂಗ

೧೦) ಆತ್ಮಾಯ ನಮಃ – ಸ್ವಾಧಿಷ್ಠಾನ-ಚಕ್ರಸ್ಥ-ಜಲತತ್ತ್ವಾತ್ಮಕ ಗುರುಲಿಂಗ

೧೧) ಪರಮಾಯ ನಮಃ – ಕ್ಷಿತ್ಯಾತ್ಮಕ-ಆಧಾರಚಕ್ರಸ್ಥ-ಆಚಾರಲಿಂಗ

ಈರೀತಿಯಾಗಿ ಶ್ರುತಿಪ್ರಮಾಣಗಳಿಂದ ದಶವಿಧ ಲಿಂಗಗಳು ನಿರೂಪಿಸಲ್ಪಟ್ಟಿವೆ.

ಹೀಗೆ ದಶವಿಧ-ಲಿಂಗಾತ್ಮಕವೂ, ಹಸ್ತಪೀಠಗತವೂ ಆದ ತನ್ನ ಇಷ್ಟಲಿಂಗಕ್ಕೆ ಪಂಚಬ್ರಹ್ಮಾತ್ಮಕತ್ವವನ್ನೂ. ಷಟ್‌ತ್ರಿಂಶತ್ತತ್ತ್ವಾತ್ಮಕತ್ವವನ್ನೂ ನಿರೂಪಿಸಲಾಗಿದೆ.

ಇದೇ ವಿಚಾರವು "ಲಿಂಗಧಾರಣಚಂದ್ರಿಕೆ" (ಪು. ೬೮-೭೩) ಯಲ್ಲಿ ಶ್ರೀಕರಭಾಷ್ಯದಲ್ಲಿದ್ದಂತೆಯೇ ಉದ್ಧರಿಸಲಾಗಿದೆ. ವೀರಶೈವಾನಂದಚಂದ್ರಿಕೆ (ಪು. ೩೯-೪೦) ಮತ್ತು ಕ್ರಿಯಾಸಾರ (ಉ. ೧. ೨೭೦-೨೪೬) ಇವುಗಳಲ್ಲಿಯೂ ಈ ವಿಧಾನವು ಸ್ವೀಕೃತವಾಗಿದೆ.

## ಸಾಧನಕ್ರಮ

ವೀರಶೈವವು ಸಿದ್ಧಾಂತ-ವಿಭಾಗದಲ್ಲಿ ಹೇಗೆ ದ್ವೈತಾದ್ವೈತಗಳಿಗೆ ಸಮನ್ವಯವನ್ನು ಒಪ್ಪಿದೆಯೋ, ಅದರಂತೆ ಸಾಧನಕ್ರಮದಲ್ಲಿಯೂ ಕೂಡ ಜ್ಞಾನ-ಕರ್ಮಗಳಿಗೆ ಸಮಸಮುಚ್ಚಯವನ್ನು ಅಂಗೀಕರಿಸಿದೆ. ಲಿಂಗಾಂಗಸಾಮರಸ್ಯಾತ್ಮಕ-ಮುಕ್ತಿಯಲ್ಲಿ ಜ್ಞಾನ-ಕರ್ಮಗಳಿಗೆ ಸಮಸಮುಚ್ಚಯ ಅಗತ್ಯ. ಆಚಾರ್ಯರೇಣುಕರು– "ವಿದ್ವಾಂಸರಿಗೆ ಜ್ಞಾನವು ಸಿದ್ಧಿಸಿದ್ದರೂ ಕೂಡ ಕರ್ಮದ ಅಗತ್ಯವೂ ಇದೆ. ಆ ಕರ್ಮವು ನಿಷ್ಕಾಮವಾಗಿರಬೇಕು. ಅಂತಹ ಕರ್ಮವನ್ನು ಬಿಡಬಾರದು." ಎಂದಿದ್ದಾರೆ.[1]

ಅದನ್ನೇ ಆಚಾರ ಎನ್ನುತ್ತೇವೆ. "ಆಚಾರವು ಎಲ್ಲರಿಗೂ ಬೇಕು. ಅದೇ ಮಾನವತೆಗೆ ಭೂಷಣ. ಆಚಾರಹೀನನು ಜನನಿಂದೆಗೆ ಗುರಿಯಾಗುತ್ತಾನೆ. ಪರಮಶಿವನು ಆಚಾರವಂತನಾದ ಜ್ಞಾನಿಗೇ ಪ್ರಸನ್ನನಾಗುವುದು. ಆದ್ದರಿಂದ ಜ್ಞಾನಿಯು ಆಚಾರವಂತನಾಗಿರಬೇಕು."[2]

ತಲೆನೋವು ವಾಸಿಯಾಗುವುದಕ್ಕೆ ತಕ್ಕ ಔಷಧ ಬೇಕು. ಆದರೆ ಅದಕ್ಕೆ ಕೇವಲ ಔಷಧ ಜ್ಞಾನವಿದ್ದರೆ ಸಾಲದು. ಜೊತೆಗೆ ಆ ಔಷಧವನ್ನು ತಂದು ಲೇಪಿಸಲೂ ಬೇಕು. ಆಗಲೇ ತಲೆನೋವು ವಾಸಿಯಾಗುವುದು. ಔಷಧಜ್ಞಾನವಿಲ್ಲದೆ ಕೇವಲ ಲೇಪನವೂ ಆಗದಮಾತು. ಜ್ಞಾನ ಮತ್ತು ಕರ್ಮ (ಆಚಾರ) ಇವೆರಡೂ ಸೇರಿಯೇ ಕಾರ್ಯ ಸಿದ್ಧಿಸುವುದು. ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ನಡೆದರೆ ನಿತ್ಯಸುಖವೆಂಬ ಮುಕ್ತಿ ದೊರೆಯುತ್ತದೆ. ಶಾಸ್ತ್ರದಲ್ಲಿ "ಅಂಧ-ಪಂಗುನ್ಯಾಯ" ವನ್ನು ಇದಕ್ಕೆ ಉದಾಹರಣೆಯಾಗಿ ಕೊಡಲಾಗಿದೆ.

---

[1] ಸಿ. ಶಿ. ಪ. ೧೬.

[2] ಸಿ. ಶಿ. ಪ. ೧೬.

ಕುರುಡನಿಗೆ ಕಾಲಿದ್ದರೂ ದಾರಿ ಕಾಣುತ್ತಿಲ್ಲ ; ಕುಂಟನಿಗೆ ದಾರಿ ಕಾಣುತ್ತದೆ ; ಆದರೆ ಹೋಗಲು ಅವನಿಗೆ ಕಾಲೇ ಇಲ್ಲ. ಆವರಿಬ್ಬರೂ ತಾವು ಸೇರಬೇಕೆಂದಿರುವ ಗುರಿ ಒಂದೇ. ಅವಕ್ಕಾಗಿ ಅವರಿಬ್ಬರೂ ಹೊಂದಿಕೊಂಡು, ಕುರುಡನ ಮೇಲೆ ಕುಂಟನು ಕುಳಿತು ಹಾದಿ ತೋರಿದಲ್ಲಿ ಇಬ್ಬರೂ ತಾವು ಸೇರಬೇಕೆಂದಿರುವ ನೆಲೆ ಮುಟ್ಟಬಲ್ಲರು. ಅದರಂತೆ ಇಲ್ಲಿ ಕೇವಲ ಜ್ಞಾನವು ಕುಂಟನಿದ್ದಂತೆ. ಕೇವಲ ಕರ್ಮವು ಕುರುಡನಿದ್ದಂತೆ. ಇವೆರಡೂ ಒಂದಾಗಿ ಪ್ರವೃತ್ತವಾದಾಗ ಶಿವಪ್ರಸಾದ ರೂಪವಾದ ಇಷ್ಟಾರ್ಥವು ಸಿದ್ಧಿಸುತ್ತದೆ.

"ಅವನನ್ನು ಜ್ಞಾನದಿಂದ ಅರಿತವನೇ ಅಮೃತನಾಗುವನು. ಜ್ಞಾನವನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲ"[1] "ಕರ್ಮವಾಗಲಿ, ಪ್ರಜೆಯಾಗಲಿ, ಧನವಾಗಲಿ ಮುಕ್ತಿಗೆ ಸಾಧನವಲ್ಲ."[2] ಮುಂತಾದ ಶ್ರುತಿಗಳಲ್ಲಿ ಕರ್ಮವನ್ನು ನಿಂದಿಸಿರುವುದರಿಂದ ಜ್ಞಾನದೊಡನೆ ಕರ್ಮವನ್ನು ಹೇಗೆ ಸೇರಿಸುತ್ತೀರಿ ? ಎಂದು ಕೆಲವರ ಶಂಕೆ. ಅದಕ್ಕೆ ಇದು ಸಮಾಧಾನ– "ಶ್ರುತಿಗಳಲ್ಲಿ ಬರುವ ಕರ್ಮನಿಂದೆಯು ಪಶುಕರ್ಮವನ್ನು ಕುರಿತದ್ದು ; ಪತಿಕರ್ಮವನ್ನು ಕುರಿತದ್ದಲ್ಲ ಪಶುಕರ್ಮವೆಂದರೆ ಸ್ವರ್ಗಸ್ವಾರಾಜ್ಯಾದಿ-ಫಲವನ್ನು ಬಯಸಿ ಮಾಡುವ ಹಿಂಸಾತ್ಮಕವಾದ ಯಜ್ಞ. ಯಾಗ ಮುಂತಾದ ಕರ್ಮಗಳು ಪತಿಕರ್ಮವು ಶಿವಪ್ರೀತ್ಯರ್ಥ-ವಾಗಿ ಮಾಡುವ ಧ್ಯಾನ, ಪೂಜೆ, ಜಪ, ತಪಸ್ಸು, ಪರೋಪಕಾರ ಮುಂತಾದವು. ಈ ಬಗೆಯ ಪತಿಕರ್ಮಗಳಿಂದ ಕೂಡಿದ ಜ್ಞಾನವು ಮೋಕ್ಷಕ್ಕೆ ಮೂಲ ಎಂಬುದೇ ಸಿದ್ಧಾಂತ. ಇದನ್ನೇ ರೇಣುಕರು ಪಂಚಯಜ್ಞಗಳು ಎಂದಿದ್ದಾರೆ–

### ವೀರಶೈವರ ಪಂಚಯಜ್ಞಗಳು

'ತಪಸ್ಸು, ಕರ್ಮ, ಜಪ, ಧ್ಯಾನ ಮತ್ತು ಜ್ಞಾನ ಇವುಗಳಿಗೆ ಪಂಚಯಜ್ಞಗಳೆಂದು ಹೆಸರು. ಇವುಗಳಲ್ಲಿ ಶಿವನಿಗಾಗಿ ಅಥವಾ ಒಳ್ಳೆಯ ಉದ್ದೇಶಕ್ಕಾಗಿ ಮಾಡುವ ದೇಹಶ್ರಮವೇ ತಪಸ್ಸು. ಕೃಚ್ಛ್ರ-ಚಾಂದ್ರಾಯಣ ಮುಂತಾದವುಗಳಲ್ಲ. ಕರ್ಮವು ಶಿವಾರ್ಚನೆ; ಬಾಹ್ಯವಾದ ಯಾಗಾದಿಗಳು ಕರ್ಮಗಳಲ್ಲ. ಪಂಚಾಕ್ಷರ (ಅಥವಾ ಪ್ರಣವ) ಪುರಶ್ಚರಣ ಅಥವಾ ರುದ್ರಾಧ್ಯಾಯ-ಪಾರಾಯಣಾದಿಗಳೇ ಜಪ ; ಸಂಪೂರ್ಣ ವೇದಾಧ್ಯಯನವಲ್ಲ. ಶಿವನ ರೂಪಚಿಂತನವೇ ಧ್ಯಾನ ; ಆತ್ಮಚಿಂತನವಲ್ಲ. ವೇದಸಮ್ಮತವಾದ ಶಿವಾಗಮಗಳ ಅರ್ಥವನ್ನು ಚೆನ್ನಾಗಿ ತಿಳಿಯುವುದೇ ಜ್ಞಾನ ; ಬೇರೆ ವಿಚಾರಗಳ ಜ್ಞಾನವಲ್ಲ. ಈ ಬಗೆಯ ಐದು ಯಜ್ಞಗಳನ್ನು ಭಕ್ತಿ (ಶಿವಾರ್ಪಣಬುದ್ಧಿ) ಯಿಂದ ಆಚರಿಸುವವನೇ ಭಕ್ತ.

ಶಿವದೀಕ್ಷೆಯನ್ನು ಗುರುಮುಖದಿಂದ ಪಡೆದ ಭಕ್ತನು ಮೇಲಿನ ಪಂಚಯಜ್ಞನಿರತನಾಗಬೇಕು. ಈ ಭಕ್ತನಿಗೆ **ಅಷ್ಟಾವರಣ ಮತ್ತು ಪಂಚಾಚಾರಗಳು** ಕರ್ತವ್ಯಗಳು. ಶ್ರೀಕರ ಭಾಷ್ಯದಲ್ಲಿ ಅಷ್ಟಾವರಣ ಮತ್ತು ಪಂಚಾಚಾರಗಳು ಶಿವದೀಕ್ಷಿತನಿಗೆ ಅತ್ಯಗತ್ಯ ; ಎಂದು ಹೇಳಲಾಗಿದೆ.

ಭಸ್ಮರುದ್ರಾಕ್ಷಕಂ ಲಿಂಗಂ ಗುರುರ್ಮಂತ್ರಂ ತಥಾ ಚರಃ ।
ಪಾದೋದಕಂ ಪ್ರಸಾದಶ್ಚ ಶೈವಾಷ್ಟಾವರಣಾನಿ ಹಿ ॥

(ಶ್ರೀಕರಭಾಷ್ಯ. ೧೯೬-೨೩೫)

---

[1] "ತಮೇವಂ ವಿದಿತ್ವಾ ಅತಿಮೃತ್ಯುಮೇತಿ ; ನಾನ್ಯಃ ಪಂಥಾ ವಿದ್ಯತೇಽಯನಾಯ"

[2] ನ ಕರ್ಮಣಾ ನ ಪ್ರಜಯಾ ಧನೇನ".

ವೈದಿಕಶಿವಾಗಮೋಕ್ತವಾದ ಸಂಸ್ಕಾರಗಳು ಶಿವದೀಕ್ಷೆ ಪಡೆದವರಿಗೆ ಮಾತ್ರ ; ಇತರರಿಗಲ್ಲ. "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರಭಾಷ್ಯದಲ್ಲಿ "ಅಥ" ಶಬ್ದಾರ್ಥ ನಿರೂಪಣೆ ಮಾಡುತ್ತಾ ಭಾಷ್ಯಕಾರರು- 'ಅಷ್ಟಾವರಣ ಪಂಚಾಚಾರಾಣಾಂ ಪೂರ್ವಭಾವಿತ್ವಂ' ಎಂದು ಶಿವಭಕ್ತನಾಗು ವುದಕ್ಕೆ ಮೇಲೆ ಹೇಳಿದ ಅಷ್ಟಾವರಣ ಮತ್ತು ಪಂಚಾಚಾರಗಳೇ ಹಿನ್ನೆಲೆ ಎಂದಿದ್ದಾರೆ. ವೀರಶೈವ ಅಧ್ಯಾತ್ಮಪುರುಷನಿಗೆ " ಅಷ್ಟಾವರಣಗಳೇ ಅಂಗಗಳು ; ಪಂಚಾಚಾರಗಳೇ ಪ್ರಾಣಗಳು ; ಷಟ್ ಸ್ಥಲವೇ ಆತ್ಮ ; " ಎಂದು ಹೇಳಲಾಗಿದೆ. ನೀಲಕಂಠಶಿವಾಚಾರ್ಯರೂ ಕೂಡ

" ಅಷ್ಟಾವರಣವಿಜ್ಞಾನೀ ಪಂಚಾಚಾರಪರಾಯಣಃ ।
ವೈದಿಕಂ ಕರ್ಮ ಕುರ್ವೀತ ಜ್ಞಾನೈಕಫಲಸಾಧನಮ್ ॥
ನ ಕುರ್ಯಾತ್ ಪಾಶವಂ ಕರ್ಮ ವೀರಶೈವಃ ಕದಾಚನ "[1]

ಎಂದಿದ್ದಾರೆ. ಷಟ್‌ಸ್ಥಲ ಸಾಧನೆಯ ಅಂಗವಾಗಿ ಅಷ್ಟಾವರಣ ಮತ್ತು ಪಂಚಾಚಾರಗಳ ಸ್ವರೂಪ ವನ್ನು ನಿರೂಪಿಸುವುದು ಅಗತ್ಯ.

ಗುರುರ್ಲಿಂಗಂ ಜಂಗಮಶ್ಚ ತೀರ್ಥಂ ಚೈವ ಪ್ರಸಾದಕಃ ।
ಭಸ್ಮರುದ್ರಾಕ್ಷಮಂತ್ರಾಶ್ಚೇತ್ಯಷ್ಟಾವರಣಸಂಜ್ಞಿತಾಃ ॥
(ಚಂದ್ರಜ್ಞಾನಾಗಮ)

ಶಿವಭಕ್ತರಿಗೆ ಮೇಲೆ ಕಂಡ ಎಂಟು ಆವರಣಗಳು ಭವದೋಷವನ್ನು ಕಳೆವ ಮುಖ್ಯ ಸಾಧನಗಳು. ಪ್ರಕೃತ ಗುರುಸ್ವರೂಪವನ್ನು ಕುರಿತು ವಿಚಾರಮಾಡಲಾಗುತ್ತದೆ.

**೧. ಗುರು**

ವೀರಶೈವಾನಂದಚಂದ್ರಿಕೆಯಲ್ಲಿ ಗುರುವಿನ ಸ್ವರೂಪ ಹೀಗಿದೆ-

[2]" ಲಿಂಗಾಂಗ ಸಾಮರಸ್ಯವೆಂಬ ಮುಕ್ತಿಗೆ ಅನುಸಂಧಾನವು ಮುಖ್ಯ. ಅಂತಹ ವಿಶಿಷ್ಟಾದ್ವೈತಜ್ಞಾನಪ್ರದಾಯಕನೂ, ವೀರಮಾಹೇಶ್ವರಸಂಪ್ರದಾಯ-ಪ್ರವರ್ತಕನೂ, ಏಕೋತ್ತರಶತಸ್ಥಲಾತ್ಮಕ-ಷಟ್‌ಸ್ಥಲಜ್ಞಾನ-ಸಂಪನ್ನನೂ, ಲಿಂಗ-ಮುಖ-ಹಸ್ತ-ಶಕ್ತಿ-ಭಕ್ತಿ-ಮಂತ್ರ-ಪದಾರ್ಥಗಳೆಂಬ ಎಂಟು ಬಗೆಯ ಅರ್ಪಣವೆಂಬ ಮಾನಸಿಕ-ಅನುಸಂಧಾನದಿಂದ ಲಭಿಸಿದ ಶಾಂತಿ ಮೊದಲಾದ ಅಸಾಧಾರಣ ಗುರುಲಕ್ಷಣಗಳಿಂದ ಕೂಡಿದವನೂ ಆದವನೇ ಗುರುವೆನಿಸುವನು.

ಆ ಗುರುವು ಕುಲಕ್ರಮವಾಗಿ ಬಂದ ಆಚಾರಶೀಲನೂ, ಕುಮಾರ್ಗಾಚಾರರಹಿತನೂ, ಶಿವಧ್ಯಾನಪರನೂ, ಶಿವತತ್ತ್ವ-ವಿವೇಕಿಯೂ ಲಿಂಗಾಂಗಯೋಗತತ್ತ್ವಜ್ಞನೂ,[3] ನಿರೂಢಾದ್ವೈತ ವಾಸನೆಯುಳ್ಳವನೂ, [4]ಶ್ರೋತ್ರಿಯ-ಬ್ರಹ್ಮನಿಷ್ಠನೂ ಆಗಿರಬೇಕು : ಎನ್ನಲಾಗಿದೆ. ಕ್ರಿಯಾಸಾರದಲ್ಲಿ-

---

[1] ಕ್ರಿಯಾಸಾರ. ಉ. ೪. (೩೦೬)

[3] ಪು. ೫೨.

[3] ಸಿ. ಶಿ. ಪ. ೬.

[4] ಮುಂಡಕ. ೧. ೧. ೩; ೧-೨-೧೨.

ಆಶ್ರಮೇಷು ಚ ಸರ್ವೇಷು ಗೃಹೀಸ್ಯಾದುತ್ತಮೋ ಗುರುಃ ।
ಯಥಾऽಹಂ ಸರ್ವಲೋಕಾನಾಂ ಗುರುರಂಬಿಕಯಾ ಸಹ ॥

ಎಂದರೆ– "ಎಲ್ಲ ಆಶ್ರಮಿಗಳಲ್ಲಿ ಗೃಹಸ್ಥನೇ ಶ್ರೇಷ್ಠಗುರು ; ಹೇಗೆ ಅಂಬಿಕೆಯೊಡನೆ ಇರುವ ನಾನು ಲೋಕಗುರುವಾಗಿರುವೆನೋ ಅದರಂತೆ." ಎನ್ನಲಾಗಿದೆ. ಗುರುಪದವಿಗೆ ಗೃಹಸ್ಥತ್ವವು ವಿರೋಧ ವಲ್ಲ. ಛಾಂದೋಗ್ಯೋಪನಿಷತ್ತಿನಲ್ಲಿ (ಅ. ೪) ಬರುವ ಬ್ರಹ್ಮಜ್ಞಾನಿಯಾದ ರೈಕ್ವನಿಗೆ ಜಾನಶ್ರುತಿ ರಾಜನು ವಿದ್ಯಾರೂಪಗಳಾದ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ, ವಾಸಕ್ಕೆ ಮನೆ, ಜೀವಿಕೆಗೆ ಅವನ ಹೆಸರನ್ನೇ ಇಟ್ಟ ಒಂದು ಗ್ರಾಮ, ಮುಂತಾದವುಗಳನ್ನು ಕೊಟ್ಟು ಅವನಿಂದ ಬ್ರಹ್ಮೋಪದೇಶ ಪಡೆದ ಕತೆಯಿದೆ.

ವೀರಶೈವದಲ್ಲಿಯೂ ಕೂಡ ಆಚಾರ್ಯರಲ್ಲಿ ರೇವಣಸಿದ್ಧ ಮೊದಲಾದ ಅನಾಸಕ್ತಯೋಗಿ ಗಳು ಲೋಕಕಲ್ಯಾಣಾರ್ಥವಾಗಿ ಗೃಹಸ್ಥರಾಗಿದ್ದರೆಂದು ಹೇಳಲಾಗಿದೆ. ಇದರಂತೆ ಬಸವೇಶ್ವರನೂ ಕೂಡ ತಾನು ಗೃಹಸ್ಥನಾಗಿದ್ದುಕೊಂಡೇ ಚನ್ನಬಸವನಿಗೆ ದೀಕ್ಷಾಗುರುವಾದನು. ಮುಮುಕ್ಷು ವಾದ ಸಾಧಕನು ಅಂತಹ ಗುರುವನ್ನು ಭಯಭಕ್ತಿಯಿಂದ ಹೊಂದಿ ಅವನ ಕರುಣೆ ಪಡೆದು, ಅವನಿಂದ ಶಿವದೀಕ್ಷೆ ಪಡೆಯಬೇಕು.

ಮುಂಡಕೋಪನಿಷತ್-ಭಾಷ್ಯದಲ್ಲಿ ಉಮಚಿಗಿ ಶಂಕರಶಾಸ್ತ್ರಿಗಳು "ಶೌನಕೋ ಹ ವೈ ಮಹಾಶಾಲಃ" ಎಂಬ ಪದಕ್ಕೆ ವ್ಯಾಖ್ಯಾನಮಾಡುತ್ತಾ ಗೃಹಸ್ಥನಿಗೆ ಗುರುತ್ವದ ಔಚಿತ್ಯವನ್ನು ಕುರಿತು "ಮಹಾಶಾಲ ಎಂಬಲ್ಲಿ ಮಹಾಗೃಹಸ್ಥ" ಎಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿರುವ "ಮಹತ್" ಎಂಬ ವಿಶೇಷಣವು "ಪ್ರಾಕೃತ ಆಶ್ರಮಕ್ಕಿಂತಲೂ ಅತಿಶಯವಾದದ್ದು" ಎಂದಾಗಲೇ ಸಾರ್ಥಕವಾಗು ತ್ತದೆ. "ಅಗಸ್ತ್ಯೋ ಜೈಮಿನಿ ಶ್ಚೈವ ... ನ ಸಂಶಯಃ" (ಕ್ರಿಯಾಸಾರ. ಉ. ೧) ಎಂಬಲ್ಲಿ "ಬ್ರಹ್ಮ ವಿದ್ಯಾಸಂಪ್ರದಾಯಪ್ರವರ್ತಕರೆಲ್ಲರೂ ಶಿವಗೃಹಸ್ಥಾಶ್ರಮಿಗಳೇ. ಆದರೂ ಅವರಿಗಿದ್ದ ಬ್ರಹ್ಮಜ್ಞಾನವು ಮೋಕ್ಷಸಾಧನವೆಂದು ಸಿದ್ಧವಾಗಿದೆ" (ಮುಂಡಕಭಾಷ್ಯ-೧೨-೧೩). ವೀರಶೈವಗುರುಮಠಗಳಲ್ಲಿ ಇಂದಿಗೂ ಇರುವ "ಪುತ್ರವರ್ಗ" ಮತ್ತು "ಶಿಷ್ಯವರ್ಗ" ಎಂಬ ಎರಡು - ಸಂಪ್ರದಾಯಗಳು ಇದನ್ನು ಸಮರ್ಥಿಸುತ್ತವೆ.[1] ಪ್ರಾಯಃ ಪಂಚಾಚಾರ್ಯ ಪ್ರವರರಾದ ಪಟ್ಟಚರಾಧಿಕಾರಿಗಳು ಇಲ್ಲವೆ ಶಿವ ಗೃಹಸ್ಥಾಶ್ರಮಿಗಳಾದ ಮಠಸ್ಥರು ತಮ್ಮ ಶಿಷ್ಯರಿಗೆ ಶಿವದೀಕ್ಷಾದಿಗಳನ್ನು ನಡೆಸುತ್ತಿರುವರು.

೨. **ಲಿಂಗ**–ಸಿದ್ಧಾಂತ ಶಿಖಾಮಣಿಯ ಲಿಂಗಧಾರಣಸ್ಥಲದಲ್ಲಿ ಲಿಂಗತತ್ತ್ವವನ್ನು ಹೇಳ ಲಾಗಿದೆ. ಲಿಂಗಧಾರಣಕ್ಕೆ ವೈದಿಕತ್ವಪ್ರತಿಪಾದನೆಯು ಶ್ರೀಕರಭಾಷ್ಯದಲ್ಲಿದೆ. ಜಿಜ್ಞಾಸಾಧಿಕರಣದಲ್ಲಿ ಅನೇಕ ಶ್ರುತಿಗಳು ಲಿಂಗಧಾರಣವಿಧಾಯಕಗಳೆಂದು ಪ್ರದಿಪಾದಿಸಲಾಗಿದೆ.

ಗುರುವಿನ ಆದೇಶದಂತೆ ಭಕ್ತನು ಪ್ರತಿನಿತ್ಯವೂ ನಿಯತಕಾಲದಲ್ಲಿ ಲಿಂಗಾರ್ಚನಾದಿಗಳನ್ನು ಮಾಡಿ, ಲಿಂಗಾನುಸಂಧಾನಶೀಲನಾಗಬೇಕು.

೩. **ಜಂಗಮ**– ಜಂಗಮ-ತತ್ತ್ವವು ಸಾಕ್ಷಾತ್ ಶಿವಸ್ವರೂಪವೇ. ಗುರುಮುಖದಿಂದ ಶಿವದೀಕ್ಷೆ ಪಡೆದು ಪವಿತ್ರಾತ್ಮರಾದ ಭಕ್ತರ ಲಿಂಗನಿಷ್ಠೆ ಮತ್ತು ಅವರ ಆಚಾರ-ವಿಚಾರಾದಿಗಳನ್ನು

[1] ವೀರಶೈವಸದಾಚಾರಸಂಗ್ರಹ. ಪು. ೧೧೯-೧೨೦.

ಚೆನ್ನಾಗಿ ಪರೀಕ್ಷಿಸಿ ಅವರನ್ನು ಅನುಗ್ರಹಿಸುವುದಕ್ಕಾಗಿಯೇ ಪರಶಿವನು ಜಂಗಮರೂಪದಿಂದ ಅವತರಿಸುತ್ತಾನೆ. ಗುರು ಮತ್ತು ಜಂಗಮರಲ್ಲಿ ಯಾವ ಭೇದವೂ ಇಲ್ಲ. ಜಂಗಮನು ಪ್ರಾಯಃ ವಿರಕ್ತನೇ ಆಗಿರಬೇಕು. ಆತ ಗುರುವಿನಂತೆ ಗೃಹಸ್ಥನಲ್ಲ. ಆದ್ದರಿಂದಲೇ ಗುರುವು ಸಾಭಾರಿಯೆನಿಸಿದರೆ ಜಂಗಮನು ನಿರಾಭಾರಿ. ನಂದಿಪುರಾಣದಲ್ಲಿ–"ನಾನು ನನ್ನದು ಎಂಬುದನ್ನು ತೊರೆದು, ತಾನು ಯಾರು ಎಂಬುದರಲ್ಲಿಯೇ ತನ್ಮಯನಾಗಿ ತಾನೇ ತಾನಾಗಿ ಸಂಚರಿಸುವವನೇ ಚರ (ಜಂಗಮ) ಮೂರ್ತಿ ಎನಿಸುವನು." ಎಂದು ಹೇಳಿದೆ.

"ಹೆಂಡತಿ, ಮಕ್ಕಳು ಮತ್ತು ಹಣ ಇವುಗಳ ಬಯಕೆಯಿಲ್ಲದೆ, ಜ್ಞಾನ ಮತ್ತು ವಿಜ್ಞಾನ ತತ್ಪರರಾಗಿ, ದೃಢವೈರಾಗ್ಯಸಂಪನ್ನರಾದ ಶಿವಯೋಗಿಗಳೇ ಧೀರರು" (–ಪಾರಮೇಶ್ವರತಂತ್ರ) "ತನ್ನ ಸ್ವರೂಪಬಲ್ಲವನೂ, ನಾನು, ನನ್ನದು ಎಂಬ ಅಭಿಮಾನವಿಲ್ಲದವನೂ, ತಾನೇತಾನಾಗಿ ಸಂಚರಿಸುವವನೇ ಚರನೆನಿಸುವನು." "ಹಣೆಗಣ್ಣನ್ನು ಅಡಗಿಸಿ, ಚಂದ್ರಕಲೆಯನ್ನು ಮರೆಮಾಡಿ, ವಾಮಭಾಗದಲ್ಲಿ ಗಿರಿಜೆಯಿಲ್ಲದ ಸಾಕ್ಷಾತ್ ಪರಶಿವನೇ ಜಂಗಮ." (ಸಿ. ಶಿ.) "ಕಂಥಾ (ಜೋಳಿಗೆ) ಕಮಂಡಲು, ಯೋಗದಂಡ, ಖರ್ಪರ, ಮತ್ತು ಭಸ್ಮದ ಚೀಲ ಈ ಐದು ಮಹಾಮುದ್ರೆಗಳನ್ನು ಧರಿಸಿರುವವನೇ ಜಂಗಮ." (ವೀರಾಗಮ) "ಗುರು-ಲಿಂಗ-ಜಂಗಮಗಳು ಒಬ್ಬನೇ ಪರಶಿವನ ಮೂರು ಮೂರ್ತಿಗಳು. (ಚಂದ್ರಜ್ಞಾನಾಗಮ)

ಇತ್ಯಾದಿ ಪ್ರಮಾಣಗಳಿಂದ ಜಂಗಮನು ಕೇವಲ ಲೋಕಕಲ್ಯಾಣಾರ್ಥವಾಗಿಯೇ ಸಂಚರಿಸುವನು. ಶಿಷ್ಯನು ಮಾತ್ರ ಗುರು-ಲಿಂಗ-ಜಂಗಮರಲ್ಲಿ ಯಾವ ಅಂತರವನ್ನೂ ತೋರದೆ ಭಕ್ತಿಯನ್ನು ಸಲ್ಲಿಸಬೇಕು. ಲಿಂಗವು ಎರಡುವಿಧ– ಜಂಗಮ ಮತ್ತು ಅಜಂಗಮ ಎಂದು. ಗುರುವಿನಿಂದ ದೀಕ್ಷಾಕಾಲದಲ್ಲಿ ಕೊಡಲ್ಪಟ್ಟ ಇಷ್ಟಲಿಂಗವು ಅಜಂಗಮಲಿಂಗ. ಜಂಗಮಲಿಂಗವು ಅಜಂಗಮ ಲಿಂಗಕ್ಕಿಂತಲೂ ಶ್ರೇಷ್ಠ ಎಂಬುದು ಜ್ಞಾನಿಗಳ ಅಭಿಪ್ರಾಯ. ಅಂತಹ ಲಿಂಗಸ್ವರೂಪಿಯಾದ ಜಂಗಮನಿಗೆ ನೀಡಿದುದೆಲ್ಲವೂ ಅಕ್ಷಯವಾಗುತ್ತದೆ.

ಆದ್ದರಿಂದ ಭಕ್ತನು ಲಿಂಗಪೂಜೆಯನ್ನು ಮಾಡಿ, ಗುರು-ಜಂಗಮರಲ್ಲಿ ಒಬ್ಬರನ್ನಾದರೂ ಭಕ್ತಿಯಿಂದ ಪೂಜೆಮಾಡಿ, ಅವರಿಂದ ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿ ದಾಸೋಽಹಂಭಾವದಿಂದ ಇರಬೇಕು.

ತನು-ಮನ-ಮತ್ತು ಧನಗಳನ್ನು ಕ್ರಮವಾಗಿ ಗುರು-ಲಿಂಗ ಮತ್ತು ಜಂಗಮರಿಗೆ ಸಮರ್ಪಿಸಿ, ತಾನೂ ಅವರಲ್ಲಿಯೇ ಬೆರೆತು ಇರುವುದೇ ದಾಸೋಽಹಂಭಾವ. ಎಂದರೆ– ತನುವಿನಿಂದ ಗುರುವಿನ ಸೇವೆ, ಮನಃಪೂರ್ವಕ-ಲಿಂಗಾರ್ಚನೆ ಮತ್ತು ನಿರ್ಮಮನಾದ ಜಂಗಮ-ಮೂರ್ತಿಗೆ ಧನವನ್ನು ಸಮರ್ಪಿಸುವುದರಿಂದ ಅದು ಲೋಕಾರಾಧನೆಯೇ ಆಗುವುದೆಂದು ತಾತ್ಪರ್ಯ.

ಅಷ್ಟಾವರಣಗಳಲ್ಲಿ ಮೊದಲಿನ ಗುರು ಲಿಂಗ ಮತ್ತು ಜಂಗಮತತ್ತ್ವಗಳು ಉಪಾಸ್ಯಗಳು. ಮುಂದಿನ ಭಸ್ಮ ರುದ್ರಾಕ್ಷ ಮತ್ತು ಮಂತ್ರಗಳು ಉಪಾಸನೆಯ ಸಾಧನಗಳು. ಇವುಗಳ ಲಕ್ಷಣಗಳು ಸಿದ್ಧಾಂತ-ಶಿಖಾಮಣಿಯ ಪರಿಚ್ಛೇದಗಳಲ್ಲಿ ವಿಸ್ತಾರವಾಗಿ ಉಕ್ತವಾಗಿವೆ.

ಇನ್ನು ಕಡೆಯ ಪಾದೋದಕ ಮತ್ತು ಪ್ರಸಾದತತ್ತ್ವಗಳು. ಈ ಉಪಾಸನೆಯಿಂದ ದೊರೆಯುವ ಅಲೌಕಿಕ ಹಾಗೂ ಪಾರಮಾರ್ಥಿಕ ಫಲಗಳು. ಇವುಗಳನ್ನು ಕುರಿತು ಶ್ರೀಕರಭಾಷ್ಯದಲ್ಲಿ ಪ್ರಸಾದಸಿದ್ಧಾಂತ-ಸಂದರ್ಭದಲ್ಲಿ ಹೇಳಿರುವ ವಿಚಾರವೇ ಲಿಂ|| ಉಮಾಚಗಿ ಶಂಕರಶಾಸ್ತ್ರಿಗಳ ಈಶಾವಾಸ್ಯೋಪನಿಷತ್-ಭಾಷ್ಯದಲ್ಲಿ ಪೂರ್ಣವಾಗಿ ಸ್ವೀಕೃತವಾಗಿದೆ.

ಪಾದೋಕವಿಧಿಯಲ್ಲಿ "ಅಥಾತೋ ಮಹಾಪಾದೋದಕವಿಧಿಂ ವ್ಯಾಖ್ಯಾಸ್ಯಾಮಃ" ಎಂದು ಮೊದಲುಗೊಂಡು "ಶ್ರೀ ರುದ್ರೇಣ... ಮಹಾದೇವಂ ಸ್ಥಾಪಯಿತ್ವಾ ಸರ್ವೋ ವೈ ರುದ್ರಃ" ಇತಿ ದ್ವಾಭ್ಯಾಮಭಿಮಂತ್ರ್ಯ ಶಿರಸಿ ಸಂಪ್ರೋಕ್ಷ್ಯ "ಋತಂ ಸತ್ಯಮಿತಿ ಪ್ರಾಶಯೇತ್" ಮುಂತಾಗಿ ಶ್ರೀಕರಭಾಷ್ಯದಲ್ಲಿ ಉಕ್ತವಾದುದನ್ನೇ ವೀರಶೈವಾನಂದಚಂದ್ರಿಕೆಯಲ್ಲಿ ಉದ್ಧರಿಸಿ, ಮುಂದೆ "...... ಮುಮುಕ್ಷುಗಳು ಶಿವಪಾದೋದಕವನ್ನು ಶಿರಸ್ಸಿನಲ್ಲಿ ಧರಿಸತಕ್ಕದ್ದು ; ಮತ್ತು ಪಾನಮಾಡತಕ್ಕದ್ದು ಎಂದು ಪ್ರತಿಪಾದಿಸಿದೆ." ಎಂಬುದರಿಂದ ಮುಮುಕ್ಷುಗಳು ಶಿವಪಾದೋದಕವನ್ನು ಸೇವಿಸತಕ್ಕದ್ದು ಎಂದು ಹೇಳಲಾಯಿತು. ಮುಂದೆ "...... ಒಂದೇ ಪಾತ್ರೆಯಲ್ಲಿರುವ ಪಾದೋದಕವನ್ನು ಪುರಾತನ-ಬಸವೇಶ್ವರರೇ ಮೊದಲಾದ ಪ್ರಮಥ ಸಂಪ್ರದಾಯದಂತೆ ವೀರಶೈವದೀಕ್ಷಿತ-ಭಕ್ತ-ಮಾಹೇಶ್ವರರೆಲ್ಲರೂ ಕ್ರಮವಾಗಿ ಒಬ್ಬೊಬ್ಬರೇ "ಋತಂ ಸತ್ಯಂ" ಎಂದು ಪಾನಮಾಡಬೇಕು. ಅಲ್ಲಿ ಉಚ್ಛಿಷ್ಟದೋಷವಿರುವುದಿಲ್ಲ. ಹೇಗೆಂದರೆ– ಸೋಮರಸಪಾನಸಮಯದಲ್ಲಿ "ನ ಸೋಮೇ-ನೋಚ್ಛಿಷ್ಟಾ ಭವಂತಿ" ಎಂಬ ಅಸ್ತಂಬಸೂತ್ರ ವಚನದಂತೆ ಯಾಗಶಾಲೆಯಲ್ಲಿದ್ದ ಋತ್ವಿಜರೆಲ್ಲರೂ ಒಂದೇ ಚಮಸವೆಂಬ ಪಾತ್ರೆಯಲ್ಲಿರುವ ಸೋಮರಸವನ್ನು ಒಬ್ಬೊಬ್ಬರಾಗಿ ಕುಡಿಯುವಲ್ಲಿ ಹೇಗೆ ಉಚ್ಛಿಷ್ಟದೋಷವನ್ನು ಎಣಿಸುವುದಿಲ್ಲವೋ ಅದರಂತೆ ಇಲ್ಲಿಯೂ ಉಚ್ಛಿಷ್ಟ ದೋಷವನ್ನೆಣಿಸಬಾರದು." ಎಂದಿದೆ.

ಇಲ್ಲಿ "ಗುರು-ಚರ-ಪಾದೋದಕವನ್ನು ಮುಮುಕ್ಷುಗಳು ವಿಧ್ಯುಕ್ತವಾಗಿ ಸಂಗ್ರಹಿಸಿ, ಶಿರಸ್ಸಿನಲ್ಲಿ ಧರಿಸಬೇಕು." ಎಂದು ಶ್ರೀಕರಭಾಷ್ಯ ಮತ್ತು ವೀರಶೈವಾನಂದ-ಚಂದ್ರಿಕೆಗಳಲ್ಲಿ ಹೇಳಿರುವುದು ಒಂದೇ ಆಗಿದೆ. ಆದರೆ ಮುಂದೆ ವೀರಶೈವಾನಂದಚಂದ್ರಿಕೆಯಲ್ಲಿ ಹೇಳಿರುವ "ಪಾದೋದಕವನ್ನು ಪುರಾತನ-ಬಸವೇಶ್ವರ-ಪ್ರಮುಖ-ಪ್ರಮಥಸಂಪ್ರದಾಯದಂತೆ" ಎಂಬ ಪರಿಷ್ಕೃತವಿಚಾರವನ್ನು ಶ್ರೀಕರಭಾಷ್ಯಕಾರನು ಅರಿಯನು. ಏಕೆಂದರೆ– ಆ ವಿಚಾರವು ಬಸವಾದಿಪ್ರಮಥರ ಕಾಲದಲ್ಲಿ ಪರಿಷ್ಕರಿಸಲ್ಪಟ್ಟದ್ದು. ಬಸವ-ಪೂರ್ವಯುಗದವನೆನಿಸಿದ ಶ್ರೀಪತಿಗೆ ಇದು ಅಗೋಚರ ಎಂಬುದನ್ನು ಸಹೃದಯರು ಅರಿಯಬಲ್ಲರು.

**ಪಂಚಾಚಾರಗಳು**

ವೀರಶೈವದ ಹಾದಿಯಲ್ಲಿ ಹೆಜ್ಜೆಯಿಟ್ಟ ಸಾಧಕನಿಗೆ ಪಂಚಾಚಾರಗಳು ಪ್ರಾಣಸ್ವರೂಪವೆಂದು ಹೇಳಲಾಯಿತು.

೧. **ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ** ಮತ್ತು **ಗಣಾಚಾರ** ಎಂಬುವೇ ಪಂಚಾಚಾರಗಳು.

**೧. ಲಿಂಗಾಚಾರ**

ಇವುಗಳಲ್ಲಿ ಲಿಂಗಾಚಾರವು ಮೊದಲನೆಯದು. ಶಿವದೀಕ್ಷಾಪೂರ್ವಕವಾಗಿ ಗುರುವು ಅನುಗ್ರಹಿಸಿದ ಇಷ್ಟಲಿಂಗವನ್ನು ಅನನ್ಯಭಕ್ತಿಯಿಂದ ಅರ್ಚಿಸಿ, ಅನುಸಂಧಾನ ಮಾಡುವುದು **ಲಿಂಗಾಚಾರ.**

೨. ಸದಾಚಾರ

ಕಾಯಕದಿಂದ ಆರ್ಜಿಸಿದ ದ್ರವ್ಯದಿಂದ ಗುರು-ಲಿಂಗ-ಜಂಗಮರನ್ನು ತೃಪ್ತಿಪಡಿಸುವುದು **ಸದಾಚಾರ.**

ಎಲ್ಲರಿಗೂ ಭೂಷಣಪ್ರದವಾದದ್ದು ಆಚಾರ; ಎಂದು ಹೇಳಲಾಯಿತು. ಆಚಾರವಿಲ್ಲದ ನರನು ನಿಂದ್ಯನು. ಆಚಾರವೇ ಪರಮಧರ್ಮ, ಆಚಾರವೇ ಶ್ರೇಷ್ಠಧನ, ಆಚಾರವಿಲ್ಲದೆ ಜ್ಞಾನವು ಸಿದ್ಧಿಸಲಾರದು.

**ಅಷ್ಟ ವಿಧ-ಸದಾಚಾರಗಳು**

ಸದಾಚಾರವೆಂಬುದು ಎಂಟು ಶೀಲಗಳುಳ್ಳ ಒಂದು ಕಲ್ಪವೃಕ್ಷ. ಅದು ಸುಮನಸರಾದ ಸದ್ಭಕ್ತರಿಗೆ ಬಯಸಿದ ಫಲವನ್ನು ನೀಡುತ್ತದೆ. **ಅಂಕುರ, ಉತ್ಪನ್ನ, ದ್ವಿದಲ, ಪ್ರವೃದ್ಧ, ಸಪ್ರಖಂಡ, ಸಶಾಖ, ಸಪುಷ್ಪ, ಸಫಲ** ಎಂದು ಅದು ಎಂಟು ಬಗೆ.

(ಅ) ಗುರುಕಾರುಣ್ಯದಿಂದ ಷಡಧ್ವಶುದ್ಧಿಯನ್ನು ಪಡೆದ ತನ್ನ ಶರೀರವು 'ಅಪ್ರಾಕೃತ' ಎಂದು ಭಾವಿಸುವುದೇ ಬೀಜರೂಪವಾದ **ಅಂಕುರ.**
(ಆ) ಶಿವದೀಕ್ಷೆ ಪಡೆದು ಸತಿಸುತರೊಡನೆ ವಾಸಿಸುವುದು **ಉತ್ಪನ್ನಶೀಲ.**
(ಇ) ಭಸ್ಮಮುಂತಾದ ಲಾಂಛನಗಳನ್ನು ಆಲಸ್ಯಮಾಡದೆ ಧರಿಸುವುದು **ದ್ವಿದಲಶೀಲ.**
(ಈ) ಶಿವತತ್ತ್ವಗಳ ಮಹಿಮೆಯನ್ನು ನಂಬುವುದು **ಪ್ರವೃದ್ಧಶೀಲ.**
(ಉ) ಇಷ್ಟಲಿಂಗವನ್ನು ಅರ್ಚಿಸದೆ ಭೋಜನ ಮಾಡದಿರುವುದು **ಸಪ್ರಕಾಂಡಶೀಲ.**
(ಊ) ಇಷ್ಟಲಿಂಗಕ್ಕೆ ಅರ್ಪಿತವಲ್ಲದ ದ್ರವ್ಯವನ್ನು ಸ್ವೀಕರಿಸದಿರುವುದು **ಸಶಾಖಶೀಲ.**
(ಋ) ಶಿವಾರ್ಪಿತವಾದ ಪ್ರಸಾದವನ್ನು ಬಿಡದಿರುವುದು **ಸಪುಷ್ಪಶೀಲ.**
(ೠ) ಗುರು-ಲಿಂಗ-ಜಂಗಮರನ್ನು ಒಂದೇ ಎಂದು ಭಾವಿಸುವುದು **ಸಫಲಶೀಲ.**

೩. ಶಿವಾಚಾರ

ದ್ರವ್ಯ-ಕ್ಷೇತ್ರ-ಗೃಹ ಮೊದಲಾದ ಹದಿನಾರು ವಸ್ತುಗಳನ್ನು ಶಿವಶಾಸ್ತ್ರೋಕ್ತಕ್ರಮದಿಂದ ಶೋಧಿಸುವುದು ಶಿವಾಚಾರ.

೧. **ದ್ರವ್ಯಶುದ್ಧಿ–** ಭಕ್ತರು ತಂದದ್ದೇ ಆದರೂ ಫಲ-ಮೂಲ ಮುಂತಾದುವನ್ನು ಭಸ್ಮದಿಂದ ಶುದ್ಧಿಗೊಳಿಸಿ ಸ್ವೀಕರಿಸುವುದು.
೨. **ಕ್ಷೇತ್ರಶುದ್ಧಿ–** ಭಕ್ತರು ನಂದಿಮುದ್ರೆಯ ಕಲ್ಲು ಅಥವಾ ಮರ ಇವುಗಳಿಂದ ಮುದ್ರಿತವಾದ ಕ್ಷೇತ್ರ (ಹೊಲಗದ್ದೆ)ಗಳನ್ನು ಮಾತ್ರ ಸ್ವೀಕರಿಸುವುದು.
೩. **ಗೃಹಶುದ್ಧಿ–** ಭಕ್ತರು ಕಟ್ಟಿದ ಅಥವಾ ಶಿವಲಿಂಗಮುದ್ರಾಂಕಿತವಾದ ಮನೆಯನ್ನು ಬಳಸುವುದು.
೪. **ಭಾಂಡಶುದ್ಧಿ–** ಭಕ್ತರು ಸಿದ್ಧಪಡಿಸಿದ ಅಥವಾ ಶಿವಲಿಂಗಮುದ್ರಾಂಕಿತವಾದ ಪಾತ್ರೆಗಳನ್ನು ಬಳಸುವುದು.
೫. **ತೃಣಶುದ್ಧಿ–** ಭಕ್ತರು ತಂದ ಅಥವಾ ಭಸ್ಮದಿಂದ ಶುದ್ಧಿಗೊಳಿಸಿದ ಹುಲ್ಲು ಮೊದಲಾದುವನ್ನು ಪರಿಗ್ರಹಿಸುವುದು.

೬. ಕಾಷ್ಠಶುದ್ಧಿ –ಭಕ್ತರು ತಂದ ಇಲ್ಲವೆ ಭಸ್ಮ ಸಂಸ್ಕೃತವಾದ ಕಾಷ್ಠವನ್ನೇ ವ್ರತ ನಿಷ್ಠರು ಸಂಗ್ರಹಿಸಬೇಕು.

೭. ವೀಟಿಕಾಶುದ್ಧಿ –ಭಕ್ತರ ತೋಟದಲ್ಲಿ ಬೆಳೆದ ಅಥವಾ ಭಸ್ಮಶುದ್ಧವಾದ ತಾಂಬೂಲವನ್ನು ಪರಿಗ್ರಹಿಸಬೇಕು.

೮. ಪಾಕಶುದ್ಧಿ –ಶಿವದೀಕ್ಷೆ ಪಡೆದವರು ಮಾಡಿದ, ಅಭಕ್ತರು ನೋಡದ ಭೋಜ್ಯವನ್ನು ಮಾತ್ರ ಭಕ್ತರು ಸ್ವೀಕರಿಸಬೇಕು.

೯. ರಸಶುದ್ಧಿ –ಎಮ್ಮೆ, ಆಡು ಮೊದಲಾದ ಪ್ರಾಣಿಗಳ ಹಾಲು-ಮೊಸರು, ಮಜ್ಜಿಗೆ ಮುಂತಾದವನ್ನು ಬಿಟ್ಟು, ಹಸುವಿನ ಕ್ಷೀರಾದಿಗಳನ್ನೇ ಯಾವಾಗಲೂ ಪರಿಗ್ರಹಿಸಬೇಕು.

೧೦. ಭವಶುದ್ಧಿ –ಕಾಮ್ಯಕರ್ಮಗಳನ್ನು ಬಿಡುವುದರಿಂದ ಜನ್ಮರಾಹಿತ್ಯ ಸಂಪತ್ತಿ.

೧೧. ಭೂತಶುದ್ಧಿ –ಎಲ್ಲ ಪ್ರಾಣಿಗಳಲ್ಲಿ ದಯೆ ಮತ್ತು ಪ್ರಾಣಿಗಳನ್ನು ಗದರಿಸದಿರುವುದು.

೧೨. ಭಾವಶುದ್ಧಿ –ಎಲ್ಲ ಬಯಕೆಗಳನ್ನು ತೊರೆದು ಸದಾ ಶಿವಭಾವಾನುಸಂಧಾನದಲ್ಲಿರುವುದು.

೧೩. ಮಾರ್ಗಶುದ್ಧಿ –ಇರುವೆ ಮುಂತಾದವುಗಳಿಗೆ ಹಿಂಸೆಯಾಗದಂತೆ ನಡೆಯುವುದು.

೧೪. ಕಾಲಶುದ್ಧಿ –ಶಾಸ್ತ್ರಸಮ್ಮತವೂ, ನೀರವವೂ, ಮನೋರಮವೂ ಆದ ಕಾಲದಲ್ಲಿ ಶಿವನನ್ನು ಆರಾಧಿಸುವುದು.

೧೫. ವಾಕ್‌ಶುದ್ಧಿ –ಅನೃತ-ಪರುಷ(ಕಠಿನ)-ಕುತ್ಸಿತ-ಅಸಹ್ಯಕರ ಹಾಗೂ ಜಂಭದ ನುಡಿಗಳನ್ನು ಆಡದಿರುವುದು.

೧೬. ಜನಶುದ್ಧಿ –ಆಸನ-ಶಯನ-ಪ್ರಯಾಣ-ಸಭೆಗಳಲ್ಲೆಲ್ಲ ಯಾವಾಗಲೂ ಸದ್ಭಕ್ತ ಸಂಗ ಮಾಡುವುದು.

೪. ಗಣಾಚಾರ

ಭಕ್ತರು ಅನುಷ್ಠಾನಮಾಡಿದ ಆಚಾರವೇ ಗಣಾಚಾರ. ಇದರಲ್ಲಿ ಅರವತ್ತು ನಾಲ್ಕು ಶೀಲಗಳಿವೆ. ಅವುಗಳಲ್ಲಿ ವಾಚಕ ಮುಂತಾದ ಅನೇಕ ಪ್ರಭೇದಗಳಿವೆ.

ವಾಕ್ ಶೀಲವು ಏಳುಬಗೆ–

೧. ನಿಜಹೇಳುವುದು.

೨. ಜನರಿಗೆ ಹಿತವಲ್ಲದುದು ನಿಜವಾದರೂ ಹೇಳಬಾರದು. ಅಸತ್ಯವಾಗಿದ್ದರೂ ಹಿತವಾದುದನ್ನೇ ಹೇಳುವುದು. ಎಂದರೆ ಪ್ರಿಯವೂ, ಸತ್ಯವೂ ಆದುದನ್ನೇ ಹೇಳಬೇಕು.

೩. ಪ್ರತಿದಿನವೂ ವೇದಾಗಮಪುರಾಣ ಮೊದಲಾದ ಒಳ್ಳೆಯ ಗ್ರಂಥಗಳನ್ನು ಓದುವುದು.

೪. ಶಿವ ಮತ್ತು ಶಿವಭಕ್ತರು ಇಲ್ಲವೆ ಗುರುವನ್ನು ಸ್ತುತಿಸುವುದು.

೫. ಅನ್ಯ ದೇವತೆಗಳನ್ನು ಅಥವಾ ಮಾನವರನ್ನು ಎಂದೂ ಹೊಗಳಬಾರದು.

೬. ತನ್ನ ಬಣ್ಣಿಸಬೇಡ.

೭. ಇದಿರ ಹಳಿಯಲುಬೇಡ.

ಪಾಣಿಗತ ಶೀಲವು ಐದುಬಗೆ–

೮. ಗುರು-ಲಿಂಗ-ಜಂಗಮ ವಂದನೆ.

೯. ಪೂಜಾದ್ರವ್ಯಗಳನ್ನು ಸಂಪಾದಿಸುವಿಕೆ.

೧೦. ರುದ್ರಾಕ್ಷಮಾಲಿಕೆ ಹಿಡಿದು ಪ್ರತಿದಿನ ಜಪಿಸುವುದು.

೧೧. ಗುರುಲಿಂಗ ಜಂಗಮಾರಾಧನೆ.

೧೨. ಗುರುಜಂಗಮರಿಗೆ ಮತ್ತು ಶಿವಧರ್ಮಕ್ಕಾಗಿ ಯಥಾಶಕ್ತಿ ದಾನ.

ಪಾದಗತ ಶೀಲವು ನಾಲ್ಕುವಿಧ–

೧೩. ಗುರು-ಜಂಗಮರಿದ್ದಲ್ಲಿಗೆ ಭಕ್ತಿಯಿಂದ ಹೋಗುವುದು.

೧೪. ಗುರು-ಜಂಗಮರಿಗೆ ಪ್ರದಕ್ಷಿಣೆಮಾಡುವುದು.

೧೫. ಪೂಜಾ ಸಾಮಗ್ರಿ ಸಂಪಾದನೆಗಾಗಿ ಸಂಚರಿಸುವುದು.

೧೬. ಇಷ್ಟಲಿಂಗ ಪೂಜೆಗಾಗಿ ಸ್ಥಿರಾಸನದಲ್ಲಿ ಕೂಡುವುದು.

ತ್ವಕ್‌ಗೆ ಸಂಬಂಧಿಸಿದ ಶೀಲ ಎರಡುಬಗೆ–

೧೭. ಯಾವಾಗಲೂ ಇಷ್ಟಲಿಂಗವನ್ನು ಎಡೆಬಿಡದೆ ಧರಿಸುವುದು.

೧೮. ಇಷ್ಟಲಿಂಗ ಸ್ಪರ್ಶದಿಂದ ಮೈ ರೋಮಾಂಚಗೊಳ್ಳುವುದು.

ಚಕ್ಷುಗತ ಶೀಲವು ಎರಡು ವಿಧ–

೧೯. ಬಳಲದೆ-ಅನುರಾಗದಿಂದ ಇಷ್ಟಲಿಂಗ ನಿರೀಕ್ಷಣೆ.

೨೦. ಇಷ್ಟಲಿಂಗ ನಿರೀಕ್ಷಣದಿಂದ ಆನಂದಬಾಷ್ಪಗಳು ಹೊಮ್ಮುವುದು.

ಜಿಹ್ವಾಗತಶೀಲ

೨೧. ಪ್ರತಿದಿನವೂ ನಿವೇದಿತ ಪ್ರಸಾದವನ್ನೇ ಸೇವಿಸುವುದು.

ಘ್ರಾಣಗತಶೀಲ

೨೨. ನಿರ್ಮಾಲ್ಯ ಗಂಧಪುಷ್ಪಾದಿಗಳ ಸೌರಭವನ್ನು ಮೂಸುವುದು.

ಶ್ರೋತ್ರಗತಶೀಲ

೨೩. ಗುರು-ಶಿವ ಅಥವಾ ಭಕ್ತರ ಸ್ತೋತ್ರಗಳನ್ನು ಕೇಳುವುದು.

೨೪. ಗುರು-ಶಿವ ಮತ್ತು ಭಕ್ತರ ನಿಂದೆಯನ್ನು ಕೇಳದಿರುವುದು.

ಕಾಯಶೋಧಶೀಲವು ಐದು ವಿಧ

೨೫. ಗುರು ಅಥವಾ ಜಂಗಮರ ಪ್ರಸಾದದಿಂದ ಶರೀರವನ್ನು ಪೋಷಿಸುವುದು.

೨೬. ನಿಷಿದ್ಧ ವಿಷಯಗಳ ದೆಸೆಯಿಂದ ಇಂದ್ರಿಯಗಳನ್ನು ನಿಗ್ರಹಿಸುವುದು.

೨೭. ಅಸ್ಪೃಶ್ಯ ವಸ್ತುಗಳನ್ನು ಮುಟ್ಟಿದರೆ ನೀರು ಅಥವಾ ಭಸ್ಮದಿಂದ ಸ್ನಾನ.

೨೮. ಆಸನ-ಶಯನ-ಗೋಷ್ಠಿಗಳಲ್ಲಿ ಭವಿ ಸಂಬಂಧವಿಲ್ಲದಿರುವುದು.

೨೯. ಭಸ್ಮ-ರುದ್ರಾಕ್ಷ ಮತ್ತು ಲಿಂಗಗಳನ್ನು ಧರಿಸಿರುವುದು.

ಮನಸ್ಸಿನ ಶೀಲಗಳು

೩೦. ನಿಷಿದ್ಧ ಭೋಗವನ್ನು ಬಯಸದಿರುವುದೇ ಬ್ರಹ್ಮಚರ್ಯೆ.

೩೧. ಭಕ್ತಿರತಿಯನ್ನು ಬಯಸಬೇಕೇ ಹೊರತು ವಿಷಯರತಿಯನ್ನಲ್ಲ.

೩೨. ಕ್ರೋಧವನ್ನು ಅಧರ್ಮದಲ್ಲಿ ಮಾಡಬೇಕೇ ಹೊರತು ವೈರಿಯಲ್ಲಲ್ಲ.

೩೩. ಲೋಭವನ್ನು ಧನಾದಿಗಳಲ್ಲಿ ಮಾಡಬಾರದು, ಬದಲಾಗಿ ಶಿವಾರಾಧನೆಯಲ್ಲಿ.

೩೪. ಮೋಹವನ್ನು ಭಕ್ತರಲ್ಲಿ ಮಾಡಬೇಕೇ ಹೊರತು ಹೆಂಡರುಮಕ್ಕಳಲ್ಲಲ್ಲ.

೩೫. ಮಾತ್ಸರ್ಯವನ್ನು ಇಂದ್ರಿಯಗಳಲ್ಲಿಯೇ ಹೊರತು ಜನರಲ್ಲಲ್ಲ.

...

೩೬. ಮದವನ್ನು ಮಾಯಾ ಜನರಲ್ಲಿ ಮಾಡಬೇಕೇ ಹೊರತು ಧರ್ಮ-ಸಂಪತ್ತುಗಳಲ್ಲಲ್ಲ.
೩೭. ಗುರು-ಜಂಗಮರಲ್ಲಿನ ಗುಣದೋಷಗಳನ್ನು ಎಣಿಸಬಾರದು.
೩೮. ಯಾವ ಪ್ರಾಣಿಯನ್ನೂ ಹಿಂಸಿಸದಿರುವುದು ಅಹಿಂಸೆ.
೩೯. ಪ್ರಾಣಿ ದುಃಖವನ್ನು ನೋಡಿ ಸಹಿಸದಿರುವುದೇ ದಯೆ.
೪೦. ಮಾತು ಮತ್ತು ಕೃತಿಗಳಲ್ಲಿ ವಂಚನೆಯಿಲ್ಲದಿರುವುದು.
೪೧. ಶತ್ರುವಿನಲ್ಲಾಗಲಿ, ಮಗನಲ್ಲಾಗಲಿ, ವೈಷಮ್ಯ ತಳೆಯದಿರುವುದು.
೪೨. ಗುರುವಚನ ಮತ್ತು ವೇದಾಗಮ ವಚನಗಳಲ್ಲಿ ನಂಬುಗೆ.
೪೩. ದುರಂತವಾದ ಆಪತ್ತಿನಲ್ಲಿಯೂ ಧರ್ಮವನ್ನು ಬಿಡದಿರುವುದು.
೪೪. ವೈರಿಗಳಾಗಲಿ, ಅಪಕಾರಿಗಳಾಗಲಿ, ಅವರನ್ನು ದೂಷಿಸದಿರುವುದು ಕ್ಷಮೆ.
೪೫. ಮಾನಸಿಕ ಭೋಗಾಸಕ್ತಿಯನ್ನು ಬಿಡುವುದು.
೪೬. ಮಾತು ಮತ್ತು ಕೃತಿಗಳಲ್ಲಿ ಪ್ರಮಾದವಿಲ್ಲದಿರುವುದು ಬುದ್ಧಿವಂತಿಕೆ.
೪೭. ಒಳ್ಳೆಯದಲ್ಲದ ವಸ್ತುಗಳನ್ನು ಬಯಸದಿರುವುದು.
೪೮. ಪರದ್ರವ್ಯವನ್ನು ಅಪಹರಿಸದಿರುವುದು ಅಸ್ತೇಯ.
೪೯. ದೊರೆಯದ ವಸ್ತುವಿನ ವಿಷಯದಲ್ಲಿ ವ್ಯಸನವಿಲ್ಲದಿರುವುದು ಸಂತುಷ್ಟಿ.
೫೦. ಭಗವಂತನ ನಾಮ-ರೂಪುಗಳನ್ನು ಯಾವಾಗಲೂ ನೆನೆವುದು.
೫೧. ಶಂಭುವಿನ ನಾಮ ಗುಣಾದಿಗಳನ್ನು ಯಾವಾಗಲೂ ಚಿಂತಿಸುವುದು.
೫೨. ಗುರುಹಿರಿಯರ ಶಿವನ ಪಾದಸಂವಹ (ಒತ್ತುವುದು)ನಾದಿಗಳನ್ನು ಮಾಡುವುದು.
೫೩. ಶಿವನನ್ನು ಮಾನಸಿಕವಾಗಿ ಅರ್ಚಿಸುವುದು.
೫೪. ಶಿವಚರಣಗಳಿಗೆ ನಿತ್ಯವೂ ಮಾನಸಿಕವಾಗಿ ವಂದಿಸುವುದು.
೫೫. ಮಾನಸಿಕವಾಗಿ ಶಿವನಿಗೆ ಕಿಂಕರನಂತೆ ಭಾವಿಸುವುದು.
೫೬. ಶಿವನ ಕಲ್ಯಾಣ ರೂಪದೊಂದಿಗೆ ಮೈತ್ರಿಯೇ ಸಖ್ಯ.
೫೭. ಬಂಧಮೋಕ್ಷಾದಿಗಳ ಎಲ್ಲ ಹೊಣೆಯನ್ನು ಶಿವನಿಗೆ ಒಪ್ಪಿಸುವುದು ಆತ್ಮಾರ್ಪಣ.
೫೮. ಮೂಲಮಂತ್ರವನ್ನು ಸದಾ ಮಾನಸಿಕವಾಗಿ ಜಪಿಸುವುದು.
೫೯. ಶಿವನ ದಿವ್ಯ ರೂಪವನ್ನು ಅನುಸಂಧಾನಮಾಡುವುದು ಧ್ಯಾನ.
೬೦. ತೈಲಧಾರೆಯಂತೆ ಎಡೆಬಿಡದೆ ಶಿವನನ್ನು ನೆನೆವುದು ಧಾರಣ.
೬೧. ಗಾಳಿಯಿಲ್ಲದೆಡೆ ಇರುವ ದೀಪದಂತೆ ಧ್ಯಾನದಲ್ಲಿ ಮನಸ್ಸನ್ನು ತೊಡಗಿಸುವುದು.
೬೨. ಶಿವನನ್ನು ಸೋಽಹಂ ಎಂದರೆ ಅವನೇ ನಾನು ಎಂಬ ಭಾವದಿಂದ ಧ್ಯಾನಿಸುತ್ತಾ ಶಿವನನ್ನು ಜ್ಞಾನೇಂದ್ರಿಯ ಮುಖದಿಂದ ಸ್ವೀಕರಿಸುವುದು.
೬೩. ಮಹೇಶ್ವರನ ಅಪರಿಚ್ಛಿನ್ನ ರೂಪವನ್ನು ಸಂಧಾನ ಮಾಡುವುದು.
೬೪. ಶಿವನ ಅನಂತ ರೂಪವನ್ನು ನಿಜರೂಪದಿಂದ ಭಾವಿಸುತ್ತಾ ಶಿವಾನಂದ ಪರವಶನಾಗಿ ತನ್ನನ್ನು ತಾನು ಮರೆತು ಸ್ಥಿರ ಮನಸ್ಕನಾಗಿರುವುದು-

೫. ಭೃತ್ಯಾಚಾರ

ಭೃತ್ಯತ್ವವು ವೀರಭೃತ್ಯತ್ವ ಎಂದು ಹೇಳಲ್ಪಟ್ಟಿದೆ. ಅದು ಎರಡು ಬಗೆ.

೧. ಗುರು-ಲಿಂಗ-ಜಂಗಮರಲ್ಲಿ ಕೈಂಕರ್ಯವನ್ನು ಎಸಗುವುದು.
೨. ಗುರುವಿಗೆ ತನುವನ್ನು, ಲಿಂಗಕ್ಕೆ ಮನಸ್ಸನ್ನು, ಜಂಗಮಕ್ಕೆ ಧನವನ್ನು ಒಪ್ಪಿಸಿ ದಾಸೋಽಹಂಭಾವದಿಂದಿರುವುದು.


ಸ್ಥಲಂ- ಶಕ್ತಿಮತ್ ಘನಲಿಂಗವ್
ಲಿಂಗ
(ಸತ್, ಪ್ರಕಾಶ, ಈಶ್ವರ, ಬಿಂದು)
ಭಾವಲಿಂಗ
(ಚಿತ್, ವಿಮರ್ಶ, ಹಿರಣ್ಯಗರ್ಭ, ವಿರಾಟ್)
ಪ್ರಾಣಲಿಂಗ
(ಆನಂದ, ಆಭಾಸ, ವಿರಾಟ್, ವಿದ್ಯಾ)
ಇಷ್ಟಲಿಂಗ
ಪರಶಿವ
ಮಹಾಲಿಂಗ
with ಶಿವ
ಚಿಚ್ಛಕ್ತಿ ಪ್ರಸಾದಲಿಂಗ
with ಶಕ್ತಿ
ಪರಾಶಕ್ತಿ ಪರಲಿಂಗ.
with ಸದಾಶಿವ
ಆದಿಶಕ್ತಿ ಶಿವಲಿಂಗ
w th ಈಶ್ವರ
ಇಚ್ಛಾಶಕ್ತಿ ಗುರುಲಿಂಗ
with ಶುದ್ಧ ವಿದ್ಯಾ
ಜ್ಞಾನಶಕ್ತಿ ಆಚಾರಲಿಂಗ
with
ಕ್ರಿಯಾಶಕ್ತಿ


ಶಕ್ತಿ
ಪ್ರಕಾಶನಂ, ಸತ್
ವಿಮರ್ಶನಂ, ಚಿತ್
ಆಭಾಸನಂ, ಆನಂದ
ಚಿಚ್ಛಕ್ತಿ
ಶಾಂತ್ಯತೀತೋತ್ತರಕಲಾ
ಪರಾಶಕ್ತಿ
ಶಾಂತ್ಯತೀತಕಲಾ
ಆದಿಶಕ್ತಿ
ಶಾಂತಿಕಲಾ
ಇಚ್ಛಾಶಕ್ತಿ
ವಿದ್ಯಾಕಲಾ
ಜ್ಞಾನಶಕ್ತಿ
ಪ್ರತಿಷ್ಠಾಕಲಾ
ಕ್ರಿಯಾಶಕ್ತಿ
ನಿವೃತ್ತಿಕಲಾ


ಅಂಗ
ಪ್ರಾಜ್ಞ-ಯೋಗಾಂಗ
ತೈಜಸ, ಭೋಗಾಂಗ
ವಿಶ್ವ-ತ್ಯಾಗಾಂಗ
ಐಕ್ಯ
ಶರಣ
ಪ್ರಾಣಲಿಂಗೀ
ಪ್ರಸಾದೀ
ಮಾಹೇಶ್ವರ
ಭಕ್ತ

- ಭಕ್ತಿ
  - ವಿಶುದ್ಧ
    - ಸಮರಸ
    - ಆನಂದ
  - ವಿಚಾರ
    - ಅನುಭವ
    - ಅವಧಾನ
  - ವಿಧೇಯ
    - ನಿಷ್ಠಾ
    - ಶ್ರದ್ಧಾ

In a simplified form the same can be tabulated as follows :-

- ಸ್ಥಲಂ (ಬ್ರಹ್ಮ)
  - ಲಿಂಗಸ್ಥಲಂ (ಈಶ)
    - ಭಾವಲಿಂಗ (ಈಶ್ವರ)
      - ಮಹಾಲಿಂಗ
      - ಪ್ರಸಾದಲಿಂಗ
    - ಪ್ರಾಣಲಿಂಗ (ಹಿರಣ್ಯಗರ್ಭ)
      - ಚರಲಿಂಗ
      - ಶಿವಲಿಂಗ
    - ಇಷ್ಟಲಿಂಗ (ವಿರಾಟ್)
      - ಗುರುಲಿಂಗ
      - ಆಚಾರಲಿಂಗ
  - ಅಂಗಸ್ಥಲಂ (ಜೀವ)
    - ಯೋಗಾಂಗ (ಪ್ರಾಜ್ಞ)
      - ಐಕ್ಯ
      - ಶರಣ
    - ಭೋಗಾಂಗ (ತೈಜಸ)
      - ಪ್ರಾಣಲಿಂಗೀ
      - ಪ್ರಸಾದೀ
    - ತ್ಯಾಗಾಂಗ (ವಿಶ್ವ)
      - ಮಾಹೇಶ್ವರ
      - ಭಕ್ತ



**ಸಾಮರಸ್ಯ-ಸಾರೂಪ್ಯಮುಕ್ತಿ ವಿವೇಕ**

ಶ್ರೀಕಂಠ ಮತದಲ್ಲಿ ಸಾರೂಪ್ಯ ಮುಕ್ತಿಯನ್ನು ಒಪ್ಪಲಾಗಿದೆ ಎಂದು ಹೇಳಲಾಯಿತು. ಸಾರೂಪ್ಯ ಎಂದರೆ ಸಾದೃಶ್ಯ. ಆ ಅಂಶವನ್ನು ಅವರು ಹೀಗೆ ಸಮರ್ಥಿಸಿದ್ದಾರೆ. "ಮುಕ್ತಸ್ಯ ಬ್ರಹ್ಮಣಾ ಸಾದೃಶ್ಯಮಸ್ತಿ. ಕುತಃ? 'ನಿರಂಜನಃ ಪರಮಂ ಸಾಮ್ಯಮುಪೈತಿ" (ಮುಂ. ೩. ೩.)' ಮುಕ್ತಃ ಶಿವಸಮೋ ಭವೇತ್' ಇತಿ ಮುಕ್ತಸ್ಯ ಬ್ರಹ್ಮಗುಣ ಸ್ವರೂಪಾವಿಭಾಗೇನ ಬ್ರಹ್ಮಸದೃಶತಯಾ ದೃಷ್ಟತ್ವಾತ್" ಎಂದರೆ 'ಮುಕ್ತನು ಪರಶಿವನ ಸಾದೃಶ್ಯವನ್ನು ಪಡೆಯುತ್ತಾನೆ.' 'ಮುಕ್ತನು ಶಿವನಿಗೆ ಸಮ' ನಾಗುತ್ತಾನೆ. ಎಂಬ ಶ್ರುತಿ: ಆಗಮ ವಾಕ್ಯಗಳಲ್ಲಿ ಮುಕ್ತನಿಗೆ ಬ್ರಹ್ಮಗುಣಸ್ವರೂಪವು ಅವಿಭಾಗ ಅರ್ಥಾತ್ 'ಬ್ರಹ್ಮಸಾದೃಶ್ಯ'ವೇ ಮುಕ್ತಿ. (ಬ್ರಂ. ಸೂ. ಅವಿಭಾಗಾಧಿಕರಣ ೪.೪.೨.೪.).

ಕ್ರಿಯಾಸಾರದಲ್ಲಿಯೂ ಮುಕ್ತಿಯು ಸಾರೂಪ್ಯವೆಂದು ಹೇಳಿದೆಯಾದರೂ ಅದು ಸಾಮರಸ್ಯಾತ್ಮಕ ಮುಕ್ತಿ.

ಅಮೃತಸ್ಯೇತಿ ವಾಕ್ಯೇನ ಧಾರಣಂ ಪ್ರತಿಪಾದಿತಂ ।
ತನ್ನಿಷ್ಠಾ ಏವ ಮನುಜಾ ಅತಿವರ್ಣಾಶ್ರಮೇ ರತಾಃ ॥ ೧೮೧ ॥
ತ ಏವ ಹಿ ಮಹಾತ್ಮಾನೋ ಬ್ರಹ್ಮನಿಷ್ಠಾ ಉದಾಹೃತಾಃ ।
ಲಿಂಗಾಂಗಸಾಮರಸ್ಯೇನ ಬ್ರಹ್ಮಭಾವಮುಪಾಶ್ರಿತಾಃ ॥ ೧೮೨ ॥
ಸಾರೂಪ್ಯರೂಪಿಣೀಂ ಮುಕ್ತಿಂ ಸಂಪ್ರಾಪ್ಯ ಪರದುರ್ಲಭಾಂ ।
ಕೃತಕೃತ್ಯಾ ಭವಂತ್ಯೇವ ಶಿವಾನಂದಭುಜೋಽನಿಶಂ ॥ ೧೮೩ ॥
(ಕ್ರಿಯಾಸಾರ ಉ. ೧)

ತೈತ್ತರೀಯೋಪನಿಷತ್ತಿನಲ್ಲಿ "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬ ಶ್ರುತಿ ಮುಕ್ತಿಗಾಗಿ ಶಿವಲಿಂಗಧಾರಣ ಮಾಡಿಕೊಳ್ಳಬೇಕು ಎಂದು ವಿಧಿಸಿದೆ. ಅಂಥ ಲಿಂಗನಿಷ್ಠೆಯುಳ್ಳವರು ಅತಿವರ್ಣಾಶ್ರಮಿಗಳು ; ಅವರೇ ಮಹಾತ್ಮರು, ಅವರೇ ಬ್ರಹ್ಮನಿಷ್ಠರು, ಅವರು ಲಿಂಗಾಂಗ ಸಾಮರಸ್ಯದಿಂದ ಬ್ರಹ್ಮಭಾವದಲ್ಲಿರುತ್ತಾರೆ. ಇದು ಇತರರಿಗೆ ದೊರೆಯದ ಸಾರೂಪ್ಯಮುಕ್ತಿ. ಅವರು ನಿರಂತರವೂ ಶಿವಾನಂದವನ್ನು ಅನುಭವಿಸುತ್ತಾರೆ." ಎಂಬುದು ಕ್ರಿಯಾಸಾರವು ಸೂಚಿಸಿರುವ ಮುಕ್ತಿ. ಇದು ಲಿಂಗಾಂಗಸಾಮರಸ್ಯಾತ್ಮಕ ಸಾರೂಪ್ಯ. ಮುಂದೆ 'ಭೋಗಮಾತ್ರ ಸಾಮ್ಯ ಲಿಂಗಾಚ್ಚ' (೪. ೪. ೬-೨೧) ಎಂಬ ಸೂತ್ರಕಾರಿಕೆಯಲ್ಲಿ–

ತಥಾ ವಿದ್ವಾನ್ ಪುಣ್ಯಪಾಪೇ ವಿಧೂಯಾಥ ನಿರಂಜನಃ
ಉಪೈತಿ ಪರಮಂ ಸಾಮ್ಯಮಿತಿ ತತ್ಸಾಮ್ಯಮಿತೀರಿತಂ ॥ ೧೫೭ ॥

ಎಂಬಲ್ಲಿರುವ 'ಪರಮಸಾಮ್ಯ'ವೂ ಸಹ ಮೇಲೆ ಹೇಳಿದ ಸಾಮರಸ್ಯಾತ್ಮಕ ಸಾರೂಪ್ಯವೇ ಹೊರತು ಭೇದದ್ಯೋತಕವಾದ ಕೇವಲ ಸಾಮ್ಯವಲ್ಲ. ಆದ್ದರಿಂದಲೇ "ಪರಮ" ಪದವು ಸಾರ್ಥಕವಾಗುತ್ತದೆ. ಇದೇ ವಿಷಯವನ್ನು ಉಲ್ಲೇಖಿಸಿರುವ ಶ್ರೀಕರಭಾಷ್ಯವು "ಮುಕ್ತೋಪಸೃಪ್ಯವ್ಯಪದೇಶಾತ್ (ಬ್ರಂ. ೧. ೩. ೨.)ಎಂಬಲ್ಲಿ "ಪರಮಂ ಸಾಮ್ಯಮುಪೈತೀತ್ಯತ್ರ ಪರಮಶಿವೋಪಾಸಕಾನಾಂ ಶಿವಸಾರೂಪ್ಯಮುದ್ದಿಶ್ಯ" ಎಂದು ಆರಂಭಿಸಿ "ನಿರತಿಶಯಾನಂದಸ್ವರೂಪಾ ತತ್ಸಮಾನ ಗುಣಸಾರಾ ಕೈವಲ್ಯಲಕ್ಷ್ಮೀಪ್ರಾಪ್ತಿರೂಪಮುಕ್ತಿಃ" ಎಂದರೆ ಪರಮ ಶಿವೋಪಾಸಕರಿಗೆ ಲಭಿಸುವ ಸಾರೂಪ್ಯವೆಂದರೆ

ನಿರತಿಶಯವಾದ ಆನಂದ ಸ್ವರೂಪವೂ ಶಿವಾನಂದಸಮಾನಗುಣಸಾರವೂ ಆದ ಕೈವಲ್ಯ ಅರ್ಥಾತ್ ಅದು ಶಿವಸಾಮರಸ್ಯಾತ್ಮಕವೇ ಹೊರತು ಶ್ರೀಕಂಠರು ಹೇಳುವ "ಮುಕ್ತಿಯ ಅವಸ್ಥೆಯಲ್ಲಿಯೂ ಭೇದವನ್ನೇ ಸೂಚಿಸುವ ಸಾದೃಶ್ಯಾತ್ಮಕ ಸಾರೂಪ್ಯ'ವಲ್ಲ.

ರಾಮಾನುಜೀಯರಲ್ಲಿ ಉಕ್ತವಾಗಿರುವ ಸಾರೂಪ್ಯವು ಮುಕ್ತನಿಗೆ ಲಕ್ಷ್ಮೀವಲ್ಲಭತ್ವಾದಿಗಳ ಹೊರತು ವಿಷ್ಣುವಿನಂತೆ ಶಂಖಚಕ್ರಾದಿಧರತ್ವ ರೂಪವಾದ ತದ್ರೂಪಪ್ರಾಪ್ತಿರೂಪ ಸಾರೂಪ್ಯ. ಅದ ರಂತೆ ಶ್ರೀಕಂಠರೂ ಗೌರೀವಲ್ಲಭತ್ವಾದಿ ಧರ್ಮವಿಲ್ಲದ ಶಿವಸಾರೂಪ್ಯ ; ಎಂದರೆ ಶಿವನಂತೆ ತ್ರಿನೇತ್ರತ್ವ, ಚಂದ್ರಧರತ್ವಾದಿರೂಪ ; ಪ್ರಮಥರಿಗೆ ಲಭಿಸಿರುವಂತಹ ಶಿವರೂಪಪ್ರಾಪ್ತಿ ರೂಪ ಸಾರೂಪ್ಯ. ಇದನ್ನೇ ಶ್ರೀಕಂಠರು "ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ" (ಬ್ರ೦. ೪. ೧. ೩) ಎಂಬ ಸೂತ್ರ ಭಾಷ್ಯದ ಕಡೆಯಲ್ಲಿ ಉಪಾಸಕನಿಗೆ "ತ್ವಂ ವಾ ಅಹಮಸ್ಮಿ ಭಗವೋ ದೇವತೇ ಅಹಂ ವೈ ತ್ವಮಸ್ಮಿ" ಉಪಾಸಕ ನಿಗೆ ಬ್ರಹ್ಮವು ಅನುಗ್ರಹಿಸುವ ಪ್ರಸಾದವಿಷ್ಟೆ! 'ನೀನೇ ನಾನು ; ಅಥವಾ ನಾನೇ ನೀನು' ಎಂಬ ಭಾವ. ಎಂದರೆ ಒಬ್ಬ ರಾಜ ತನ್ನ ಆಪ್ತಸೇವಕನ ಮೇಲೆ ಪೂರ್ಣಕೃಪಾದೃಷ್ಟಿಯಿಟ್ಟು ತನ್ನ ಉಡು ಪನ್ನು ಅವನಿಗೆ ಧರಿಸಿ ಕೆಲವು ವಿಷಯಗಳಲ್ಲಿ ಮಾತ್ರ "ತಾನೇ ಅವನು, ಅವನೇ ತಾನು. ಅವನು ಮಾಡಿದ ಆಜ್ಞೆ ತಾನು ಮಾಡಿದಂತೆಯೇ!" ಎಂಬುವಷ್ಟು ಮಟ್ಟಿಗೆ ಅಧಿಕಾರ ನೀಡುವಿಕೆ. ಮುಂದೆ "ನಿರತಿಶಯ ಸ್ವರೂಪಾನಂದ ಸಾಕ್ಷಿ ಸ್ವಪ್ರಕಾಶ ಶಿವರೂಪ ಪರಾಹಂಭಾವಾಪತ್ತಿರ್ಮುಕ್ತಿಃ" ಎಂದರೆ ನಿರತಿಶಯವಾದ ಸ್ವರೂಪಾನಂದಕ್ಕೆ ಸಾಕ್ಷಿಭೂತವಾದ ಸ್ವಪ್ರಕಾಶ ಶಿವರೂಪದ ಪರಾಹಂ ಭಾವ". ಶ್ರೀಕಂಠ ಮತದಲ್ಲಿ ಶಿವರೂಪಪ್ರಾಪ್ತಿಯೇ ಮುಕ್ತಿ". ಪರಂ ಬ್ರಹ್ಮ ಚ ತಾದೃಗೇವ ತದ್ಭಾವನಯಾ ಉಪಾಸಕಶ್ಚ ತಥೈವ ಭವತಿ" ಎಂಬ ಭೇದದ್ಯೋತಕ ಔಪಮ್ಯವೇ ಸಾಧಿಸಲ್ಪಟ್ಟದೆ.

ಈ ಸೂತ್ರದ ಶ್ರೀಕರಭಾಷ್ಯದಲ್ಲಿ "ನಿರತಿಶಯ ಪರಮಾನಂದ ಚಿದಚಿತ್ಪ್ರಪಂಚವಿಲಕ್ಷಣ ಶಿವತತ್ತ್ವಪ್ರಾಪ್ತಿರೇವ ಮೋಕ್ಷಃ" ಎಂದರೆ ನಿರತಿಶಯ ಪರಮಾನಂದರೂಪವೂ ಚಿದಚಿತ್ ಪ್ರಪಂಚ ವಿಲಕ್ಷಣವೂ ಆದ ಶಿವತ್ವಪ್ರಾಪ್ತಿ. ಅರ್ಥಾತ್ ಸಾಮರಸ್ಯವೇ ಮುಕ್ತಿ" ಎಂದು ವೀರಶೈವ ಸಿದ್ಧಾಂತ ಸಿದ್ಧವಾದ ಸಾಮರಸ್ಯಾತ್ಮಕ ಮೋಕ್ಷವನ್ನು ಸೂಚಿಸಿದೆ. ಶಿವರೂಪ ಪ್ರಾಪ್ತಿ-ಶಿವತ್ವ ಪ್ರಾಪ್ತಿಗಳಿ ಗಿರುವ ಅಂತರವು ಇಲ್ಲಿ ಸ್ಪಷ್ಟವಾಗಿಯೇ ಇದೆ. ಆದ್ದರಿಂದಲೇ ಶ್ರೀಪತಿ ಪಂಡಿತರು ಶ್ರೀಕಂಠರು ಹೇಳುವ "ವಿಶಿಷ್ಟಾದ್ವೈತ" ಎಂಬ ಪದವನ್ನು ಒಪ್ಪುವುದಿಲ್ಲ. 'ವಿಶಿಷ್ಟಾದ್ವೈತಮಿತ್ಯುಕ್ತಿವಿರೋ ಧಾತ್, ವಿಶಿಷ್ಟಸ್ಯ ದುರ್ನಿರೂಪ್ಯತ್ವೇನ ಮಿಥ್ಯಾತ್ವಾಚ್ಚ ಶಿವಾದ್ವೈತಮೇವ ಗ್ರಾಹ್ಯಂ" ಎಂದು "ವಿಶಿಷ್ಟಾದ್ವೈತ"ವನ್ನು ನಿರಾಕರಿಸಿದ್ದಾರೆ. ಕ್ರಿಯಾಸಾರವು "ವಿಶಿಷ್ಟಾದ್ವೈತ" ಮತ್ತು "ಸಾರೂಪ್ಯ" ಪದಗಳನ್ನು ಬಳಸಿದೆಯಾದರೂ ಅವರ ವ್ಯುತ್ಪತ್ತಿ ಕ್ರಮವು ವೀರಶೈವ ಸಿದ್ಧಾಂತಾನುಗುಣವಾಗಿಯೇ ಇದೆ.

ಅಲ್ಲದೆ ಶ್ರೀಪತಿಪಂಡಿತರು "ಅನಾವೃತ್ತಿಶ್ಶಬ್ದಾತ್" ಎಂಬ ಕಡೆಯ ಸೂತ್ರಭಾಷ್ಯದಲ್ಲಿ "ಲೋಹರಸನ್ಯಾಯಾದಿವತ್ ಪರಮೇಶ್ವರೋಪಾಸಕಾನಾಂ ತದುಪಾಸನಾಮಹಿಮ್ನಾ ಸ್ವಾಭಾವಿಕ ಜೀವಭಾವ ನಿವೃತ್ತಿಪೂರ್ವಕ ಶಿವತ್ವ ಪ್ರಾಪ್ತಿರೇವ ಮೋಕ್ಷಃ" ಎಂದು ಸ್ಪಷ್ಟಪಡಿಸಿದ್ದಾರೆ.

## ಜಗದ್ವ್ಯಾಪಾರವರ್ಜ್ಯ ವಿಚಾರ

ವೀರಶೈವ ಸಿದ್ಧಾಂತದ ಪ್ರಕಾರ ಮುಕ್ತನಿಗೆ ಶಿವಸಾಮರಸ್ಯವನ್ನು ಒಪ್ಪಿದರೆ ಜೀವನು ಸಾಕ್ಷಾತ್ ಶಿವನೇ ಆಗುವುದರಿಂದ ಈತನಿಗೆ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ-ತಿರೋಧಾನ ಮತ್ತು

ಅನುಗ್ರಹ ಎಂಬ ಪಂಚ ಕೃತ್ಯಗಳ ಅಧಿಕಾರವೂ ಉಂಟೇ? ಎಂಬ ಸಂದೇಹವು ಮೂಡುತ್ತದೆ. ಆದರೆ ಬ್ರಹ್ಮಸೂತ್ರಕಾರರು ಮುಕ್ತನಿಗೆ "ಜಗದ್ವ್ಯಾಪಾರಾಧಿಕಾಕಳವಿಲ್ಲ" (ಬ್ರಂ. ಸು. ೪. ೪) ಎಂದು ತೀರ್ಮಾನಿಸಿರುವುದರಿಂದ ವೀರಶೈವವೂ ಅದಕ್ಕೆ ಹೊರತಾಗುವುದಿಲ್ಲ. ಏಕೆಂದರೆ ಮುಕ್ತನಿಗೆ ಅಗತ್ಯ ವಾದದ್ದು ನಿರತಿಶಯಶಿವಾನಂದ. ಅವನಿಗೆ ಜಗದ್ವ್ಯಾಪಾರದ ಗೊಡವೆ ಏಕೆ?

ಶ್ರುತಿಯಲ್ಲಿ "ನದೀಸಮುದ್ರ ನ್ಯಾಯದ ಉಪಮಾನವನ್ನು ಮುಕ್ತಿಗೆ ನೀಡಿರುವುದರಿಂದಲೂ, ಆಚಾರ್ಯರು "ಜಲೇ ಜಲಮಿವ, ವಹ್ನೌವಹ್ನಿರಿವ" ಎಂದು ಹೇಳಿರುವುದರಿಂದಲೂ ಮುಕ್ತನು ಶಿವ ನಲ್ಲಿ ಅವಿರಳಸಾಯುಜ್ಯವನ್ನು ಹೊಂದುತ್ತಾನೆ. ಆಗ ಜಗದ್ವ್ಯಾಪಾರವೂ ಅವನಿಗೆ ಬಂತಲ್ಲವೆ? ಎಂಬ ಶಂಕೆಗೆ ಉತ್ತರವು ಅಲ್ಲಿ ಸಿದ್ಧವಾಗಿಯೇ ಇದೆ.

ನಾನಾ ಕಡೆಗಳಿಂದ ಬೇರೆ ಬೇರೆ ನಾಮ-ರೂಪು-ರುಚಿಗಳುಳ್ಳ ನದಿಗಳು ಹರಿದು ಬಂದು ಸಮುದ್ರವನ್ನು ಹೊಕ್ಕು ತಮ್ಮ ತಮ್ಮ ನಾಮರೂಪಾದಿಗಳನ್ನು ಕಳೆದುಕೊಂಡು ನೀರು ನೀರಿನಲ್ಲಿ ಬೆರೆದು ಒಂದಾಗುವುದು ದಿಟ. ಆದರೂ ಆ ನೀರಿನಲ್ಲಿಯೂ ಎರಡು ಭಾಗಗಳು ಸ್ಪಷ್ಟವಾಗಿಯೇ ಇವೆ. ಎಂದರೆ ಸಮುದ್ರವನ್ನು ಸೇರಿದ ನದಿಗಳ ನೀರು ಸಮುದ್ರ ಹೊಕ್ಕರೂ ಸಮುದ್ರದ ಮೇಲ್ಪದ ರದ ನೀರು (Surface of the water) ಮಾತ್ರ ರವಿರಸ್ಮಿಗೆ ಸಿಕ್ಕಿ ಆವಿಯಾಗಿ ಮೇಲೇರಿ, ಮೋಡ ವಾಗಿ ಮಳೆಸುರಿದು ಮತ್ತೆ ಮತ್ತೆ ಸಮುದ್ರವನ್ನು ಸೇರುವುದೇ ಹೊರತು, ಸಮುದ್ರದ ತತ್ತಳದಲ್ಲಿರುವ ಜಲಾಂಶವು ಎಂದೆಂದಿಗೂ ರವಿರಸ್ಮಿಗೆ ಸಿಗದೆ ಪರಮ ಸೀತಲವನ್ನೇ ಹೊಂದಿರುತ್ತದೆ. ಅದರಂತೆ ಮುಕ್ತಾತ್ಮರೂ ಸಹ ಭವಿಜೀವಿಗಳಂತೆ ಪುನಃ ಪುನಃ ಜನನ ಮರಣಗಳಿಗೆ ಬಲಿಯಾಗದೆ ಕಡಲಿನ ತತ್ತಳ ಜಲದಂತೆ ಜಗದ್ವ್ಯಾಪಾರದ ಜಂಜಾಟವಿಲ್ಲದೆ ಕೇವಲ ಆನಂದಾತ್ಮಕ ವಿಭಾಗದಲ್ಲಿ ನಿತ್ಯ ಸುಖ ವನ್ನು ಅನುಭವಿಸುತ್ತಾರೆ. ಜಗದ್ವ್ಯಾಪಾರದ ಹೊಣೆ ಪರಮಾತ್ಮನದು. ಅದರಿಂದಲೇ ಅವನಿಗೆ ಶಕ್ತಿಯ ನೆರವು ಅಗತ್ಯ. ಮುಕ್ತನಿಗೆ ಜಗದ್ವ್ಯಾಪಾರದ ಹೊಣೆಯೇ ಇಲ್ಲದ್ದರಿಂದ ಗೌರೀವಲ್ಲಭತ್ವದ ಪ್ರಶ್ನೆಯೇ ಏಳುವುದಿಲ್ಲ!

ಹಾಗಾದರೆ ಪರಮಾತ್ಮನಲ್ಲಿಯೂ ಕೂಡ ಜಗದ್ವ್ಯಾಪಾರ ವಿಭಾಗ ಮತ್ತು ಅದಿಲ್ಲದ ವಿಭಾಗವೆಂಬುದು ಉಂಟೆ? ಎಂಬ ಶಂಕೆಗೆ ಶ್ರುತಿ ಸಮಾಧಾನ ಹೇಳಿದೆ. ಹೇಗೆಂದರೆ- "ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂಬಲ್ಲಿ ಪರಮಾತ್ಮನು ತನ್ನ ಅನುಪಮ ಪ್ರಭಾವ (ಪಾದ) ನಾಲ್ಕನೆ ಒಂದುಭಾಗವನ್ನು ಜಗತ್ತಿನ ವ್ಯಾಪಾರಕ್ಕಾಗಿ ತೆಗೆದಿಟ್ಟಿದ್ದಾನೆ. ಇನ್ನು ಉಳಿದ ಮೂರು (ಪಾದ) ಭಾಗವನ್ನು ಅವನು ತನ್ನಲ್ಲೇ ನಿಕ್ಷೇಪಿಸಿದ್ದಾನೆ. "ತ್ರಿಪಾದಸ್ಯಾಮೃತಂ ದಿವಿ". ಮುಕ್ತಾತ್ಮರು ನಿತ್ಯಾನಂದವನ್ನು ಅನುಭವಿರುವುದು ಅಲ್ಲಿಯೇ. ಲೋಕದಲ್ಲಿಯೂ ಕೂಡ ಒಬ್ಬಾ ನೊಬ್ಬ ಧನಿಕನು ತನ್ನ ಸಂಪತ್ತಿನ ಪಾದಭಾಗವನ್ನು ತನ್ನ ವ್ಯವಹಾರದಲ್ಲಿ ತೊಡಗಿಸಿ, ಉಳಿದ ಮೂರು ಭಾಗಗಳನ್ನು (Reserve fund) ಮುಡಿಪಾಗಿಟ್ಟು ವ್ಯವಹರಿಸುತ್ತಾನೆ. ಅದರಂತೆ ಇಲ್ಲಿಯೂ ಸಹ ಮುಕ್ತಾತ್ಮರು ಜಗದ್ವ್ಯಾಪಾರರೂಪವಾದ ಭವಚಕ್ರವನ್ನು ದಾಟಿ, ನಿತ್ಯಾನಂದಾತ್ಮಕ ವಾದ ಅಖಂಡಾನಂದದಲ್ಲಿ ತನ್ಮಯರಾಗಿರುತ್ತಾರೆ.

ಅದನ್ನೇ ಶ್ರೀಕರಭಾಷ್ಯದಲ್ಲಿ "ಪರಶಿವ ಕೈಲಾಸವಾಸಿಗಳಾದ ನಿತ್ಯಮುಕ್ತರಿಗೇ ಸ್ವೇಚ್ಛೆಯಿಂದ ಸಂಚರಿಸುವುದನ್ನೂ ಶರೀರಾಭಿಮಾನರಹಿತರಾಗಿ ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನ ಶಕ್ತಿ ವ್ಯಾಪಾರ ವುಳ್ಳ ನಿಷ್ಕಾಮರಿಗೆ ನಿತ್ಯವೈಭವ ಪರಮಾನಂದಕಂದ ಸ್ವಪ್ರಕಾಶ ವಿಭೂತಿಮಯ ಶಿವಸಾಮ

ರಸಾತ್ಮಕ ಸ್ವಾರೂಪ್ಯ-ರಸೈಕಸ್ವಪ್ರಪಂಚ-ಶಿವಸಾಗಾಹಿಗಳಾದವರಿಗೆ, ಸಂಪೂರ್ಣ-ಸರ್ವಾತ್ಮಕಭಾವ ಪ್ರಕಟನವನ್ನೇ ಶ್ರುತಿಯು ಸೂಚಿಸಿದೆ. "ಅಹಮನ್ನಮಹಮನ್ನಮಹಮನ್ನಮ್" - "ಅಹಮನ್ನಾದೋಽಹಮನ್ನಾದೋಽಹಮನ್ನಾದಃ". ಇತ್ಯಾದಿಗಳಿಂದ ಶ್ರುತಿಯು ಮುಕ್ತಾನುಭವವನ್ನು ಸ್ಪಷ್ಟಪಡಿಸಿದೆ.

ಆಕಾಶದಂತೆ ಸರ್ವವ್ಯಾಪಕ-ಶಿವತತ್ತ್ವಾನಂದಾನುಭವವುಳ್ಳ ಶಿವಯೋಗ-ಸಮಾಧಿನಿಷ್ಠರಾದ ಜೀವನ್ಮುಕ್ತಶಿವಯೋಗಿಗಳು ಸ್ವಯಂ ವೃಥಶಿವಸಾರೂಪ್ಯಧಾರಿಗಳಾದರೂ ಕೂಡ ಅವರಿಗೆ ಜಗದ್ವ್ಯಾಪಾರದ ಬಯಕೆ ಇರುವುದಿಲ್ಲ. ಜಗದ್ವ್ಯಾಪಾರ-ಜಂಜಡವು ಶಿವನಿಗೇ ಮೀಸಲು ! ಅವರ ಗೊಡವೆ ಮುಕ್ತರಿಗೆ ಅನಗತ್ಯ.

## ಪ್ರಮಾಣ ವಿಚಾರ

ದಾರ್ಶನಿಕರಲ್ಲಿ–

ಚಾರ್ವಾಕರು ಪ್ರತ್ಯಕ್ಷ-ಪ್ರಮಾಣವೊಂದನ್ನೇ ಒಪ್ಪುತ್ತಾರೆ ;

ಬೌದ್ಧ-ವೈಶೇಷಿಕರು ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಒಪ್ಪುತ್ತಾರೆ ;

ಸಾಂಖ್ಯ-ವೀರಶೈವರು ಪ್ರತ್ಯಕ್ಷ. ಅನುಮಾನ ಮತ್ತು ಶಬ್ದ ಎಂದು ಮೂರು ಪ್ರಮಾಣಗಳನ್ನು ಒಪ್ಪುತ್ತಾರೆ ;

ನೈಯಾಯಿಕರು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂದು ನಾಲ್ಕು ಪ್ರಮಾಣಗಳನ್ನು ಒಪ್ಪುತ್ತಾರೆ;

ಪ್ರಾಭಾಕರರು ಹಿಂದೆ ಹೇಳಿದ ನಾಲ್ಕು ಪ್ರಮಾಣಗಳ ಜೊತೆಗೆ ಅರ್ಥಾಪತ್ತಿಯೂ ಸೇರಿ ಐದು ಪ್ರಮಾಣಗಳನ್ನು ಒಪ್ಪುತ್ತಾರೆ ;

ಭಾಟ್ಟರು ಮತ್ತು ಅದ್ವೈತಿಗಳು ಹಿಂದೆ ಹೇಳಿದವುಗಳ ಜೊತೆಗೆ ಅನುಪಲಬ್ಧಿಯೂ ಸೇರಿ ಆರು ಪ್ರಮಾಣಗಳನ್ನು ಒಪ್ಪುತ್ತಾರೆ ;

ಪೌರಾಣಿಕರು ಮತ್ತು ಐತಿಹಾಸಿಕರು ಹಿಂದಿನವುಗಳ ಜೊತೆಗೆ ಸಂಭವ ಮತ್ತು ಐತಿಹ್ಯ ಎಂಬ ಒಟ್ಟು ಎಂಟು ಪ್ರಮಾಣಗಳನ್ನು ಒಪ್ಪುತ್ತಾರೆ.

ವೀರಶೈವರು ಒಪ್ಪಿರುವ ಪ್ರಮಾಣತ್ರಯದಲ್ಲಿಯೇ ಉಳಿದ ಪ್ರಮಾಣಗಳ ಅಂತರ್ಭಾವವು ಹೀಗಿದೆ–

ಪ್ರತ್ಯಕ್ಷದಲ್ಲಿ ಅನುಪಲಬ್ಧಿ,

ಅನುಮಾನದಲ್ಲಿ ಉಪಮಾನ-ಅರ್ಥಾಪತ್ತಿ-ಸಂಭವಗಳು,

ಶಬ್ದದಲ್ಲಿ ಐತಿಹ್ಯ

ಅಂತರ್ಭಾವವಾಗುವುದರಿಂದ ಇಲ್ಲಿ ಇತರ ಪ್ರಮಾಣಗಳ ಅಗತ್ಯವಿರುವುದಿಲ್ಲ.

ಆದರೆ ವೀರಶೈವರಿಗೆ ಮೇಲೆ ಹೇಳಿದ ಪ್ರತ್ಯಕ್ಷ. ಅನುಮಾನ, ಮತ್ತು ಶಬ್ದ ಎಂಬ ಈ ಪ್ರಮಾಣಗಳ ಜೊತೆಗೆ ಅರ್ಥಾಪತ್ತಿಯೂ ಅಗತ್ಯ ; ಎಂದು ವಾತೂಲತಂತ್ರಟೀಕೆಯ ಉಪೋದ್ಘಾತದಲ್ಲಿ ಹೇಳಿದೆ. [1]

---

[1] ವಾತೂಲತಂತ್ರ-ಟೀಕೆಯ ಉಪೋದ್ಘಾತ, (ಗುಪ್ತ ಮಲ್ಲಣಾರ್ಯವಿರಚಿತ.)

ಪಾರಮೇಶ್ವರ-ತಂತ್ರ ಮತ್ತು ಪೌಷ್ಕರಗಳಲ್ಲಿ ಪರಮೇಶ್ವರನು ಪ್ರಮಾಣಲಕ್ಷಣಗಳನ್ನು ಹೀಗೆ ನಿರೂಪಿಸಿದ್ದಾನೆ-

"ಚತ್ವಾರಿ ತಾನಿ ಮಾನಾನಿ ಪ್ರತ್ಯಕ್ಷಾದೀನಿ ಹೇ ದ್ವಿಜಾಃ ।
ಪ್ರತ್ಯಕ್ಷಮನುಮಾನಂ ಚ ಶಬ್ದಾರ್ಥಾಪತ್ತಿರೇವ ಚ ॥"

ಎಂದು ಆರಂಭಿಸಿ, ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಪ್ರಮಾಣಗಳ ಸ್ವರೂಪವನ್ನು ವಿವರಿಸಿ, ಮುಂದೆ ಅರ್ಥಾಪತ್ತಿಯನ್ನು ಕುರಿತು-

"ದೃಶ್ಯಮಾನಮಸರ್ವಜ್ಞಂ ಕಲ್ಪಯೇತ್ ಸೋಪಪಾದಕಮ್ ।
ಪಶುಷ್ವೇವ ಪಶುತ್ವಾಖ್ಯಂ ಸರ್ವಜ್ಞೇ ಶಾಸ್ತ್ರತಃ ಸ್ಥಿತೇ ॥"

ಎಂಬಲ್ಲಿ ಶಿವನು "ಸರ್ವಜ್ಞ" ಎಂದಾಗ ಕಣ್ಣಿಗೆ ಕಾಣುವ ಉಳಿದ ಸೃಷ್ಟಿಯೆಲ್ಲವೂ "ಅಸರ್ವಜ್ಞ" ಎಂದು ಅರ್ಥವಾಗುತ್ತದೆ. ಎಂದು ಸಮರ್ಥಿಸಲಾಗಿದೆ. ಇಲ್ಲಿ "ಪೀನೋ ದೇವದತ್ತೋ ದಿವಾ ನ ಭುಂಕ್ತೇ" ಎಂದರೆ "ದಷ್ಟಪುಷ್ಟನಾಗಿರುವ ದೇವದತ್ತನು ಹಗಲು ಉಣ್ಣುವುದಿಲ್ಲ." ಎಂಬಲ್ಲಿ ಅವನು "ರಾತ್ರಿ ಉಣ್ಣುತ್ತಾನೆ." ಎಂಬುದು ಆಕ್ಷಿಪ್ತವಾಗುತ್ತದೆ. ಅದರಂತೆ ಈ ಸಿದ್ಧಾಂತವು ಅರ್ಥಾಪತ್ತಿ ಪ್ರಮಾಣವನ್ನು ಅಂಗೀಕರಿಸಿದೆ. ಈ ದೃಷ್ಟಿಯಿಂದ ವೀರಶೈವವು ನಾಲ್ಕು ಪ್ರಮಾಣಗಳನ್ನು ಒಪ್ಪಿದೆ.

## ವೀರಶೈವ ಸಮ್ಮತಗಳು

### (ಕ) ಆಗಮ ಸಾಂಕರ್ಯವಿಚಾರ

ವೀರಶೈವವು ಇಪ್ಪತ್ತೆಂಟು ಶಿವಾಗಮಗಳನ್ನು ಪ್ರಮಾಣವೆಂದು ಒಪ್ಪಿದೆ. ಅದರಲ್ಲಿಯೂ "ಈ ವೀರಶೈವವು ಈ ಆಗಮಗಳ ಉತ್ತರ ಭಾಗದಲ್ಲಿದೆ" ಎಂದು ಸಿದ್ಧಾಂತಶಿಖಾಮಣಿಯು "ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ[1]" ಎಂದು ಘೋಷಿಸಿದೆ. ಆದ್ದರಿಂದ ವೀರಶೈವರಿಗೆ ಶಿವಾಗಮಗಳಲ್ಲಿ ವೀರಶೈವವನ್ನು ಸಮರ್ಥಿಸುವ ಉತ್ತರಭಾಗಗಳು ಪರಮಪ್ರಾಮಾಣ್ಯ.

ಬೇರೆ ಆಗಮಗಳಲ್ಲಿ ಆಗಮಸಾಂಕರ್ಯವನ್ನು ದೋಷ ಎಂದು ಪರಿಗಣಿಸಿದೆ. ಆದರೆ ವೀರಶೈವದಲ್ಲಿ ಅದು ದೋಷವಲ್ಲ; ಪೂರ್ವಶೈವರಲ್ಲಿ ಯಾವುದಾದರೊಂದು ಆಗಮ-ಸಂಪ್ರದಾಯದವರು ಮತ್ತೊಂದು ಆಗಮೋಕ್ತ-ವಿಧಿವಿಧಾನಗಳನ್ನು ಎಸಗುವುದಿಲ್ಲ. ಉದಾ :- ಒಂದು ಆಗಮ ಕ್ರಮದಂತೆ ದೇವತಾಪ್ರತಿಷ್ಠಾದಿಗಳು ನಡೆದಿರುವಲ್ಲಿ ಮತ್ತೊಂದು ಆಗಮ-ಸಂಪ್ರದಾಯದರೀತ್ಯಾ ಅಲ್ಲಿ ಪೂಜಾದಿ-ಕೈಂಕರ್ಯವನ್ನು ಎಸಗಬಾರದು. ಹಾಗೆ ಮಾಡಿದಲ್ಲಿ ಅದು "ಆಗಮ-ಸಾಂಕರ್ಯ" ಎಂಬ ದೋಷವಾಗುತ್ತದೆ.

ಆದರೆ- ವೀರಶೈವವು ಇಲ್ಲಿ ತನ್ನ ವಿವೇಚನೆಯನ್ನು ಹೀಗೆ ಸೂಚಿಸಿದೆ-

"ದಿವ್ಯಾಗಮಾರ್ಥಸಾಂಕರ್ಯಮೈಕತಂತ್ರಾನ್ನ ದೋಷಕೃತ್ ।
ಕಿಂತು ಪಾಶುಪತಾದ್ಯರ್ಥಸಾಂಕರ್ಯಂ ತೇಷು ದೋಷಕೃತ್ ॥

---

[1] ಸಿ. ಶಿ. ಪ. ೫.

ತೇಷ್ವಪ್ಯೇಕಂ ಸಮಾಶ್ರಿತ್ಯ ಗ್ರಾಹ್ಯಮನ್ಯದುಪೇಕ್ಷತೇ ।
ಇತ್ಯೇತನ್ಮಾನುಷೇ ಲಿಂಗೇ ನ ತು ಸ್ವಾಯಂಭುವಾದಿಷು ॥

ಏಕಾಗಮಾವಲಂಬೇऽಪಿ ಪ್ರವಿಹಾಯ ತದೀರಿತಮ್ ।
ಪ್ರಶಸ್ತಮನ್ಯತೋ ಗ್ರಾಹ್ಯಮಿತ್ಯನ್ವಾದಿಶದೀಶ್ವರಃ ॥

ಎಂದರೆ "ದಿವ್ಯಾಗಮಗಳಲ್ಲಿ ಎಲ್ಲ ಆಗಮಗಳ ಉದ್ದೇಶವೂ ಒಂದೇ ಆದ್ದರಿಂದಲೂ, ಅವೆಲ್ಲವೂ ಒಬ್ಬನೇ ಪರಶಿವನ ಉಕ್ತಿಯಾದ್ದರಿಂದಲೂ ಆಗಮಸಾಂಕರ್ಯದೋಷವಿಲ್ಲ. ಅಲ್ಲಿ ಪತಿ-ಪಶು-ಪಾಶಗಳಲ್ಲಿ ಅರ್ಥಸಾಂಕರ್ಯವನ್ನು ಮಾಡಬಾರದೇ ಹೊರತು ಕ್ರಿಯಾಸಾಂಕರ್ಯವನ್ನೆಸಗಬಾರದು. ಆಗಮಗಳಲ್ಲಿ ಯಾವುದಾದರೊಂದು ಆಗಮವನ್ನು ಆಶ್ರಯಿಸಿದವರು ಉಳಿದ ಆಗಮಗಳ ಆದೇಶಗಳನ್ನು ಉಪೇಕ್ಷಿಸಬಾರದು. ಈ ನಿಯಮವು ಮಾನವಪ್ರತಿಷ್ಠಿತಶಿವಲಿಂಗಗಳಿಗಲ್ಲದೆ ಸ್ವಯಂಭುವೆನಿಸಿದ ಜ್ಯೋತಿರ್ಲಿಂಗಗಳಿಗೆ ಅಲ್ಲ. ಒಂದು ಆಗಮವನ್ನು ಆಶ್ರಯಿಸಿ, ಅರ್ಚನಾದಿಗಳನ್ನು ಮಾಡುವವರೂ ಕೂಡ, ಆ ವಿಧಾನವಲ್ಲಿ ಪ್ರಶಸ್ತವಾದದ್ದು ಮತ್ತೊಂದು ಆಗಮದಲ್ಲಿದ್ದರೆ ಅದನ್ನು ಸ್ವೀಕರಿಸಬಹುದು. ಪ್ರಾಶಸ್ತ್ಯವು ಇಬ್ಬರಿಗೂ ಒಮ್ಮತವೇ ಅಲ್ಲವೆ? ಎಲ್ಲ ದಿವ್ಯಾಗಮಗಳೂ ಶಿವೋಕ್ತವೇ ಆಗಿರುವುದರಿಂದ ಸಾಧಕರು ತಮಗೆ ಅಭಿಮತವಾದ ಯಾವುದೇ ಆಗಮವನ್ನಾದರೂ ಅನುಸರಿಸಿ, ಕೈಂಕರ್ಯಾದಿಗಳನ್ನು ಎಸಗುವಲ್ಲಿ ಯಾವ ದೋಷವೂ ಇಲ್ಲ."

(ಕ್ರಿಯಾಸಾರ ಉ. ೧೪. ಪು. ೨೦೨)

(ಖ) ಸ್ಥಲತತ್ತ್ವಸ್ವರೂಪ

ಪತಿ ಎಂಬ ಹೆಸರುಳ್ಳ ಬ್ರಹ್ಮವನ್ನು ಇಲ್ಲಿ ಸ್ಥಲ ಎಂದು ಕರೆಯಲಾಗಿದೆ. ಈ ಬಗ್ಗೆ ಅನುಭವ-ಸೂತ್ರದಲ್ಲಿ ಮಗ್ಗೆಮಾಯಿದೇವರು ಹೀಗೆ ಹೇಳಿದ್ದಾರೆ–

"ಸಚ್ಚಿದಾನಂದಲಕ್ಷಣವುಳ್ಳ ಪರಬ್ರಹ್ಮವೆಂಬ ಶಿವತತ್ತ್ವವನ್ನು ಶಿವಾಚಾರ್ಯರು "ಸ್ಥಲ" ಎಂದು ಕರೆದಿದ್ದಾರೆ. ಮಹದಾದಿತತ್ತ್ವಗಳೆಲ್ಲಕ್ಕೂ ಇದು ಆಶ್ರಯಸ್ಥಾನ. ಅಷ್ಟೇ ! ಅಲ್ಲ. ಅವೆಲ್ಲವೂ ಅಡಗಿರುವುದು ಇಲ್ಲಿಯೇ "ಸ್ಥ" ಎಂದರೆ ಪ್ರಾಕೃತವೂ ಪೌರುಷವೂ ಆದ ವಿಶ್ವವು ಹಿಂದೆ ಎಲ್ಲಿ ಅಡಗಿತ್ತೋ, "ಲ" ಎಂದರೆ ಮತ್ತೆ ಪ್ರಳಯದಲ್ಲಿ ಇದೆಲ್ಲವೂ ಎಲ್ಲಿ ಲಯವನ್ನು ಹೊಂದುವುದೋ ಅದು ಸ್ಥಲ."

(– ಅನು. ಸೂ. ಅಧಿ. ೨.)

ಆ ಸ್ಥಲ ತತ್ತ್ವವು ಜಗತ್ತನ್ನು ಸೃಷ್ಟಿಸಬೇಕೆಂದು ಬಯಸಿದಾಗ ಅದು ತನ್ನ ಲೀಲೆಗಾಗಿ ಸ್ವಶಕ್ತಿಕ್ಷೋಭಮಾತ್ರದಿಂದ 'ಲಿಂಗಸ್ಥಲ' ಮತ್ತು "ಅಂಗಸ್ಥಲ" ಎಂದು ಇರ್ಕರಿನಾಯಿತು.

ಲಿಂಗಾಂಗೋಪಾಧಿಭೇದೇನ ದ್ವಿಧಾ ಭಿನ್ನಂ ಪರಸ್ಪರಮ್ ।
ಮಹಾನ್ ಘಟಪ್ರಭೇದೇನ ಯಥಾಕಾಶಃ ಪ್ರತೀಯತೇ ॥

ಒಂದೇ ಆಕಾಶವು ಘಟಾಕಾಶ, ಮಠಾಕಾಶ, ಮಹಾಕಾಶವೆಂದು ತೋರುವಂತೆ. ಶಿವ-ರುದ್ರ ಮುಂತಾಗಿ ಹೆಸರು ತಳೆದ ಲಿಂಗತತ್ತ್ವವು ಉಪಾಸ್ಯವಾಯಿತು. ಜೀವ-ಪುರುಷ-ಮುಂತಾಗಿ ಕರೆಯಲ್ಪಟ್ಟ ಅಂಗತತ್ತ್ವವು ಉಪಾಸಕವಾಯಿತು. ತನ್ನನ್ನು ತಾನೇ ಅರ್ಚಿಸಿಕೊಳ್ಳಬೇಕೆಂಬ ಲೀಲೆ ಅದಕ್ಕೆ ! "ರುದ್ರೋ ಭೂತ್ವಾ ರುದ್ರಮರ್ಚಯೇತ್" "ಶಿವಸ್ಯೈವ ಶಿವೋಪಾಸ್ತಿಃ" ಶಿವನಾಗದವನು ಶಿವನನ್ನು ಅರ್ಚಿಸಲಾರ. ಶಿವಾರ್ಚನೆಗೆ ಅರ್ಹತೆ ಪಡೆಯದೆ ಶಿವೋಪಾಸನೆ ಮಾಡಬಾರದು ; ಎಂಬುದು ಇದರ ತಾತ್ಪರ್ಯ.

ಚಿನ್ಮಾತ್ರವೆನಿಸಿದ ಸ್ಥಲವೇ ಲಿಂಗ ; ಜೀವನೇ ಅಂಗ. ಹೇಗೆ ಸ್ಥಲವು ಲಿಂಗ-ಅಂಗವೆಂದು ಇರ್ತೆರನಾಯಿತೋ ಅದರಂತೆ ಸ್ಥಲತತ್ತ್ವದಲ್ಲಿ ಅವಿನಾಭಾವದಿಂದಿರುವ ಶಕ್ತಿಯೂ ಕೂಡ ಇರ್ತೆರನಾಯಿತು. ಲಿಂಗಗತವಾದ ಶಕ್ತಿ ಕಲೆಯೆನಿಸಿತು. ಅಂಗಗತವಾದ ಶಕ್ತಿ ಭಕ್ತಿಯೆನಿಸಿತು. ಒಟ್ಟಿನಲ್ಲಿ ಶಕ್ತಿ-ಭಕ್ತಿಗಳಿಗೆ ಭೇದವಿಲ್ಲ. ಆದರೆ ವಿಚಾರ ಮಾಡಿದರೆ ಪ್ರವೃತ್ತಿಮಾರ್ಗದಲ್ಲಿ ಜೀವನು ಸಂಸಾರಕ್ಕೆ ಬರಲು ಕಾರಣವಾದ ಶಕ್ತಿಗಿಂತಲೂ, ಅಂತಹ ಜೀವನನ್ನು ಗುರುಕೃಪೆಗೆ ಪಾತ್ರನನ್ನಾಗಿ ಮಾಡಿ, ಶಿವದೀಕ್ಷಾಪೂರ್ವಕವಾಗಿ ಅವನಿಗೆ ಶಿವಸ್ವರೂಪವನ್ನು ಕರುಣಿಸುವ ಭಕ್ತಿಯೆ ಮಿಗಿಲು.

(-- ಅನು. ಸೂ. ಅಧಿ. ೨)

(ಗ) ಜೀವನು ಶಿವನ ಅಂಶ

ಈ ಸಿದ್ಧಾಂತದಲ್ಲಿ ಜೀವನು ಶಿವನ ಅಂಶ. ಲಕುಲೀಶಪಾಶುಪತರು ಹೇಳುವಂತೆ ಜೀವ ವಿಭುವಲ್ಲ. ಅನಾದಿವಾಸನಾವಿಶೇಷದಿಂದ ಅವನು ಸಂಸಾರಿ. ಪುಣ್ಯವಿಶೇಷದಿಂದ ಅವನು ಮಾನವ ಜನ್ಮ ತಳೆಯುತ್ತಾನೆ. ಪುಣ್ಯಾಧಿಕನೂ ಪಾಪದೂರನೂ ಆದ ಜೀವನ ಮೇಲೆ ಶಿವಕಾರುಣ್ಯರೂಪ ಶಕ್ತಿಪಾತವಾಗುತ್ತದೆ. ಶಕ್ತಿಪಾತಲಕ್ಷಣವನ್ನು ಹಿಂದೆ ಹೇಳಿದೆ (ಭೂಮಿಕೆ ಪು. ೩೨-೩೩) ಗುರು ಭಕ್ತನ ಶಕ್ತಿಪಾತಲಕ್ಷಣಗಳನ್ನು ಗುರ್ತಿಸಿ ಅವನಿಗೆ ಲಿಂಗಧಾರಣರೂಪ-ಶಿವದೀಕ್ಷೆ ಎಸಗುತ್ತಾನೆ. ಶಿಷ್ಯನು ಗುರುವಿನ ಆದೇಶದಂತೆ ಅಷ್ಟಾವರಣ-ಪಂಚಾಚಾರ ಮತ್ತು ಷಟ್‌ಸ್ಥಲಗಳಲ್ಲಿ ನಿರತನಾಗಿ, ಬೆಂಕಿಯಿಂದ ಸಿಡಿದುಬಂದ ಕಿಡಿ ರಂಜಕವಸ್ತುವಿನಲ್ಲಿ ಬಿದ್ದು ಮತ್ತೆ ಅಗ್ನಿಸ್ವರೂಪ ತಳೆವಂತೆ ; ರವಿಕಿರಣ ತಾಪಕ್ಕೆ ಕಾಯ್ದು ಕಡಲ ಜಲ ಮೇಘವಾಗಿ ಮಳೆಗರೆದು ನದಿಯಾಗಿ ಮತ್ತೆ ಸಮುದ್ರವನ್ನೇ ಸೇರುವಂತೆ ಅಂಗನು ಜೀವಗುಣಗಳಿಂದ ಬಿಡಲ್ಪಟ್ಟು, ಶಿವತ್ವವು ಅಭಿವ್ಯಕ್ತವಾಗಿ ಮುಕ್ತನಾಗುವನು.

(ಘ) ಪಂಚಸೂತಕನಿರಾಕರಣ

ವೀರಶೈವವು ಅತ್ಯಾಶ್ರಮವೆಂದು ಹೇಳಲಾಗಿದೆ. ಸಿದ್ಧಾಂತ-ಶಿಖೋಪನಿಷತ್ತಿನಲ್ಲಿ-

ಅತ್ಯಾಶ್ರಮಿತ್ವಾತ್ ಗಣವಂಶಜಾನಾಂ
ಲಿಂಗಾಂಗಸಂಗಿನಾಂ ತತ್ರಾಜನ್ಮಾಂತದೀಕ್ಷಾ ।
ಯಥಾ ಗಂಗಾ ಶಿವಸಂಗಾತ್ತಥೈವ
ನ ಸೂತಕಂ ವಾ ನಾಪ್ಯಶುಚಿತ್ವಮೇಷಾಮ್ ॥ ೧೨ ॥

ಎಂದರೆ ವೀರನಂದ್ಯಾದಿ-ಪ್ರಮಥಗೋತ್ರಕ್ಕೆ ಸೇರಿದವರೂ ಲಿಂಗಾಂಗಿಗಳೂ ಆದ ವೀರಶೈವರು ಅತ್ಯಾಶ್ರಮಿಗಳು ;- ಎಂದರೆ ಅತಿಶಯವಾದ ಬ್ರಹ್ಮಚರ್ಯವೇ ಮುಂತಾದ ಆಶ್ರಮಗಳುಳ್ಳವರು. ಆದ್ದರಿಂದ ಇತರರಿಗೆ ಮಾಡುವ ಶಿವದೀಕ್ಷಾಸಂಸ್ಕಾರವು ಅವರ ಮರಣ ಪರ್ಯಂತವೂ ಇರತಕ್ಕದ್ದು. ಲಿಂಗಧಾರಣಾತ್ಮಕವಾದ ಈ ವ್ರತವು ಮುಂಡಕಾದಿಉಪನಿಷತ್ತುಗಳಲ್ಲಿ ಶಿರೋವ್ರತ, ಪಾಶುಪತ ವ್ರತ, ಶಾಂಭವವ್ರತ ಮುಂತಾಗಿ ಹೇಳಲ್ಪಟ್ಟು ಬ್ರಹ್ಮವಿದ್ಯೆಗೆ ಅರ್ಹತೆ ಪಡೆದಿದೆ.

ಲಿಂಗಧಾರಣವು ನಿತ್ಯ. ಅದು ಸ್ತ್ರೀಪುರುಷರೀರ್ವರಿಗೂ ಉಂಟು. ಆದರೆ- ರಜಸ್ವಲೆಯರು, ಪ್ರಸವಿಸಿದವರು ಆದ ಸ್ತ್ರೀಯರು ದರ್ಶನಸ್ಪರ್ಶನಾದಿಗಳಿಗೆ ಅನರ್ಹರು ; ಎಂದ ಮೇಲೆ ಅವರು ಲಿಂಗ

ಧಾರಣ-ಪೂಜಾದಿಗಳಿಗೆ ಯೋಗ್ಯರಾಗುವ ಬಗೆ ಹೇಗೆ ? ಎಂಬ ಶಂಕೆಯನ್ನು ಮೇಲಿನ ಶ್ರುತಿಯು ನಿರಾಕರಿಸಿದೆ. ಭಾಗೀರಥಿ ಎನಿಸಿರುವ ನದಿಯು, ನಿತ್ಯಶುದ್ಧನಾದ ಶಿವನ ಸಂಗದಿಂದ ನಿತ್ಯಪವಿತ್ರವಾಗಿದೆ. ಅದಕ್ಕೆ ಸೂತಕಾದಿಗಳ ಹಂಗಿಲ್ಲ. ಗಂಗೆಯಲ್ಲಿ ಮಿಂದವರು ಯಾರೇ ಆಗಲಿ, ಅವರು ಪವಿತ್ರರಾಗುವರೇ ಹೊರತು ಗಂಗೆ ಇತರಜಲಗಳಂತೆ ಅಪವಿತ್ರವಾಗುವುದಿಲ್ಲ. ಅದರಂತೆ ಲಿಂಗಾಂಗಿಗಳಾದ ವೀರಶೈವಸ್ತ್ರೀಪುರುಷರಿಗೆ ಜನನಾದಿಸೂತಕಗಳ ಹಂಗಿಲ್ಲ.

ಯಥಾವಿಶ್ವೇಶಸಿಕಟಾತ್ ಗಂಗಾ ಸೂತಕವರ್ಜಿತಾ ।
ತಥಾ ಲಿಂಗಾಂಕಿತಾ ಭಕ್ತಾಃ ಪಂಚಸೂತಕ ವರ್ಜಿತಾಃ ॥

(– ಲಿಂಗಸಾರ)

ಸ್ವೇಷ್ಟಲಿಂಗೈಕ-ಪೂಜಾಯಾಂ ನೈವಾಶೌಚಂ ವಿಧಿಯತೇ ।
ಪೌಂಡರೀಕೇ ರಜಃ ಸ್ತ್ರೀಣಾಂ ಸ್ವಾಗ್ನಿಹೋತ್ರೇ ಯಥಾ ತಥಾ ॥

"ಗಂಗೆಯು ವಿಶ್ವೇಶ್ವರ ಸಾನ್ನಿಧ್ಯವನ್ನು ಹೊಂದಿರುವುದರಿಂದ ಅದಕ್ಕೆ ಹೇಗೆ ಸೂತಕದೋಷವಿಲ್ಲವೋ ಅದರಂತೆ ಲಿಂಗಪೂಜಾನಿರತರಾದ ಶಿವಭಕ್ತರಿಗೆ ಅವರವರ ಲಿಂಗಪೂಜೆಗೆ ಮಾತ್ರ ಜನನ-ಮರಣ-ಪ್ರಸವ-ಉಚ್ಛಿಷ್ಟ-ರಜಸ್ಸು ಎಂಬ ಐದು ಸೂತಗಳು ಇಲ್ಲ. ಪೌಂಡರೀಕಯಾಗದಲ್ಲಿ ಕಂಕಣಬದ್ಧರಾದ ಸ್ತ್ರೀಯರು ರಜಸ್ವಲೆಯರಾದರೂ ಅವರಿಗೆ ಸಂಕಲ್ಪಿಸಿರುವ ಅಗ್ನಿಹೋತ್ರಕ್ಕೆ ಮಾತ್ರ ಹೇಗೆ ಸೂತಕವಿಲ್ಲವೊ ಅದರಂತೆ. ಮತ್ತು ನಾಲಗೆಯು ಎಂಜಲಾದ್ದರಿಂದ ಅದನ್ನು ಕೈಯಿಂದ ಮುಟ್ಟಬಾರದು ; ಆದರೂ ಅದು ಮಂತ್ರೋಚ್ಚಾರಣಕ್ಕೆ ಮಾತ್ರ ಪವಿತ್ರವೆನಿಸುವಂತೆ ವೀರಶೈವರು ತಮ್ಮ ಇಷ್ಟಲಿಂಗ ಪೂಜಾದಿಗಳಿಗೆ ಮಾತ್ರ ಪವಿತ್ರರೇ ಹೊರತು ಅವರು ಇತರರ ಸ್ಪರ್ಶಾದಿಗಳಿಗೆ ಅರ್ಹರಲ್ಲ."

(ಸಿದ್ಧಾಂತಾಗಮ)

ಆದ್ದರಿಂದ ರಜಸ್ವಲೆಯರೂ ಪ್ರಸವಿಸಿದವರೂ ಆದ ಸ್ತ್ರೀಯರು ಲಿಂಗಧಾರಣ ಪೂಜಾದಿಗಳಿಗೆ ಮಾತ್ರ ಪರಿಶುದ್ಧರೇ ಹೊರತು, ಕಾರ್ಯಾಂತರಕ್ಕಲ್ಲ : ಇವೇ ಮುಂತಾದ ವಿಷಯಗಳು ಸಿದ್ಧಾಂತ ಶಿಖೋಪನಿಷತ್ತಿನಲ್ಲಿ ವಿಸ್ತಾರವಾಗಿ ಉಕ್ತವಾಗಿವೆ. ಶ್ರೀಕರಭಾಷ್ಯ (೧. ೨. ೧. ೬. ಸಂ. I. ಪು. ೨೧೦) ದಲ್ಲಿಯೂ ಸಹ ಈ ವಿಚಾರವು ವಿಶದವಾಗಿ ಸಮರ್ಥಿಸಲ್ಪಟ್ಟಿದೆ.

## (ಚ) ಕ್ರಿಯಾ-ಜ್ಞಾನಗಳಿಗೆ ಸಮುಸಮುಚ್ಚಯತ್ವ

ಈ ಸಿದ್ಧಾಂತದಲ್ಲಿ ಕರ್ಮವು ಸಕಾಮಕರ್ಮ ಮತ್ತು ನಿಷ್ಕಾಮಕರ್ಮ ಎಂದು ಎರಡು ವಿಧ. ಸ್ವರ್ಗಸ್ವರಾಜ್ಯಾದಿಗಳನ್ನು ಉದ್ದೇಶಿಸಿ ಮಾಡುವ ಕರ್ಮವು ಸಕಾಮಕರ್ಮಫಲವನ್ನು ಉದ್ದೇಶಿಸಿರುವುದರಿಂದ ಇದು ಪಶುಕರ್ಮ. ಇನ್ನು ಶಿವಾರ್ಪಣ-ಬುದ್ಧಿಯಿಂದ ಮಾಡುವ ಕರ್ಮಗಳು ನಿಷ್ಕಾಮಕರ್ಮಗಳು. ಆದರೆ ಸ್ವರ್ಗಸ್ವಾರಾಜ್ಯಾದಿಕರ್ಮಗಳನ್ನೂ ನಿಷ್ಕಾಮದಿಂದ ಮಾಡಿದರೆ ಅದಕ್ಕೆ ಚಿತ್ತಶುದ್ಧಿಯು ಮಾತ್ರವೆ ಫಲ. ಆದ್ದರಿಂದ ಅವು ಪತಿಕರ್ಮವೆನಿಸುವುದಿಲ್ಲ. ಇನ್ನು ಶಿವಾರ್ಪಣಬುದ್ಧಿಯಿಂದ ಮಾಡುವ ಶಿವಪೂಜಾ-ಧ್ಯಾನ-ಧಾರಣ-ಜಪಾನುಷ್ಠಾನಾದಿಕರ್ಮಗಳು ಮಾತ್ರ ಪತಿಕರ್ಮಗಳು. ಈ ಬಗೆಯ ಪತಿಕರ್ಮ ಮತ್ತು ಮೋಕ್ಷವಿಷಯಕವಾದ ಜ್ಞಾನ ಇವೆರಡೂ ಕೂಡಿಯೇ ಮುಕ್ತಿಗೆ ಕಾರಣ ; ಎಂದು ವೀರಶೈವದ ನಿಲವು.

## (ಛ) ಶಿವದೀಕ್ಷೆಯಲ್ಲಿ ಶಿಷ್ಯನಿಗೆ ಮಾಡುವ ಗುರೂಪದೇಶ ಮತ್ತು ಅದರ ಮಹತ್ವ

೧. ಇಂದಿನಿಂದ ನಿನ್ನ ಅಂಗವು ಶಿವದೀಕ್ಷೆಯಿಂದ ನಿರ್ಮಲವಾಗಿ, ನಿನಗೆ ಪ್ರಾಕೃತ ದೋಷಗಳ ಸಂಪರ್ಕವಿಲ್ಲವಾಗಿ, ಇನ್ನು ನೀನು ಶಿವಶರಣರ ಮಾರ್ಗದಲ್ಲಿ ಸಾವಧಾನದಿಂದ ಪ್ರವರ್ತಿಸು.

೨. ಬೆಳಿಗ್ಗೆ ಮತ್ತು ಸಂಜೆ ನಿಯಮದಿಂದ ಮಿಂದು, ಭಸ್ಮ-ರುದ್ರಾಕ್ಷಿಗಳನ್ನು ಧರಿಸಿ, ಶ್ರೀ : ಶಿವಪಂಚಾಕ್ಷರಿಯನ್ನು ಜಪಿಸುತ್ತಾ, ವಾಮಹಸ್ತದಲ್ಲಿರುವ ನಿನ್ನ ಇಷ್ಟಲಿಂಗವನ್ನು ಭಕ್ತಿಯಿಂದ ಪೂಜಿಸು.

೩. ಶೌಚದಿಂದ ಕಾಯವನ್ನು, ಸತ್ಯದಿಂದ ವಚನವನ್ನು, ಶಿವಸಂಕಲ್ಪದಿಂದ ಮನಸ್ಸನ್ನು ಶುದ್ಧಗೊಳಿಸಿ ನೀನು, ಇನ್ನು ಮೇಲೆ ಶಿವಾಚಾರದಲ್ಲಿ ಆಸಕ್ತಿಯನ್ನು ಹೊಂದು.

೪. ಗುರು-ಲಿಂಗ-ಜಂಗಮರ ಹೊರತು ಸ್ಥಾವರಲಿಂಗಾದಿಗಳಲ್ಲಿ, ಶಿವಪ್ರಸಾದದ ಹೊರತು ಪ್ರಾಕೃತ-ಅನ್ನಾದಿಗಳಲ್ಲಿ ನಿನಗೆ ಆಸಕ್ತಿ ಆಗದಿರಲಿ.

೫. ಪರಿಶುದ್ಧವಾದ ಯಾವುದಾದರೊಂದು ಕಾಯಕದಿಂದ ದ್ರವ್ಯವನ್ನು ಗಳಿಸಿ, ದಾಸೋಽಹಂಭಾವದಿಂದ ವರ್ತಿಸು.

೬. ಶಿವದೀಕ್ಷೆಯಿಂದ ಪವಿತ್ರರೂ, ಅಪ್ರಾಕೃತಾಚಾರಪರರೂ ಆದ ವೀರಶೈವರಲ್ಲಿ ಜಾತಿ-ವೃತ್ತಿ-ಕುಲಾಚಾರಗಳ ಭೇದವನ್ನು ಎಂದಿಗೂ ಎಣಿಸಬೇಡ.

೭. ಎಂದಾದರೂ ಶಿವಧರ್ಮದ ವಿಷಯದಲ್ಲಿ ನಿನಗೆ ಸಂದೇಹವು ಬಂದರೆ, ಶಿವಶಾಸ್ತ್ರ ಪಾರಂಗತರಾದ ಪೂರ್ವಾಚಾರ್ಯರ ಮತ್ತು ಸದಾಚಾರಿಗಳಾದ ಶಿವಶರಣರ ನಿರ್ಣಯವನ್ನು ಮಾನಿಸು.

೮. ಎಲ್ಲಿಯಾದರೂ ವೀರಶೈವಾಚಾರಕ್ಕೆ ಮತ್ತು ಶೈವಸಂಸ್ಕೃತಿಗೆ ಅಪಾಯ ಸಂಭವಿಸಿ ದರೆ ನೀನು ಪ್ರಾಣವನ್ನಾದರೂ ತೆತ್ತು ಅದಕ್ಕೆ ಪ್ರತಿಕಾರ ಮಾಡು.

೯. ಗುರುವಿನಲ್ಲಿಯೂ ಜಂಗಮದಲ್ಲಿಯೂ ವೈಷಮ್ಯವನ್ನು ಮಾಡದೆ, ಅವರಿಬ್ಬರ ಆಚಾರ-ಜ್ಞಾನರೂಪತೆಯನ್ನು ನಿನ್ನಲ್ಲಿ ಅಳವಡಿಸಿ, ಪಾದೋದಕ ಪ್ರಸಾದಗಳ ಪರಿಣಾಮವನ್ನು ಪಡೆ.

೧೦. ಹೀಗೆ ಷಟ್‌ಸ್ಥಲಮಾರ್ಗದಿಂದ ನಡೆದು, ಕ್ರಿಯೆಯನ್ನು ಜ್ಞಾನದಲ್ಲಿ ಮುಗಿಸಿ, ಲಿಂಗಾಂಗಸಾಮರಸ್ಯವೆಂಬ ಪರಮಾನಂದವನ್ನು ಹೊಂದು. ಇದೇ ಗುರುವಿನ ಆದೇಶ ; ಇದೇ ಗುರುವಿನ ಉಪದೇಶ.

## (ಜ) ವೀರಶೈವದ ಸಂಧ್ಯಾವಂದನ

ಅಂತಃಪ್ರಕಾಶಮಾನಸ್ಯ ಸಂವಿತ್ಸೂರ್ಯಸ್ಯ ಸಂತತಮ್ ।
ಮನಸಾ ಯದುಪಸ್ಥಾನಂ ತತ್ಸಂಧ್ಯಾವಂದನಂ ವಿದುಃ ॥

(– ವೇದಾಂತಸಾರ ವೀ. ಚಿಂತಾಮಣಿ, ಪು. ೧೫೫-೯೬)

ಒಳಗೆ ಬೆಳಗುವ ಜ್ಞಾನಸೂರ್ಯನನ್ನು ನಿರಂತರವೂ ಮನಃಪೂರ್ವಕವಾಗಿ ಅನುಸಂಧಾನ-ಮಾಡುವುದೇ ವೀರಶೈವದ ಸಂಧ್ಯಾವಂದನ.

## (ಝ) ವೀರಶೈವ-ಲಿಂಗಾರ್ಚನ-ವೈಶಿಷ್ಟ್ಯ

"ವತ್ಸ, ಪ್ರತಿನಿತ್ಯವೂ ತ್ರಿಕಾಲದಲ್ಲಿ ಭಕ್ತಿಯಿಂದ ಲಿಂಗಾರ್ಚನವನ್ನು ಮಾಡು. ಪೂಜಾ ದ್ರವ್ಯಗಳನ್ನು ಶೋಧಿಸಿ, ಮಡಿಯಿಂದ ಒಂದೇ ಮನಸ್ಸಿನಿಂದ ಲಿಂಗವನ್ನು ಆರಾಧಿಸು. ಪೂಜಾದ್ರವ್ಯಗಳು ಯಾವುವೆಂದರೆ– ಸಮತ್ವವೆಂಬ ನೀರಿನಿಂದ ಸ್ನಾನ ; ಪೂರ್ಣಭಾವವೇ ವಸ್ತ್ರ ; ತ್ರಿಶಕ್ತಿಗಳೆಂಬ ಗುಣ

ಗಳಿಂದ ಕೂಡಿದುದೇ ಯಜ್ಞೋಪವೀತ ; ವಿದ್ಯೆಯೇ ಸುಗಂಧ ; ಭೂತದಯೆಯೇ ಅಕ್ಷತೆ ; ಶಬ್ದಾದಿ-ವಿಷಯಗಳೇ ಪುಷ್ಪಗಳು ; ಪ್ರಜ್ಞೆ-ಮನಸ್ಸು-ಅಹಂಕೃತಿಚಿತ್ರಗಳೇ ಧೂಪ ; ಶ್ರೋತ್ರಾದಿ-ಪಂಚೇಂದ್ರಿಯಗಳೇ ದೀಪ ; ಸದ್ಭಾವನವೆಂಬ ತೈಲತುಂಬಿದ್ದು ಆ ಆರತಿ ; ಸುಖ-ದುಃಖದೂರವಾದ ಜೀವೋಪಹಾರವೇ ನೈವೇದ್ಯ ; ಗುಣತ್ರಯವೇ ತಾಂಬೂಲ ; ಪ್ರಾಣಾರ್ಪಣವೇ ನಮಸ್ಕಾರ ; ಶಾಂತಿಯೇ ಪುಷ್ಪಾಂಜಲಿ ; ಏಕಾಗ್ರತೆಯೇ ವಿಸರ್ಜನ. ಹೀಗೆ ಒಳಗಿನ ವಸ್ತುಗಳಿಂದ ಕೂಡಿದ ಪ್ರಾಣಲಿಂಗ ಪೂಜೆಯನ್ನು ಮಾಡಿ ಇಷ್ಟಲಿಂಗವನ್ನು ಯಾವಾಗಲೂ ವಸ್ತ್ರದಲ್ಲಿ ಶರೀರದ ಮೇಲೆ ಧರಿಸಿರಬೇಕು.

## ವೀರಶೈವ ಮತ್ತು ಇತರ-ದರ್ಶನಗಳು

### ೧) ಬ್ರಹ್ಮಾದ್ವೈತ-ಶಿವಾದ್ವೈತಗಳಿಗಿರುವ ವೈಶಿಷ್ಟ್ಯ

| | ಬ್ರಹ್ಮಾದ್ವೈತ | ಶಿವಾದ್ವೈತ |
|---|---|---|
| ೧. | ಬ್ರಹ್ಮವು ನಿರ್ವಿಶೇಷ | ಬ್ರಹ್ಮವು ಸವಿಶೇಷ |
| ೨. | ಬ್ರಹ್ಮವಿವರ್ತವೇ ಜಗತ್ತು | ಬ್ರಹ್ಮದ ಪರಿಣಾಮ ಜಗತ್ತು |
| ೩. | ಜಗತ್ತು ಮಿಥ್ಯೆ | ಜಗತ್ತು ಸತ್ಯ |
| ೪. | ಜ್ಞಾನದಿಂದಲೇ ಮುಕ್ತಿ | ಜ್ಞಾನ-ಕ್ರಿಯಾಸಮುಚ್ಚಯವೇ ಮುಕ್ತಿಗೆ ಕಾರಣ |
| ೫. | ಕೈವಲ್ಯವೇ ಮುಕ್ತಿ | ಸಾಮರಸ್ಯವೇ ಮುಕ್ತಿ |

### ೨). ಲಕುಲೀಶ-ಪಾಶುಪತ ಮತ್ತು ವೀರಶೈವ

| | ಲಕುಲೀಶಪಾಶುಪತ | ವೀರಶೈವ |
|---|---|---|
| ೧. | ಪತಿ-ಪಾಶ-ಯೋಗ-ವಿಧಿ-ದುಃಖಾಂತ ಎಂದು ಪದಾರ್ಥಗಳು ಐದು. | ಪತಿ-ಪಶು-ಪಾಶ ಎಂದು ಪದಾರ್ಥಗಳು ಮೂರು. |
| ೨. | ಪಶುತ್ವಕ್ಕೆ ಮೂಲವಾದ ಮಲಗಳು ಐದು. ಅವು ಮಿಥ್ಯಾಜ್ಞಾನ-ಅಧರ್ಮ-ಸಕ್ತಿ-ಹೇತು-ಚ್ಯುತಿ ಎಂದು. | ಆಣವ-ಮಾಯೀಯ-ಕಾರ್ಮ ಎಂದು ಮಲಗಳು ಮೂರು. |
| ೩. | ಮಲಕ್ಷಪಣೋಪಾಯಗಳು ಐದು– ವಾಸ-ಚರ್ಯಾ-ಜಪಧ್ಯಾನ-ಸದಾರುದ್ರಸ್ಮೃತಿ-ಪ್ರಸಾದ ಎಂದು. | ವೇಧಾ-ಮನು-ಕ್ರಿಯಾ ಎಂಬ ಈ ದೀಕ್ಷಾತ್ರಯದಿಂದ ಮಲಧ್ವಂಸ. |
| ೪. | ಕ್ರಾಥನ-ಸ್ಪಂದನ, ಮಂಟನ-ಶೃಂಗಾರಣ, ಅಪಿತತ್ಕರಣ-ಅಪಿತದ್ಭಾಷಣ ಮುಂತಾದವು ಸಾಧನಮಾರ್ಗಗಳು. | ಅಷ್ಟಾವರಣ-ಪಂಚಾಚಾರಗಳು ಸಾಧನ ಮಾರ್ಗಗಳು. |
| ೫. | ಆತ್ಮನು ವಿಭು. | ಆತ್ಮನು ಶಿವಾಂಶ. |
| ೬. | ವಿಧಿಯ ಅನುಷ್ಠಾನದಿಂದ ಪಶು-ಪತಿ ಸ್ವರೂಪವನ್ನು ಹೊಂದುತ್ತಾನೆ. | ಷಟ್‌ಸ್ಥಲ-ಮಾರ್ಗದಿಂದ ಶಿವತ್ವಾಭಿವ್ಯಕ್ತಿಯಾಗುತ್ತದೆ. |

| | | |
|---|---|---|
| ೬. | ಇಲ್ಲಿ ಮೋಕ್ಷವು ಸುಖಸ್ವರೂಪ. ಶಿವಸಾಮ್ಯರೂಪವಾದ ಸರ್ವಜ್ಞತ್ವಾದಿ ಪ್ರಾಪ್ತಿಯೇ ಮೋಕ್ಷ. | ನದೀ-ಸಮುದ್ರನ್ಯಾಯ-ಶಿಖಿ-ಕರ್ಪೂರನ್ಯಾಯ-ಜಲೀ-ಜಲಮಿವ ನ್ಯಾಯ, ಲೋಹ-ರಸನ್ಯಾಯ ಮತ್ತು ಭ್ರಮರ-ಕೀಟನ್ಯಾಯದಂತೆ ಲಿಂಗಾಂಗ ಸಾಮರಸ್ಯಾತ್ಮಕಮೋಕ್ಷ. |

## ೩. ಶೈವ-ವೈಷ್ಣವ-ವಿಶಿಷ್ಟಾದ್ವೈತ — ಶಕ್ತಿವಿಶಿಷ್ಟಾದ್ವೈತ

| | | |
|---|---|---|
| ೧. | ಬ್ರಹ್ಮ ಸಗುಣ. | ಸ್ಥಲಾತ್ಮಕಬ್ರಹ್ಮವು ಸಕಲ-ನಿಷ್ಕಲ. |
| ೨. | ಶ್ರೀಕಂಠಮತದಲ್ಲಿ ಅಂತರ್ಗಣಿಕಾಭೇದ ; ಶ್ರೀರಾಮಾನುಜಮತದಲ್ಲಿ ಅಪೃಥಕ್ ಸಿದ್ಧಿ ಅಥವಾ ಸ್ವಗತಭೇದ. | ಶಿವ-ಶಕ್ತಿಗಳಿಗೆ ಅವಿನಾಭಾವಸಂಬಂಧ ಮತ್ತು ಜೀವನು ಶಿವಾಂಶ |
| ೩. | ಶಿವಸಾರೂಪ್ಯ ಅಥವಾ ವಿಷ್ಣುಸಾರೂಪ್ಯವೇ ಮೋಕ್ಷ | ಲಿಂಗಾಂಗಸಾಮರಸ್ಯವೇ ಮೋಕ್ಷ. |
| ೪. | ಬ್ರಹ್ಮ-ಜೀವರಿಗೆ ಭೇದಾಭೇದಕಲ್ಪನ. | ಶಿವ-ಜೀವರಿಗೆ ಸಂಸಾರ ದೆಶೆಯಲ್ಲಿ ಸ್ವಾಭಾವಿಕ-ಭೇದ; ಮುಕ್ತಿದೆಸೆಯಲ್ಲಿ ಪಾರಮಾರ್ಥಿಕ ಅಭೇದ. |

೫. ಈ ಉಭಯವಿಶಿಷ್ಟಾದ್ವೈತಕ್ಕಿಂತ ವೀರಶೈವರ ಸಾಧನಮಾರ್ಗವು ವಿಲಕ್ಷಣ

## ೪. ಶ್ರೀಕಂಠ-ರಾಮಾನುಜಮತಗಳಿಗೆ ಇರುವ ಸಾಮ್ಯ

| | | |
|---|---|---|
| ೧. | ಶಕ್ತಿವಿಶಿಷ್ಟಾದ್ವೈತ | ಚಿದಚಿದ್ವಿಶಿಷ್ಟಾದ್ವೈತ. |
| ೨. | ಸಂಸಾರದೆಸೆಯಲ್ಲಿ ಅತ್ಯಂತ ಭೇದ ; ಮುಕ್ತಿ ದೆಶೆಯಲ್ಲಿ ವಿಶಿಷ್ಟಾಭೇದ | ಜೀವ-ಜಗತ್-ಬ್ರಹ್ಮರಿಗೆ ಅತ್ಯಂತ ಭೇದ ; ವಿಶಿಷ್ಟಾಭೇದ. |

೩. ಪರಿಣಾಮವಾದ, ಮತ್ತು ಜಗತ್ಸತ್ಯತ್ವವಾದಗಳೆರಡು ಮತಗಳಿಗೂ ಸಮಾನ.

| | | |
|---|---|---|
| ೪. | ಭೇದಾಭೇದಾತ್ಮಕ ಸನಾತನ ಶಕ್ತಿಯು ಬ್ರಹ್ಮನಿಷ್ಠ. ಮುಕ್ತಿಯಲ್ಲಿ ಜೀವ-ಬ್ರಹ್ಮರಿಗೆ ಅಭೇದ. | ಬ್ರಹ್ಮನಿಗೆ ಅತ್ಯಂತ ಭಿನ್ನವಾದ ಚೇತನಾ-ಚೇತನರೂಪ ಪದಾರ್ಥದ್ವಯವಿಶಿಷ್ಟತ್ವ. ಪ್ರಳಯದಲ್ಲಿ ಹಾಗೂ ಮುಕ್ತಿಕಾಲದಲ್ಲಿಯೂ ಕೂಡ ಜೀವನು ಭೇದವಾಗಿಯೇ ಇರುವನು. |
| ೫. | ಶಕ್ತಿವಿಶಿಷ್ಟ ಬ್ರಹ್ಮನಿಗೆ ಉಪಾದಾನತ್ವ. | ಚಿದಚಿತ್ತುಗಳಿಗೆ ಬ್ರಹ್ಮ ಉಪಾದಾನ. |

೬. ಈ ಎರಡೂ ಮತಗಳಲ್ಲಿ ಒಂದೆಡೆ ಶಿವಪಾರಮ್ಯ, ಮತ್ತೊಂದೆಡೆ ವಿಷ್ಣು ಪಾರಮ್ಯವು ಮಾತ್ರ ಮುಖ್ಯ ವ್ಯತ್ಯಾಸ.

## ೫. ಭಾಸ್ಕರಾಚಾರ್ಯಮತ ಮತ್ತು ವಿಶೇಷಾದ್ವೈತ

ಅಚಿತ್-ಬ್ರಹ್ಮರಿಗೆ ಭೇದಾಭೇದಗಳು ಸ್ವಾಭಾವಿಕ ; ಚಿತ್-ಬ್ರಹ್ಮರಿಗೆ ಅಭೇದವೇ ಸ್ವಾಭಾವಿಕ. ಭೇದವು ಔಪಾಧಿಕ-ಜ್ಞಾನಾಧಿಕರಣ ಭಾಸ್ಕರಭಾಷ್ಯದಲ್ಲಿ– ಜೀವನಿಗೆ ಬ್ರಹ್ಮರೂಪವು ಸ್ವಾಭಾವಿಕ ; ಜೀವೇತರಕ್ಕೆ ಇದು ಔಪಾಧಿಕ; ಎಂದೂ, ಅಂಶಾಧಿಕರಣದಲ್ಲಿ– "ಅವನು ಭಿನ್ನಾಭಿನ್ನರೂಪ ; ಅಭಿನ್ನರೂಪವು ಸ್ವಾಭಾವಿಕ; ಭಿನ್ನತ್ವವು ಔಪಾಧಿಕ; ಎಂದೂ, ಅವಿಭಾಗಾಧಿಕರಣದಲ್ಲಿಯೂ ಕೂಡ ಘಟವು ಒಡೆದರೆ ಘಟಾಕಾಶವು ವಿಲೀನವಾಗುವಂತೆ. ಅದರಂತೆ ಇಲ್ಲಿಯೂ ಕೂಡ ಜೀವ-ಪರಮರಿಗೆ ಅಭೇದವು ಸ್ವಾಭಾವಿಕ ; ಭೇದವು ಔಪಾಧಿಕ ; ಜೀವಭಾವವು ಅಳಿದರೆ ಭೇದವು ಅಳಿಯುತ್ತದೆ.

ಒಟ್ಟಿನಲ್ಲಿ ಭೇದಶ್ರುತಿಗಳು ಔಪಾಧಿಕ ಭೇದವುಳ್ಳವುಗಳು. ಆದ್ದರಿಂದ ಭೇದಶ್ರುತಿಗಳು ಔಪಚಾರಿಕವೆಂದಾಯಿತು. ಇದರಿಂದ ಉಭಯಶ್ರುತಿಗಳಿಗೂ ಸ್ವಾಭಾವಿಕತ್ವವಿಲ್ಲದಿರುವುದೇ ಅಸ್ವಾರಸ್ಯ. ಆದ್ದರಿಂದ ಜೀವ-ಬ್ರಹ್ಮರಿಗೆ ಭೇದಾಭೇದ-ವಿಷಯದಲ್ಲಿ ಸರ್ವಶ್ರುತಿಸಮನ್ವಯವಿಲ್ಲ. ಅದಕ್ಕಾಗಿಯೇ ಉಭಯಶ್ರುತಿಗಳಿಗೂ ಸಮನ್ವಯವನ್ನು ಹೇಳುವ ವಿಶೇಷಾದ್ವೈತವನ್ನು ಅಂಗೀಕರಿಸಬೇಕು.

೬. ಯಾದವಪ್ರಕಾಶಮತ– ವಿಶೇಷಾದ್ವೈತ

ಈ ಆಚಾರ್ಯರು ಪೂರ್ವಾಶ್ರಮದಲ್ಲಿ ಶ್ರೀ ರಾಮಾನುಜರ ಗುರುಗಳು. ಇವರ ಮತದಲ್ಲಿ ಮುಕ್ತಿದಶೆಯಲ್ಲಿಯೂ ಕೂಡ ಜೀವ ಪರಮರಿಗೆ ಭೇದಾಭೇದವೇ ಉಕ್ತವಾಗಿದೆ. ಇದನ್ನು ವಿಶೇಷಾದ್ವೈತವು ಒಪ್ಪುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ ನದೀಸಮುದ್ರನ್ಯಾಯದಿಂದ ಅಭೇದವೇ ಪ್ರತಿಪಾದಿತವಾಗಿದೆ. ಆದ್ದರಿಂದಲೇ ಶಿವಾದ್ವೈತವು ಮುಕ್ತಿದಶೆಯಲ್ಲಿ ಕೇವಲ ಅಭೇದವನ್ನು ಒಪ್ಪುವುದೇ ಹೊರತು ಭೇದಾಭೇದವನ್ನಲ್ಲ ; ಎನ್ನುತ್ತದೆ. ಇದೇ ಇವೆರಡಕ್ಕಿರುವ ಅಂತರ.

ಈ ದಿಶೆಯಲ್ಲಿ ಶ್ರೀಪತಿಪಂಡಿತಭಗವತ್ಪಾದಾಚಾರ್ಯರ ವಿಶೇಷಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತದರ್ಶನವು ಹಿಂದೆ ಉದಾಹರಿಸಿದ ಶ್ರೀಶಂಕರಭಗವತ್ಪಾದರ ಕೇವಲಾದ್ವೈತ ಶೈವಸಿದ್ಧಾಂತ ದ್ವೈತಶೈವಾದಿ-ಸಮ್ಮತವಾದ ದ್ವೈತಕ್ಕಿಂತ, ಶ್ರೀಕಂಠ-ರಾಮಾನುಜಸಮ್ಮತವಾದ ವಿಶಿಷ್ಟಾದ್ವೈತಕ್ಕಿಂತ, ಲಕುಲೀಶ-ಪಾಶುಪತಸಮ್ಮತವಾದ ದ್ವೈತಾದ್ವೈತಕ್ಕಿಂತ, ಭಾಸ್ಕರ-ಯಾದವಪ್ರಕಾಶಪ್ರತಿಪಾದಿತವಾದ ಭೇದಾಭೇದಕ್ಕಿಂತ ವಿಲಕ್ಷಣವಾದ್ದರಿಂದ ವಿಶೇಷಾದ್ವೈತವು ಈ ಎಲ್ಲ ದರ್ಶನಗಳಿಗಿಂತ ಬೇರ್ಪಡುವುದರಿಂದ ಈ ದರ್ಶನಕ್ಕೆ ಸರ್ವೋತ್ತರತ್ವವು ಯುಕ್ತವೇ ಆಗಿದೆ.

ಪೈಂಗಳ ಮಾಘ ಬಹುಳ ಅಷ್ಟಮಿ
೨-೩-೧೯೭೮

ಸಹೃದಯ-ವಿದ್ವಜ್ಜನವಿಧೇಯ.
**ಎಂ. ಜಿ. ನಂಜುಂಡಾರಾಧ್ಯ,**
ನಿವೃತ್ತ ಶಕ್ತಿವಿಶಿಷ್ಟಾದ್ವೈತ ಪ್ರಾಚಾರ್ಯ,
ಶ್ರೀಮನ್ಮಹಾರಾಜಸಂಸ್ಕೃತಮಹಾವಿದ್ಯಾಲಯ,
ಮೈಸೂರು.

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 3755

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 2420 002.

